## ಬೆರಗು ವರ್ಣಗಳಿಂದ ಕಲಾಕೃತಿಗಳನ್ನು ಶ್ರೀಮಂತಗೊಳಿಸುವ

# ಮಲೆನಾಡ ಕಲಾಪ್ರತಿಭೆ - ಎ. ಆರ್. ಕೃಷ್ಣ



**ಎ.** ಆರ್. ಕೃಷ್ಣ ಕಾರವಾರದ ಟ್ಯಾಗೋರ್ ಚಿತ್ರಕಲಾ ಮಹಾ ವಿದ್ಯಾಲಯದಲ್ಲಿ ಡ್ರಾಯಿಂಗ್ ಡಿಪ್ಲೋಮಾ ಹಾಗೂ ಆರ್ಟ್ ಮಾಸ್ಟರ್ ಕಲಾ ಪದವಿ ಪೂರೈಸಿ ಇದೀಗ ಶಿರಸಿಯಲ್ಲೇ 'ಆರ್ಟ್ ಪಾಯಿಂಟ್' ಎನ್ನುವ ಕಲಾಮಳಿಗೆ ತೆರೆದು ಕಲಾ ಚಟುವಟಿಕೆಯಲ್ಲಿ ತೊಡಗಿದ್ದಾರೆ. ಕಲಾಶಾಲೆಯಲ್ಲಿ ಕಲಾಗುರುಗಳ ಮಾರ್ಗದರ್ಶನದ ಜೊತೆಗೆ ಸತತ ಪ್ರಯತ್ನ ಹಾಗೂ ಕಲಾವಿದರ ಸಂಪರ್ಕದೊಂದಿಗೆ ಚಿತ್ರಕಲೆಯಲ್ಲಿ ಎಳೆಯ ವಯಸ್ಸಿನಲ್ಲೇ ಹಿರಿಯ ಸಾಧನೆ ಮಾಡಿದ್ದಾರೆ.

ಭಾವಚಿತ್ರ, ಅಣಕಚಿತ್ರ (ಕ್ಯಾರಿಕೇಚರ್)ಗಳನ್ನು ತೈಲವರ್ಣ ಹಾಗೂ ಪೆನ್ಸಿಲ್ ಶೇಡ್‌ನಲ್ಲಿ ಯಥಾವತ್ತಾಗಿ ಚಿತ್ರಿಸುವುದರಲ್ಲಿ ಸಾಧನೆ ಮಾಡಿರುವ ಕೃಷ್ಣ, ಜಲವರ್ಣ ಹಾಗೂ ಗ್ಲಾಸ್ ಪೇಂಟಿಂಗ್ ಕಲೆಯಲ್ಲಿ ಹೆಚ್ಚಿನ ಸಾಧನೆ ಮಾಡಿದ್ದಾರೆ. ಇವರು ರಚಿಸಿದ ನೂರಾರು ಗ್ಲಾಸ್ ಪೇಂಟಿಂಗ್‌ಗಳು ಈಗಾಗಲೇ ಕಲಾಸಕ್ತರ ಮನೆ ತುಂಬಿವೆ.

ಕರಾವಳಿ ಉತ್ಸವ, ಕದಂಬೋತ್ಸವ ಹಾಗೂ ಶಿರಸಿಯ ಉ. ಕ. ಜಿಲ್ಲಾ ಚಿತ್ರಕಲಾ ಪರಿಷತ್ ಏರ್ಪಡಿಸುವ ಕಲಾ ಪ್ರದರ್ಶನಗಳಲ್ಲಿ ತಮ್ಮ ಆಕರ್ಷಕ ಕಲಾಕೃತಿಗಳನ್ನು ಪ್ರದರ್ಶಿಸಿ ಜನರ ಮೆಚ್ಚುಗೆ ಗಳಿಸಿರುವ ಕೃಷ್ಣ ಚಿತ್ರಕಲಾ ಕ್ಷೇತ್ರದ ಭರವಸೆಯ ಯುವ ಪ್ರತಿಭೆ.



ಮಾಧ್ಯಮ - ತೈಲವರ್ಣ (ಗ್ಲಾಸ್ ಪೇಂಟಿಂಗ್)

ಚಿತ್ರ-ಮಾಹಿತಿ : ಜಿ. ಎಂ. ಬೊಮ್ನಳ್ಳಿ
ವ್ಯಂಗ್ಯಚಿತ್ರಕಾರ
ಅಂ : ಬೊಮ್ನಳ್ಳಿ - 581 402, ತಾ: ಶಿರಸಿ (ಉ.ಕ.)



ಮಾಧ್ಯಮ - ತೈಲವರ್ಣ (ಗ್ಲಾಸ್ ಪೇಂಟಿಂಗ್)



ಮಾಧ್ಯಮ - ತೈಲವರ್ಣ (ಗ್ಲಾಸ್ ಪೇಂಟಿಂಗ್)

# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...




ಚಿತ್ರಗಳು : ಹರಿಣಿ, ರವೀಂದ್ರ, ಶ್ರೀಹರಿ, ಮೋನಪ್ಪ, ಆದರ್ಶ ಪೈ, ರಾಂಚಂದ್ರ ಕೊಪ್ಪಲು

ಮುಖಚಿತ್ರ : ಮಹಾತ್ಮ ಗಾಂಧಿ. ಚಿತ್ರ : ಸುದೇಶ್ ಮಹಾನ್

ಚಿತ್ರ ಸೌಜನ್ಯ : ಗಾಂಧಿ ಅಧ್ಯಯನ ಕೇಂದ್ರ

ಒಳಚಿತ್ರ : ನಿಸಾರ್ ಅಹಮದ್, ಚಿತ್ರ ಸೌಜನ್ಯ : ಉದಯ್ ಜಾದೂಗಾರ್

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

"ವಂದೇ ಮಾತರಂ ಹೇಳು, ಇಲ್ಲ ಪ್ರಾಣ ಕಳೆದುಕೋ.'' ಇದು ಇಂದಿನ ಕಿತಾಪತಿಯಲ್ಲ, ಬಂಕಿಂಚಂದ್ರ ಚಟರ್ಜಿಯವರ ಕಾದಂಬರಿ 'ಆನಂದಮಠ'ದಷ್ಟು ಪುರಾತನವಾದದ್ದು. ಅಲ್ಲಿ ಬರುವ ಕೆಲವು ವಾಕ್ಯಗಳು ಹೀಗಿವೆ: "ಆ ರಾತ್ರಿಯಲ್ಲಿ ಬೆಳಕು ಹರಿಯುವವರೆಗೂ ಹರಿಧ್ವನಿಯಿಂದ ವೀರಭೂಮಿಯು ಪರಿಪೂರ್ಣವಾಗಿ ತುಂಬಿಹೋಯಿತು. ಸಂತಾನರು ಗುಂಪು ಗುಂಪಾಗಿ ಎಲ್ಲೆಲ್ಲಿಯೂ ಉಚ್ಚಸ್ವರದಿಂದ, ಕೆಲವರು 'ವಂದೇ ಮಾತರಂ', ಕೆಲವರು 'ಜಗದೀಶ ಹರೇ' ಹಾಡಿಕೊಂಡು ತಿರುಗುತಲಿದ್ದರು. ಕೆಲವು ಮಂದಿ ಶತ್ರು ಸೇನೆಯ ಮಧ್ಯೆ ಬಿದ್ದಿದ್ದ ಅಸ್ತ್ರಗಳನ್ನೂ, ಕೆಲವರು ವಸ್ತ್ರಗಳನ್ನೂ ಅಪಹರಣ ಮಾಡಲಾರಂಭಿಸಿದರು. ಕೆಲವರು ಮೃತದೇಹದ ಮುಖದಲ್ಲಿ ಪದಾಘಾತವನ್ನು ಮಾಡುತ್ತ, ಕೆಲವರು ಗ್ರಾಮಾಭಿಮುಖವಾಗಿಯೂ, ಕೆಲವರು ನಗರಾಭಿಮುಖವಾಗಿಯೂ ಹೊರಟರು. ಸಿಕ್ಕಿದ ಪ್ರಯಾಣಿಕರನ್ನೂ ಗೃಹಸ್ಥರನ್ನೂ ಹಿಡಿದುಕೊಂಡು 'ವಂದೇ ಮಾತರಂ' ಹೇಳು, ಇಲ್ಲದಿದ್ದರೆ ಪ್ರಾಣದಿಂದ ಬಿಡುವುದಿಲ್ಲವೆಂದು ಪೀಡಿಸುವುದಕ್ಕಾರಂಭಿಸಿದರು....'' (ಬಿ. ವೆಂಕಟಾಚಾರ್ಯರ ಅನುವಾದ, ಸಾಹಿತ್ಯ ಮಂದಿರ, ಬೆಂಗಳೂರು-೧೯; ೧೯೭೧, ಪುಟ ೧೭೦).

ಅಂದಿನ ಮಾತು ಮತ್ತೆ ಇಂದು ಮರುಕಳಿಸುತ್ತಿರುವುದು ರಾಜಕೀಯ, ಸಾಂಸ್ಕೃತಿಕ ಮತ್ತು ಬೌದ್ಧಿಕ ಅನಾರೋಗ್ಯದ ಚಿಹ್ನೆ. ಇಲ್ಲಿ ಒಂದೆರಡು ವಿಷಯಗಳನ್ನು ಗಮನಿಸಬೇಕು : (ಅ) ಬಂಕಿಂಚಂದ್ರರ ಕಾದಂಬರಿಯಲ್ಲಿ ಹಾಗೂ ನೈಜ ಇತಿಹಾಸದ ನೆಲೆಯಲ್ಲಿ ಸಂತಾನರ ಆಂದೋಳನವು ಯಶಸ್ವಿಯಾಗದೆ ಉಳಿದ ಒಂದು ಘಟನೆ; (ಆ) ಅಂದಿನ ಘೋಷಣೆಯು ನಮ್ಮ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಬಹುವಾಗಿ ಬಳಕೆಗೆ ಬಂದಿತು; ಆದರೆ ಇಡಿಯಾಗಿ ಆ ಹಾಡನ್ನು ಸ್ವೀಕರಿಸಿದ್ದು ಕಡಿಮೆ; ಮೂಲತಃ 'ವಂದೇ ಮಾತರಂ' ಎಂಬುದರಷ್ಟೇ ಹೆಚ್ಚು ಪ್ರಚಲಿತವಾಗಿದ್ದಿತು; (ಇ) ಎಲ್ಲೋ ಒಂದು ಗುಂಪಿನಲ್ಲಿ ಕುಳಿತು ಬಂಕಿಂಚಂದ್ರರ ಹಾಡನ್ನು ಗಾಯನ ಮಾಡುವುದಕ್ಕೂ ಸಾರ್ವತ್ರಿಕ ಮೆರವಣಿಗೆ ಮತ್ತು ಪ್ರತಿಭಟನೆಗಳಲ್ಲಿ ಅದನ್ನು ಘೋಷಣೆಯಾಗಿ ಸ್ವೀಕರಿಸುವುದಕ್ಕೂ ವ್ಯತ್ಯಾಸವಿದೆ; ಮತ್ತು (ಈ) ಅಂದು ಸಾರ್ವಜನಿಕ ಹೋರಾಟಗಳಲ್ಲಿ ಭಾಗಿಗಳಾಗಿ 'ವಂದೇ ಮಾತರಂ' ಘೋಷಿಸದೆ ದೂರ ಉಳಿದಿದ್ದವರು ಇಂದು ಆ ಹಾಡಿನ ಘನತೆ-ಗೌರವಗಳ ಬಗ್ಗೆ ಉಗ್ರವಾಗಿ ಮಾತನಾಡುವುದು ಒಂದು ಮೋಜಿನ ಪ್ರಸಂಗ.

ಬಂಕಿಂಚಂದ್ರರ ಅಂದಿನ ಚಾರಿತ್ರಿಕ ಹಿನ್ನೆಲೆಯಲ್ಲಿ ಸಿರಾಜುದ್ದೌಲ ಮತ್ತು ಮೀರ್ ಜಾಫರರು ಬ್ರಿಟಿಷ್ ವಸಾಹತುದಾರರಿಗಿಂತಲೂ ಹೆಚ್ಚು ಪಾಪಿಗಳು ಮತ್ತು ವೈರಿಗಳು. ಈ ರೀತಿಯ ತುಲನೆಯು ಇಂದಿನ ಚಾರಿತ್ರಿಕ ಘಟ್ಟದಲ್ಲಿ ಪ್ರಸ್ತುತವೆನಿಸುವುದಿಲ್ಲ. ಇಬ್ಬರೂ ಕಡು ಪಾಪಿಗಳೇ, ಇಬ್ಬರೂ ಜನದ್ರೋಹಿಗಳೇ, ಇಬ್ಬರೂ ದೇಶದ ವೈರಿಗಳೇ. ಹಾಗೆ ಹೇಳುವಾಗ ಅವರವರ ಮತಧರ್ಮಗಳು ಗಣನೆಗೆ ಬರಬೇಕಾಗಿಲ್ಲವಾದ್ದರಿಂದ ಇಂದು ಕೆಲವು ಮತಧರ್ಮೀಯರನ್ನು ಆ ಮತಕ್ಕೆ ಸೇರಿದ್ದಾರೆಂಬ ಕಾರಣಕ್ಕೆ ಪಾಪಿಗಳು, ವೈರಿಗಳು, ಎಂದು ದೂಷಿಸುವುದು ಮೂರ್ಖತನವಾದೀತು. ಅಂತೆಯೇ ಆ ಮತಧರ್ಮೀಯರು ಮೀರ್‌ಜಾಫರ್ ಅಥವಾ ಬ್ರಿಟಿಷರೊಡನೆ ಸಮೀಕರಿಸಿಕೊಳ್ಳುವುದು ಸಹ ಖಂಡನೀಯವಾಗುತ್ತದೆ. ಟೋನಿ ಬ್ಲೇರ್ ದ್ರೋಹಿಯಾಗುವುದು ಅವನು ಕ್ರೈಸ್ತಮತದವನಾದ್ದರಿಂದ ಅಲ್ಲ, ಬೇರೆ ರಾಷ್ಟ್ರಗಳ ಮೇಲೆರಗುವುದು ಅವನ ಸಂಪ್ರದಾಯವಾಗಿರುವುದರಿಂದ. ಬಂಕಿಂಚಂದ್ರರಿಗೆ ಸಾಂಪ್ರದಾಯಿಕ ಶಿಕ್ಷಣ ಮತ್ತು ಮೌಲ್ಯಗಳ ಬಗ್ಗೆ ಸಕಾರಣವಾಗಿ ಜಿಗುಪ್ಸೆ ಮತ್ತು ಕೋಪ ಇದ್ದುದನ್ನು ಅವರ ಬೇರೆ ಬರಹಗಳಿಂದಲೂ ತಿಳಿದುಕೊಳ್ಳಬಹುದು. ಅಂತಹ ಬಿಗಿಯಾದ ಸಾಂಪ್ರದಾಯಿಕ ವ್ಯವಸ್ಥೆಯನ್ನು ಪುಡಿಗಟ್ಟಲು ಆಂಗ್ಲ ಶಿಕ್ಷಣ, ವಿಜ್ಞಾನದ ಅಧ್ಯಯನ ಮುಂತಾದುವೆಲ್ಲಾ ಅವರಿಗೆ ಸಾಧನಗಳಾಗಿ ತೋರಿದ್ದುವು. ಆದ್ದರಿಂದ ಅವರು ತಮ್ಮ ಅಂದಿನ ತೀವ್ರ ಹತಾಶೆಯನ್ನು ಆಂಗ್ಲರ ಅಧಿಕಾರವನ್ನು ಸ್ವಾಗತಿಸುವ ಮೂಲಕ ಪರಿಹರಿಸಿಕೊಂಡರು. ಆಂಗ್ಲರನ್ನು ವಿರೋಧಿಸುವ ಆಕಾಂಕ್ಷೆ ಬಂಕಿಂಚಂದ್ರರಲ್ಲಿ ಇರಲಿಲ್ಲವೆಂದು ಇದರರ್ಥವಲ್ಲ. ಅದಕ್ಕೆ 'ಆನಂದಮಠ'ದಲ್ಲಿಯೇ ಸೂಚನೆಗಳಿವೆ. ಈ ಸಂಬಂಧದಲ್ಲಿ ಆ ಕಾದಂಬರಿಯ ಕೆಲವು ಭಾಗಗಳನ್ನು ಗಮನಿಸಬೇಕು :

**ಸತ್ಯಾನಂದ** : ಮುಸಲಮಾನರ ರಾಜ್ಯವು ಧ್ವಂಸವಾಯಿತು. ಆದರೆ ಹಿಂದೂ ರಾಜ್ಯವು ಸ್ಥಾಪಿತವಾಗಲಿಲ್ಲ. ಈಗಲೂ ಕಲಕತ್ತೆಯಲ್ಲಿ ಇಂಗ್ಲಿಷರು ಪ್ರಬಲವಾಗಿದ್ದಾರೆ.

**ಚಿಕಿತ್ಸಕ** : ಹಿಂದೂ ರಾಜ್ಯವು ಈಗ ಸ್ಥಾಪಿತವಾಗುವುದಿಲ್ಲ. ಈಗ ನೀನು ಇಲ್ಲಿದ್ದರೆ ಅನಗತ್ಯವಾಗಿ ನರಹತ್ಯೆಗಳಾಗುತ್ತವೆ. ಅದು ಕಾರಣ ಹೊರಡು.

..............


೯ನೇ ಪುಟಕ್ಕೆ



ತಿಂಗಳ ಪತ್ರಿಕೆ

# ಹೊಸತು

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ


ಸಂಪುಟ-೮ ಸಂಚಿಕೆ-೩ ಅಕ್ಟೋಬರ್ ೨೦೦೬

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ: ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
e-mail : navakarnataka@vsnl.com
website : www.navakarnatakabooks.com


ಸಂಪಾದಕೀಯ

## ಬದಲಾವಣೆಯ ಸಾಧನವಾಗಿ ಜನಜಾಗೃತಿ

ಉದಾರೀಕರಣ ಮತ್ತು ಮುಕ್ತ ಮಾರುಕಟ್ಟೆಯ ಸಂದರ್ಭವು ಜನಸಾಮಾನ್ಯರಿಗೆ ಅನುಕೂಲ ತಂದುಕೊಟ್ಟಿದ್ದು ಸಾಸಿವೆಯಷ್ಟಿರಬಹುದು, ಆದರೆ ಪ್ರತಿಕೂಲವು ಆನೆಯ ಗಾತ್ರದಷ್ಟು. ಭ್ರಷ್ಟಾಚಾರಕ್ಕೆ ಹೇಸುತ್ತಿದ್ದ ಮತ್ತು ಹೆದರುತ್ತಿದ್ದ ವಾತಾವರಣದಿಂದ ಈಗ ಮುಕ್ತತೆಯತ್ತ ದಾಪುಗಾಲು ಹಾಕಿ, ಅಂಜಿಕೆಯನ್ನು ಕಿತ್ತೆಸೆದು, ಅತಿಯಾದ ಧೈರ್ಯ ಮತ್ತು ಭಂಡತನಗಳಿಂದ ಭ್ರಷ್ಟರಾಗುತ್ತಿರುವವರ ಸಂಖ್ಯೆ ಗಗನಕ್ಕೇರುತ್ತಿದೆ. ನಮ್ಮ ರಾಜ್ಯದ ಗಣಿ ಹಗರಣ ಅದರ ಒಂದು ತುಣುಕು ಸೂಚನೆ ಮಾತ್ರ. ಇದಕ್ಕೆ ಮುಂಚೆ ಗಣಿಗಳ ಸಂಪತ್ತನ್ನು ಆಧರಿಸಿ ತಮ್ಮ ವೈಯಕ್ತಿಕ ತಿಜೋರಿಗಳನ್ನು ಗಣಿಗಳನ್ನಾಗಿ ಮಾಡಿಕೊಳ್ಳುತ್ತಿರಲಿಲ್ಲವೆಂಬುದು ಸುಳ್ಳು. ಆದರೆ ಕೆಲವು ರಾಜಕಾರಣಿಗಳ ಗುದ್ದಾಟವು ತೀವ್ರವಾದಾಗ ಗಣಿ ಮತ್ತು ಸ್ಟಾಂಪ್ ಕಾಗದದ ಹಗರಣವು ಪತ್ರಿಕೆಗಳಿಗೆ ಗ್ರಾಸವಾಗುತ್ತದೆ. ಒಂದು ಕಡೆಯಿಂದ ಸೀಡಿಗಳು ಸಿಡಿದರೆ ಇನ್ನೊಂದು ಕಡೆಯಿಂದ ಹಳೆಯ ಟೇಪುಗಳು ಹೊರಬರುತ್ತವೆ. ಎರಡೂ ಬಣಗಳ ನುಂಗಣ್ಣಗಳು ಅದಿನ್ನೆಷ್ಟು ಕೋಟಿಗಳನ್ನು ಬಾಚಿಕೊಂಡರೆ ತೃಪ್ತರಾಗುತ್ತಾರೋ ತಿಳಿಯದು.

ಜನವಿರೋಧಿ ನೀತಿಗಳು ಎಂದಿಗಿಂತಲೂ ಹೆಚ್ಚಿನ ಪ್ರಮಾಣದಲ್ಲಿ ಇಂದು ಹೆಚ್ಚು ಕ್ಷೇತ್ರಗಳಿಗೆ ಆವರಿಸುತ್ತಿವೆ. ವೈದ್ಯಕೀಯ, ಶಿಕ್ಷಣ, ನೀರಾವರಿ, ರಸ್ತೆ, ಸಾರಿಗೆ, ಎಲ್ಲದರಲ್ಲೂ ಕಳಪೆತನ ಮತ್ತು ಸಾರ್ವಜನಿಕ ಹಣವನ್ನು ಲಪಟಾಯಿಸುವ ಪ್ರವೃತ್ತಿ ಹೆಚ್ಚಿದೆ. ಜನರ ಕಣ್ಣೀರು ಒರೆಸಲು ಆಶ್ವಾಸನೆಗಳಿಗೆ ಮಾತ್ರ ಕೊರತೆಯಿಲ್ಲ. ಸೆಪ್ಟೆಂಬರ್ ಮುಗಿದಿದ್ದರೂ ಇನ್ನೂ ಈ ವರ್ಷದಲ್ಲಿ ಮೂರು ಹೊಸ ಸರ್ಕಾರಿ ವೈದ್ಯಕೀಯ ಕಾಲೇಜುಗಳನ್ನು ಆರಂಭಿಸುವುದಾಗಿ ಸರ್ಕಾರ ಹೇಳುತ್ತಿರುವುದು ಅಂತಹ ಒಂದು ಹೀನತಂತ್ರ. ಆ ಕಾಲೇಜುಗಳಿಗೆ ಪ್ರವೇಶ ನವೆಂಬರ್‌ನಲ್ಲಿ ಆಗುತ್ತದೆಯೇ ? ಆಮೇಲೆ ಫೆಬ್ರವರಿಗೆ ಪರೀಕ್ಷೆ ನಡೆಸಿ ಏನೂ ಕಲಿಯದ ವೈದ್ಯರನ್ನು ಜನರ ಮೇಲೆ ಛೂ ಬಿಡಬಹುದು ! ಇಡೀ ರಾಷ್ಟ್ರದಲ್ಲಿ ಸರ್ವ ಶಿಕ್ಷಾ ಅಭಿಯಾನಕ್ಕಾಗಿ ವಿಶ್ವ ಬ್ಯಾಂಕ್‌ನಿಂದ ಪಡೆದಿರುವ ಸಾಲದ ಹಣವನ್ನು ಹೇರಳವಾಗಿ ಗುಳುಂ ಮಾಡಲಾಗಿದೆಯೆಂದು ಕಂಟ್ರೋಲರ್ ಅಂಡ್ ಆಡಿಟರ್ ಜನರಲ್ ವರದಿ ಇದೆ. ಇದು ೧೫೦ ಕೋಟಿಯಲ್ಲ, ೧೫೦೦ ಕೋಟಿಗೂ ಮೀರಿದ ಅವ್ಯವಹಾರ; ಆದರೆ ವರದಿ ಮುಚ್ಚಿಹೋಯಿತು. ಸಾರ್ವಜನಿಕ ಹಣದ ಲೂಟಿಯ ಬಗ್ಗೆ ಸಹ ಆಸಕ್ತಿ ಮೂಡಬೇಕಾದರೆ ನಮ್ಮ ಮಾಧ್ಯಮಗಳಿಗೆ ರಸವತ್ತಾದ ಕವಳವಿರಬೇಕೆಂದು ತೋರುತ್ತದೆ.

ಉದ್ಯೋಗ ಖಾತ್ರಿ ಯೋಜನೆಯಡಿ ನಮ್ಮ ರಾಜ್ಯಕ್ಕೆ ಸಂದಾಯವಾಗುವ ಹಣದ ಪೈಕಿ ಕೇವಲ ಶೇಕಡ ೩೦ರಷ್ಟನ್ನು ಬಳಸಿಕೊಳ್ಳಲಾಗಿದೆಯೆಂದು ಇನ್ನೊಂದು ವರದಿಯಿದೆ. ಹಳ್ಳಿಗಳಲ್ಲಿ ಬರದಿಂದ ಜನ ಕಂಗಾಲಾಗಿರುವಾಗ ಇಷ್ಟುಮಾತ್ರದ ಪರಿಹಾರ ಕೊಡಲು ಸಹ ಸರ್ಕಾರಕ್ಕೆ ಉತ್ಸಾಹವಿಲ್ಲ. ಈ ಯೋಜನೆಯಡಿ ದಿನಗೂಲಿಯು ಕೇವಲ ೬೯ ರೂಪಾಯಿಗಳಾದ್ದರಿಂದ ಉದ್ಯೋಗ ಪಡೆಯಲು ಜನ ಮುಂದೆ ಬರುತ್ತಿಲ್ಲವೆಂಬ ಮಾತೊಂದಿದೆ. ಅದು ನಿಜವಾದರೆ ದಿನಗೂಲಿಯ ಹೆಚ್ಚಳಕ್ಕೆ ಸರ್ಕಾರವು ಕ್ರಮ ತೆಗೆದುಕೊಳ್ಳಬಹುದಿತ್ತು. ಆದರೆ ಅದಕ್ಕೆ ವ್ಯವಧಾನವಿಲ್ಲ, ಇಚ್ಛಾಶಕ್ತಿಯೂ ಇಲ್ಲ. ನಮ್ಮ ಅರ್ಥಮಂತ್ರಿಗಳು ಕನ್ನಡಮ್ಮನ ಸೇವೆಗಾಗಿ ಅಮೆರಿಕಾಕ್ಕೆ ತೆರಳಿ ಅಲ್ಲಿಂದ ೨೦೦೦ ಕೋಟಿ ರೂಪಾಯಿಗಳ ಬಂಡವಾಳ ಹೂಡಿಕೆಯ ಆಶ್ವಾಸನೆಯನ್ನು ಹೊತ್ತು ತಂದಿದ್ದಾರೆ. ಅದು ನೆರವೇರುವುದು ಅನುಮಾನ; ನೆರವೇರಿದರೂ ಅದರಲ್ಲಿ ಒಂದು ಚಿಕ್ಕಾಸೂ ಸಾಮಾನ್ಯನಿಗೆ ಸಿಗುವುದಿಲ್ಲ. ಅದು ಐ.ಟಿ., ಬಿ.ಟಿ.ಗಳ ಪಾಲಾಗುತ್ತದೆ, ಅದಕ್ಕಾಗಿ ರೈತರ ಇನ್ನಷ್ಟು ಭೂಮಿಯನ್ನು ಕಸಿದುಕೊಳ್ಳಲಾಗುತ್ತದೆ.

ಕಳೆದ ವರ್ಷ ಕಲ್ಬುರ್ಗಿ ಮುಂತಾದ ಜಿಲ್ಲೆಗಳಲ್ಲಿ ರೈತರಿಗೆ ಮರಳುಮಿಶ್ರಿತ ಗೊಬ್ಬರವನ್ನು ಲಾರಿಗಟ್ಟಲೆ ಮಾರಿದ್ದ ದಗಾಕೋರರನ್ನು ಸರ್ಕಾರ ಹಿಡಿಯುವ ಮನಸ್ಸು ಮಾಡಲಿಲ್ಲ, ಶಿಕ್ಷಿಸಲಿಲ್ಲ. ಅದರಿಂದಾಗಿ ರೈತರ ಮೇಲಿನ ಹಿಂಸೆ ದ್ವಿಗುಣವಾಗಿದೆ; ಈ ವರ್ಷ ಅವರಿಗೆ ಅತ್ಯಂತ ಕಳಪೆ ಬೀಜಗಳನ್ನು ಮಾರಿ ವ್ಯಾಪಾರಿಗಳು ಹೊಟ್ಟೆ ಬೆಳೆಸಿಕೊಂಡಿದ್ದಾರೆ. ಆ ವ್ಯಾಪಾರಿಗಳಲ್ಲಿ ವಿದೇಶಿ ಬೀಜ ತಯಾರಕರ ಪ್ರತಿನಿಧಿಗಳಿದ್ದಾರೆ. ಆ ಬೀಜದಿಂದ ಪೈರು ದೊಡ್ಡದಾಗಿ ಬೆಳೆಯುತ್ತದೆ, ತೆನೆ ಹೊಮ್ಮುತ್ತದೆ; ಆದರೆ ಅದರಲ್ಲಿ ಕಾಳು ಕಟ್ಟುವುದಿಲ್ಲ. ಇದರಿಂದ ಕಂಗಾಲಾದ ರೈತರ ಕಣ್ಣೀರೊರೆಸಲು ಶರದ್ ಪವಾರ್ – ಯಡಿಯೂರಪ್ಪ ಯಾರೂ ಮನಸ್ಸು ಮಾಡಿಲ್ಲ. ಆತ್ಮಹತ್ಯೆಯ ಲೆಕ್ಕ ಬರೆಯಲು ಬೇಕಾದರೆ ಅವರು ಒಂದಿಬ್ಬ ತಜ್ಞರನ್ನು ನೇಮಿಸಬಹುದು ! ಜಾಗತೀಕರಣದ ಅಬ್ಬರದಲ್ಲಿ ಹೊರದೇಶಗಳಿಂದ ಗೋಧಿ, ಬೇಳೆ, ಸೇಬು, ಮುಂತಾದುವನ್ನು ತಂದುಕೊಳ್ಳುವ ನಮ್ಮ ದೇಶದಲ್ಲಿ ಇಲ್ಲಿಯ ಬೆಳೆಗಾರರಿಗೆ ದಕ್ಕುತ್ತಿರುವುದು ಮಣ್ಣು. ಉತ್ಪನ್ನಗಳನ್ನು ಮಾರುಕಟ್ಟೆಗೆ ತಂದು ಅವನ್ನು ರಸ್ತೆಯಲ್ಲಿ ಸುರಿದುಹೋಗುವ ವ್ರತ ಅವರಿಗೆ ಈ ನೂತನ ಪ್ರಕ್ರಿಯೆಯ ಕಾಣಿಕೆ. ರೈತರನ್ನು ಕಿಂಚಿತ್ತೂ ರಕ್ಷಿಸದ ಸರ್ಕಾರವು ಹಾಳು ಸರ್ಕಾರವೆಂದು ಯಾವ ಮಣ್ಣಿನ ಮಗನ ಮೆದುಳಿನಲ್ಲೂ ಸುಳಿಯದಿರುವುದು ಒಂದು ದುರಂತ. ಆದರೆ ಮಣ್ಣಿನ ಮಕ್ಕಳಿಗೇನೂ ಕೊರತೆಯಿಲ್ಲ.

ಇನ್ನು ನಗರಗಳ ಭೂಗಳ್ಳರು ಮತ್ತು ಗೂಂಡಾದೊರೆಗಳು ಹಣಾಹಣಿ ಹಗಲಲ್ಲೇ ಹೊಡೆದಾಡುವ, ಒಬ್ಬರನ್ನೊಬ್ಬರು ಮಚ್ಚು - ಕೊಡಲಿಗಳಿಂದ ಕೊಚ್ಚಿಹಾಕುವ ಭೀಕರತೆ ಬೇರೆ. ಅಲ್ಲಿಯೂ ಹೊಡೆದಾಟವು ರೈತನ ಜಮೀನಿಗಾಗಿಯೇ; ಆದರೆ ರೈತನನ್ನು ಆಗಲೇ ಓಡಿಸಿಬಿಟ್ಟಿದ್ದಾರೆ, ಅಷ್ಟೆ. ಬೆಂಗಳೂರು ಮತ್ತಿತರ ನಗರಗಳ ಸುತ್ತಮುತ್ತ ಕಳೆದ ಹತ್ತು ವರ್ಷಗಳಲ್ಲಿ ಯಾವ ರಾಜಕಾರಣಿ ಎಷ್ಟು ಹೆಸರುಗಳಲ್ಲಿ ಎಷ್ಟು ಜಮೀನನ್ನು ತನ್ನದಾಗಿಸಿಕೊಂಡಿದ್ದಾನೆಂಬ ತನಿಖೆ ನಡೆದರೆ ದಿನಂಪ್ರತಿ ವೃತ್ತಪತ್ರಿಕೆಗಳ ಮುಖಪುಟದಲ್ಲಿ ಕಾಣಿಸಿಕೊಳ್ಳುವ ಹೆಸರುಗಳು ತನಿಖಾವರದಿಯಲ್ಲೂ ಕಂಡುಬಂದಾವು. ರಾಜ್ಯ ಮತ್ತು ರಾಷ್ಟ್ರ , ಎರಡರದ್ದೂ ಇದೇ ಹಣೆಬರಹ.

ನಮ್ಮ ದೇಶದ ರೋಗಿಗಳ ಮೇಲೆ ಬೇರೆಬೇರೆ ಹೊಸ ಮದ್ದುಗಳನ್ನು ಪ್ರಯೋಗಿಸುವ ಒಂದು ಸನ್ನಿವೇಶವಿದೆ. ಹಿಂದೆ ಬಡ ಮಹಿಳೆಯರ ಮೇಲೆ ಕ್ವಿನಿಕ್ರಾನ್ ಎಂಬ ಮಾರಕ ಮದ್ದನ್ನು ಪ್ರಯೋಗಿಸಿದ್ದುದರ ನೆನಪು ತರಿಸುವಂತಹ ಪ್ರಯೋಗಗಳಿವು. ಇಲಿ, ಮೊಲ ಮುಂತಾದ ಪ್ರಾಣಿಗಳ ಮೇಲೆ ಪ್ರಯೋಗಿಸುವಂತೆ ಹಿಟ್ಲರ್ ಮಾದರಿಯಲ್ಲಿ ಮನುಷ್ಯರ ಮೇಲೆ ಪ್ರಯೋಗಿಸಿ ಸಂಶೋಧನೆ ನಡೆಸುವ ಪದ್ಧತಿ ಇದು. ಅದಕ್ಕೆ ಅಮೆರಿಕಾದ ಪ್ರಜೆಗಳು ತುತ್ತಾಗಬಾರದು, ಭಾರತದವರಾದರೆ ಆಗಬಹುದು. ಮೇರ್ಕ್, ಫ್ಲೀಜರ್ ಮುಂತಾದ ಬೃಹತ್ ಔಷಧಿ ಕಂಪನಿಗಳು ಎರಡು ಬಿಲಿಯನ್ ಡಾಲರು (ಸುಮಾರು ೫೦೦೦ ಕೋಟಿ ರೂಪಾಯಿಗಳು) ಮೊತ್ತದ ಔಷಧಿಗಳನ್ನು ಭಾರತದಲ್ಲಿ ತುಂಬಿವೆ. ಅದರಿಂದ ದೇಶದ ಎಷ್ಟು ರೋಗಿಗಳು ಇಲಿ - ಮೊಲಗಳಾಗಿ ಸಾಯುತ್ತಾರೋ ಯಾವತ್ತಿಗೂ ತಿಳಿಯುವುದಿಲ್ಲ. ಆದರೆ ಕಂಪನಿಗಳಿಗೆ ಹೊಸ ಔಷಧಿಗಳ ಸಂಶೋಧನೆ ಮತ್ತು ಮಾರುಕಟ್ಟೆ ಖಚಿತ. ಇತ್ತೀಚಿಗೆ ಪೆಪ್ಸಿ - ಕೋಲ

ವಿಷಪಾನೀಯಗಳ ಬಗ್ಗೆ ಚರ್ಚೆ ನಡೆಯುತ್ತಿದ್ದಾಗ ಅಮೇರಿಕಾದ ಅಧ್ಯಕ್ಷ ನಮ್ಮ ದೇಶಕ್ಕೆ ಸೂಚನೆ ಕೊಟ್ಟಂತೆ : ''ಈ ಕಂಪನಿಗಳನ್ನು ಕಠಿಣವಾಗಿ ನಡೆಸಿಕೊಳ್ಳಬೇಡಿ'' (ಡೀಲ್ ವಿತ್ ದೆಮ್ ಸ್ವೇರ್ಲಿ), ಎಂದು. ನಮ್ಮ ದೇಶದವರನ್ನು ಕಠಿಣವಾಗಿ ನಡೆಸಿಕೊಂಡರೆ ಅಡ್ಡಿಯಿಲ್ಲ! ಇಷ್ಟೆಲ್ಲಾ ಪೀಡೆಗಳ ಬಾಧೆ ಇರುವಾಗ ನಮ್ಮ ಪ್ರಬುದ್ಧ ರಾಜಕಾರಣಿಗಳು(!!) ಶ್ರೀರಾಮ, ರಾಷ್ಟ್ರೀಯ ಹಾಡು, ಇತ್ಯಾದಿಗಳನ್ನು ಚುನಾವಣಾ ಘೋಷಣೆಗಳನ್ನಾಗಿ ಮಾಡುವುದಾಗಿ ಹೇಳುವ ಬೌದ್ಧಿಕ ಶ್ರೀಮಂತಿಕೆಯನ್ನು ಬೆಳೆಸಿಕೊಂಡಿದ್ದಾರೆ.

ಪ್ರಧಾನಿ ಮನಮೋಹನ ಸಿಂಗರು ಕ್ಯೂಬಾದಲ್ಲಿ ನಡೆದ ಅಲಿಪ್ತ ಶೃಂಗ ಸಮ್ಮೇಳನದಲ್ಲಿ ಬುಷ್ ಮಹಾರಾಜನಿಗೆ ಪರಾಕು ಹೇಳುವುದೊಂದನ್ನು ಬಿಟ್ಟು ಮಿಕ್ಕದ್ದೆಲ್ಲಾ ಮಾಡಿದರು. ಆತನ ಘೋರ ಪಾತಕಗಳಿಂದ ಜಗತ್ತಿನಲ್ಲಿ ಎಂತಹ ಕ್ಷೋಭೆ ಆವರಿಸಿದೆ ಯೆಂಬುದನ್ನು ಪ್ರಸ್ತಾಪ ಮಾಡಲು ಅವರಿಗೆ ಹಿಂಜರಿಕೆ. ವಿಶ್ವದ ಅತ್ಯಂತ ಕ್ರೂರ ಭಯೋತ್ಪಾದಕ ರಾಷ್ಟ್ರವೆಂದು ಅಮೇರಿಕಾವನ್ನು ಗುರುತಿಸದೆ ಅದೆಂತಹ ಭಯೋತ್ಪಾದನ – ವಿರೋಧಿ ಮಂಚವನ್ನು ರಚಿಸಬೇಕೆಂದು ತವಕಿಸಬೇಕೋ ತಿಳಿಯುವುದಿಲ್ಲ. ಕ್ಯೂಬಾ ಮತ್ತು ವೆನಿಝೂಲಾದ ಅಧ್ಯಕ್ಷರಿಬ್ಬರು ಮಾತ್ರ ಈ ಬಗ್ಗೆ ಚರ್ಚೆ ನಡೆಸಿದರೆಂದು ತಿಳಿದುಬಂದಿದೆ. ಕಾಶ್ಮೀರ - ಮಣಿಪುರ - ಮುಂಬೈ - ಮಾಲೆಗಾಂವ್ ಮುಂತಾದೆಡೆ ಜರುಗಿರುವ ಭಯೋತ್ಪಾದಕ ಕೃತ್ಯಗಳು ಖಂಡನೀಯ. ಆದರೆ ಅವನ್ನೆದುರಿಸಲು ಬ್ರೆಜಿಲ್, ದಕ್ಷಿಣ ಆಫ್ರಿಕಾ ಮುಂತಾದ ಅಲಿಪ್ತ ರಾಷ್ಟ್ರಗಳು ಭಾರತಕ್ಕೆ ಹೇಗೆ ಬೆಂಬಲ ನೀಡಿಯಾವು ? ಅದಕ್ಕೆ ಮೂಲಭೂತವಾಗಿ ಪಾಕಿಸ್ತಾನ, ಅಮೇರಿಕಾ, ಬ್ರಿಟನ್ ಮತ್ತು ಇಸ್ರೇಲ್‌ಗಳಂತಹ ರಾಷ್ಟ್ರಗಳ ಜೊತೆ ಯಾವ ಸಂಕೋಚವೂ ಇಲ್ಲದ ನೇರ ಸಂವಾದ ಏರ್ಪಡಿಸಬೇಕು. ಇರಾಕ್ ಮತ್ತು ಅಲ್ - ಕೈದಾ ನಡುವೆ ಸಂಪರ್ಕವಿರಲಿಲ್ಲವೆಂದು ಅಮೇರಿಕಾದ ಗೂಢಚಾರ ಸಂಸ್ಥೆ ಇಂದು ಹೇಳಿದ್ದನ್ನು ಅಂದು ಇಡೀ ವಿಶ್ವವೇ ತಿಳಿದಿತ್ತು. ಇರಾಕಿನಲ್ಲಿ ಮಾರಕಾಸ್ತ್ರಗಳು ತುಂಬಿದ್ದು ಅಮೇರಿಕಾದ ಆಕ್ರಮಣದ ನಂತರ. ಮುಂದೆ ಲೆಬನಾನ್, ಇರಾನ್ ಇತ್ಯಾದಿಗಳು ಪಟ್ಟಿಯಲ್ಲಿವೆ. ನಮ್ಮ ಪ್ರಧಾನಿಯು ಅಲಿಪ್ತ ರಾಷ್ಟ್ರಗಳ ಸಭೆಯಲ್ಲಿ ಇದನ್ನೆಲ್ಲಾ ಮುಚ್ಚುಮರೆಯಿಲ್ಲದೆ ಧೈರ್ಯವಾಗಿ ಪ್ರಸ್ತಾಪಿಸಬೇಕಾಗಿತ್ತು ; ಆದರೆ ಅವರ ಕೀರಲು ಗಂಟಲಿನಿಂದ ಇದೆಲ್ಲಾ ಹೊರಬರಲಿಲ್ಲ.

ಇದರ ಪ್ರಸ್ತಾಪಕ್ಕೆ ಒಂದು ಕಾರಣವಿದೆ : ದೇಶದಲ್ಲಿ ಮತ್ತು ಅಂತರರಾಷ್ಟ್ರೀಯವಾಗಿ ಭ್ರಷ್ಟತೆಯು ವಿವಿಧ ಮುಖಗಳಿಂದ ವ್ಯಕ್ತವಾಗುತ್ತಿದೆ; ಆದರೆ ಮೂಲಭೂತವಾಗಿ ಅದರ ಹಿಂದಿರುವುದು ಸಂಪತ್ತು, ಸಂಪತ್ತಿನ ಲೂಟಿ ; ಜನರ ಸಂಪತ್ತನ್ನು ದೋಚಿ ಮೆರೆಯುವ ದುರಹಂಕಾರ, ಭಂಡಧೈರ್ಯ. ನೈಸ್ ಕಂಪನಿ, ಗಣಿ, ಸ್ಟಾಂಪ್ ಕಾಗದ, ಭೂಕಬಳಿಕೆ ಇವೆಲ್ಲದರ ಹಿಂದೆ ಅಡಗಿರುವ ಕರಾಳಮುಖಕ್ಕೆ ಆ ಉದ್ದೇಶವಿದೆ, ಲಕ್ಷಣಗಳಿವೆ. ಇನ್ನೆಷ್ಟು ಕಾಲ ಇದನ್ನು ಸಹಿಸುತ್ತಿರಬೇಕು ? ಜನರ ಜಾಗ್ರತಿ ಮತ್ತು ಸಾಮೂಹಿಕ ಕ್ರಿಯೆ ಅದಕ್ಕೆ ಉತ್ತರ ಕೊಡಬೇಕು. ನಮ್ಮ ರಾಜ್ಯದಲ್ಲಿ ಭಾರತ ಕಮ್ಯುನಿಸ್ಟ್ ಪಕ್ಷವು ಇದೇ ಸೆಪ್ಟೆಂಬರ್‌ನಲ್ಲಿ ಒಂದು ಜನಜಾಗ್ರತಿ ಜಾಥಾ ನಡೆಸಿತು. ಜಾಥಾದ ಪರಿಣಾಮವು ಆಂದೋಳನ ಮತ್ತು ಹೋರಾಟಗಳ ಸ್ವರೂಪದಲ್ಲಿ ಜನರ ನಡುವೆ ಪರಿಣಾಮಕಾರಿಯಾಗಿ ಕಂಡುಬರಬೇಕು. ಆಗ ಮಾತ್ರವೇ ಫಲವು ಜನಸಾಮಾನ್ಯರ ಮಡಿಲಿಗೆ ಬೀಳಲು ಸಾಧ್ಯ. ಇದು ಜನಪರವಾದ ಎಲ್ಲ ರಾಜಕೀಯ ಪಕ್ಷಗಳ ಪ್ರಣಾಳಿಕೆಯಾದಾಗ ಮಾತ್ರ ಗಣಿಗಳ ಸಂಪತ್ತು ಜನರ ಸಂಪತ್ತಾಗುತ್ತದೆ.

## ಇಲ್ಲದ ಸರಕು; ಸಲ್ಲದ ವ್ಯಾಪಾರ

**ಮಾ**ರುಕಟ್ಟೆ ಇಂದು ಒಂದು ಘೋರಾರಣ್ಯ. ಈ ಘೋರಾರಣ್ಯದಲ್ಲಿ ವನ್ಯನೀತಿಯದೇ ಮೇಲುಗೈ. ಅಂದರೆ, ಬಲಶಾಲಿಗೇ ಬದುಕುವ ಹಕ್ಕು. ಈ ವ್ಯವಸ್ಥೆಯನ್ನು ಅವಲಂಬಿಸಿ ಬದುಕುವ ಪರೋಪಜೀವಿಗಳ ಸ್ವರೂಪ ಪಾಮರರಿಗೆ ನಿಗೂಢ. ಇಲ್ಲಿ ಮಾರಾಟವಾಗುವುದು ಸರಕುಗಳು ಮಾತ್ರವಲ್ಲ ; ಹಣ, ಪತ್ರಗಳು, ನಂಬಿಕೆ-ಅಪನಂಬಿಕೆ, ಊಹಾಪೋಹ ಎಲ್ಲವೂ ಇಲ್ಲಿ ಸರಕುಗಳೇ. ಸರಕಿನ ನೇರ ವ್ಯಾಪಾರಕ್ಕಿಂತ ಅವೆಲ್ಲವನ್ನೂ ಮಾರಾಟಕ್ಕಿಟ್ಟು ವ್ಯಾಪಾರ ಮಾಡುವುದೇ ಸರಕುಗಳಿಗಿಂತ ಹಲವು ಹತ್ತುಪಟ್ಟು ಹೆಚ್ಚಿನದು. ಷೇರು ಎಂಬುದು ಒಂದು ಥರದ ಪತ್ರ. ಹಿಡಿತಕ್ಕೆ ಸಿಗದ ಸ್ವರೂಪದ ಊಹಾಪೋಹ, ನಂಬಿಕೆ-ಅಪನಂಬಿಕೆಗಳನ್ನು ವ್ಯಕ್ತಪಡಿಸುವ ಹಲವು ರೀತಿಯ ಪತ್ರಗಳು ಮಾರುಕಟ್ಟೆಯಿಂದ ಉತ್ಪನ್ನವಾದುವು. ಇಂಗ್ಲಿಷಿನಲ್ಲಿ ಇವನ್ನು 'ಡೆರಿವೇಟಿವ್ಸ್' ಎನ್ನುತ್ತಾರೆ. ಮಾರುಕಟ್ಟೆಯಲ್ಲಿ ನೇರವಾಗಿ ಬೇಡಿಕೆ-ಪೂರೈಕೆ- ಪೈಪೋಟಿಯ ಮಾರ್ಗದಲ್ಲಿ ನಿಗದಿಯಾಗುವ ಆ ಕ್ಷಣದ ಬೆಲೆ 'ಸ್ಪಾಟ್ ಪ್ರೈಸ್' ಎನಿಸಿಕೊಳ್ಳುತ್ತದೆ. ಸರಕುಗಳನ್ನು ಗೋದಾಮುಗಳಲ್ಲಿ ಶೇಖರಿಸಿಟ್ಟುಕೊಂಡು, ಮುಂದೆಂದೋ ಉತ್ತಮ ಬೆಲೆ ಬಂದಾಗ ಮಾರಲು ಕಾಯುವುದು ಒಂದು ರೀತಿಯ ವ್ಯವಹಾರ. ಹಾಗೆ ಆ ಮುಂದಿನ ಒಂದು ದಿನ ನಿರೀಕ್ಷಿಸಿದ ಬೆಲೆಯೇ ಬರದೆ ನಷ್ಟ ವಾದರೆ, ನಿರೀಕ್ಷಿತ ಬೆಲೆಗಿಂತ ಕಡಿಮೆ ಅಥವಾ ಹೆಚ್ಚು ಇಂದಿನ ಬೆಲೆಗಿಂತ ಕಡಿಮೆ, ಸರಕನ್ನು ಗೋದಾಮಿನಲ್ಲಿ ಸುರಕ್ಷಿತವಾಗಿ ಇಡಲು ತಗಲುವ ವೆಚ್ಚ, ಹೂಡಿದ ಬಂಡವಾಳ, ಪಡೆದ ಸಾಲದಮೇಲಿನ ಬಡ್ಡಿ ಇವೆಲ್ಲವನ್ನೂ ಗಣನೆಗೆ ತೆಗೆದುಕೊಂಡ ನಂತರವೂ ಲಾಭ ಮಾಡುವುದು ಹೇಗೆ ? ಇಂಥ ಪರಿಸ್ಥಿತಿಯ ಸಾಧ್ಯಾಸಾಧ್ಯತೆಗಳ ಮೇಲೆ ಸಟ್ಟಾ ಆಡುವವರಿದ್ದಾರೆ. ಮುಂಬರುವ ಅಂಥದೊಂದು ದಿನ ಸಿಕ್ಕಿದಷ್ಟು ಪ್ರಮಾಣದ ಸರಕನ್ನು ಇಂತಿಷ್ಟು ಬೆಲೆಗೆ ನಾನೇ ಕೊಂಡುಕೊಳ್ಳುತ್ತೇನೆ ಎಂದು ಒಬ್ಬ ಮುಂದೆಬಂದರೆ ಅದು ಒಂದು ರೀತಿಯ ಪತ್ರವಾಗುತ್ತದೆ. ಅಂಥ ವಾಯಿದೆಯ ದಿನ ಮಾರುಕಟ್ಟೆಯಲ್ಲಿನ ಬೆಲೆ ಈ ಒಪ್ಪಂದದ ಬೆಲೆಗಿಂತ ಇನ್ನೂ ಹೆಚ್ಚಿನದಾಗಿದ್ದರೆ, ಆಗ ಈ ಒಪ್ಪಂದ ಕೈಬಿಡಲು ಸ್ವತಂತ್ರ ಎಂದರೆ ಅದೇ ಒಂದು ಬಗೆಯ ಪತ್ರ. ಲಾಭ ಹೆಚ್ಚಿದ್ದರೆ ಕೊಳ್ಳುತ್ತೇವೆ, ನಷ್ಟವಾಗುವ ಹಾಗಿದ್ದರೆ ಆ ನಷ್ಟವನ್ನು ಮಾತ್ರ ತುಂಬಿಕೊಟ್ಟು, ಕೊಳ್ಳುವ ಒಪ್ಪಂದವನ್ನು ಕೈಬಿಡುತ್ತೇವೆ ಎನ್ನಬಹುದು. ಲಾಭವಾಗುವ ಹಾಗಿದ್ದರೆ ಮಾರುವುದಿಲ್ಲ, ನಷ್ಟವಾಗುವ ಹಾಗಿದ್ದರೆ ಕೊಳ್ಳುವುದಿಲ್ಲ ಎನ್ನಬಹುದು. ಮೂಲದಲ್ಲಿ ಎಲ್ಲೋ ಇರುವ ಒಂದು ಸರಕಿನ ಆಧಾರದ ಮೇಲೆ ನಡೆಯುವ ಈ ಸಟ್ಟಾ ವ್ಯಾಪಾರದ ಪೈಪೋಟಿಯಲ್ಲಿ ಹೂಡುವ ಹಣದ ಮೊತ್ತ, ಸರಕಿನ ವಾಸ್ತವ ಬೆಲೆಗಿಂತ ಅಪಾರವಾಗಿದ್ದು, ಈ ಲಾಭ ಬಡುಕ ಜನ ವ್ಯಾಪಾರಿ ಸಂಬಂಧಗಳನ್ನು ಅಮೂರ್ತವಾಗಿಸಿಬಿಡುತ್ತದೆ. ಬಂಡವಾಳದ ಮಾರುಕಟ್ಟೆಯ ಮೋಡಿ. ಸರಕಿನೊಡನೆ ಸಂಬಂಧವೇ ಇಲ್ಲದ ವ್ಯವಹಾರವಾಗಿಬಿಡುತ್ತದೆ. ವಾಯಿದೆ ವ್ಯಾಪಾರ ಮುಂದೂಡಿದ, ಭವಿಷ್ಯದ ವ್ಯಾಪಾರ ಎಂದೆಲ್ಲಾ ಹೇಳಬಹುದಾದ ಈ ಮಾರುಕಟ್ಟೆಯಲ್ಲಿ ಬಳಕೆಯಾಗುವ ಇಂಗ್ಲಿಷ್ ಪದಗಳು, ಫ್ಯೂಚರ್ ಮಾರುಕಟ್ಟೆ, ಫಾರ್ವರ್ಡ್ ಮಾರುಕಟ್ಟೆ, ಹೆಡ್ಜಿಂಗ್, ಸ್ಪಾಟ್ ಪ್ರೈಸ್, ಡೆರಿವೇಟಿವ್ಸ್, ಸ್ಪೆಕ್ಯುಲೇಷನ್, ಕಾಲ್ ಆಪ್ಷನ್, ಪುಟ್ ಆಪ್ಷನ್, ಇತ್ಯಾದಿ.

೮ನೇ ಪುಟಕ್ಕೆ

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
☎ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
☎ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
☎ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
☎ : ೦೮೪೭೨-೨೨೪೩೦೨




### ಡಾ॥ ಕರೀಂ ಖಾನ್

ಸೆಪ್ಟೆಂಬರ್ ೨೦೦೬ರ ಸಂಚಿಕೆಯು ಡಾ॥ ಕರೀಂ ಖಾನರನ್ನು ಜೀವಂತವಾಗಿ ಪಡಿಮೂಡಿಸಿದಂತೆ ಅಚ್ಚಾಗಿ ಬಂದಿದೆ. ನನ್ನ ಪ್ರೌಢಶಾಲಾ ದಿನಗಳಿಂದಲೇ ಅವರನ್ನು ಅತೀ ಹತ್ತಿರದಿಂದ ಕಾಣುವ ಭಾಗ್ಯ ನನ್ನದಾಯಿತು. ೧೯೫೭-೫೯ರಲ್ಲಿ ಭಾರತವನ್ನು ಆವರಿಸಿದ್ದ ರಾಷ್ಟ್ರೀಯತೆಯ ಮನೋಭಾವ ಅವರ ಒಡನಾಟದಿಂದ ಯುವಕ-ಯುವತಿಯರಲ್ಲಿ ವಿದ್ಯುತ್ ಸಂಚಾರ ಉಂಟು ಮಾಡುತ್ತಿತ್ತು. ಇಡೀ ಕರ್ನಾಟಕಕ್ಕೆ ಜಾನಪದ ಸಂಗೀತ ವನ್ನು ಪರಿಚಯಿಸಿದ್ದಷ್ಟೇ ಅಲ್ಲ, ಮನಸ್ಸಿಗೂ ಹೃದಯಕ್ಕೂ ತಟ್ಟುವಂತೆ ಹೃದಯಂಗಮವಾಗಿ ಹಾಡುತ್ತಾ ನಮ್ಮಲ್ಲಿ ಮಾನವೀಯತೆಯನ್ನೂ ಸಂಸ್ಕೃತಿಯನ್ನೂ ರಾಷ್ಟ್ರಾಭಿ ಮಾನವನ್ನೂ ಭಾಷಾಭಿಮಾನವನ್ನೂ ಉದ್ದೀಪಿಸುತ್ತಿದ್ದರು. ತಮ್ಮ ವೈಯಕ್ತಿಕ ನಡೆನುಡಿ ಪೋಷಾಕು ಹಾಗೂ ಸೌಮ್ಯವೂ ವಿದ್ವತ್ಪೂರ್ಣವೂ ಆದ ಮಾತುಕತೆಗಳಿಂದಲೂ ನಮ್ಮ ವ್ಯಕ್ತಿತ್ವವನ್ನು ಹೇಳದೆಯೇ ನಿಸ್ಪೃಹವಾಗಿ ರೂಪಿಸುತ್ತಿದ್ದರು.

ನನಗೆ ಅವರು ೧೯೫೮ರಲ್ಲಿ ಬರೆದ ಎರಡು ಪುಟಗಳ ಪತ್ರದ ಕೊನೆಯ ವಾಕ್ಯವೃಂದ ಏನೇನನ್ನು ಪುಷ್ಟೀಕರಿಸುತ್ತದೆ ಎಂಬುದನ್ನು ಹಂಚಿಕೊಳ್ಳಲು ನನಗೆ ಅತ್ಯಪೂರ್ವ ಅನುಭವವುಂಟಾಗುತ್ತಿದೆ :

''ಮಾನವನ ಕೀರ್ತಿಗೆ ಕುಂದಣವೀಯುವುದು ಆತನ ಕಲ್ಯಾಣ ಗುಣ. ಎಲ್ಲಿಯವರೆಗೆ ತಾವು ಕಲ್ಯಾಣ ಗುಣ ರತ್ನಧಾರಿಗಳಾಗುವುದಿಲ್ಲವೋ ಅಲ್ಲಿವರೆಗೂ ಜೀವನದ ವಿವಿಧ ರಂಗಗಳಲ್ಲಿ ಯಶಸ್ಸನ್ನು ಕಾಣಲಾರಿರಿ. ನನ್ನ ಪ್ರೀತಿಯ ತಮ್ಮನೆಂಬ ಕಾರಣದಿಂದ ವಸ್ತುಶಃ ತಾವು ಗುಣಶ್ರೇಷ್ಠರೂ ಸುಜ್ಞಾನಿಗಳೂ ಆಗಿದ್ದರೂ ಕೂಡ ನನ್ನ ಕರ್ತವ್ಯ ದೃಷ್ಟಿಯಿಂದ ತಮಗೆ ಇದನ್ನು ಬೋಧಿಸುತ್ತಿದ್ದೇನೆ.

''ಈಗ ತಾವು ನವತಾರುಣ್ಯದ ಪ್ರಥಮ ಹಂತದಲ್ಲಿ ಪದವಿಟ್ಟಿರುವಿರಿ. ಈಗ ತಮ್ಮ ಗುರಿಯು ಕವಲೊಡೆ ಯುವುದು. ಹೃದಯಾಂಬುಧಿಯಲ್ಲಿ ವಿವಿಧ ವಿಚಾರ ತರಂಗಗಳೆದ್ದು ಚಿತ್ತಸ್ಥೈರ್ಯವನ್ನು ಕಲಕುವುವು. ಮನವು ವಿವಿಧ ವಿಚಾರಗಳೆಡೆಗೆ ಧಾವಿಸುವುದು. ಈ ಸಂದರ್ಭ ದಲ್ಲಿ ಸ್ವಶಕ್ತಿಯಿಂದ ಸನ್ಮಾರ್ಗಗಾಮಿಯಾಗುವುದು ದುಸ್ಸಾಧ್ಯ ವೆನಿಸುವುದು. ಹೆಜ್ಜೆಹೆಜ್ಜೆಗೂ ಆತ್ಮೀಯರ ಸಲಹೆಯೂ ಅಗತ್ಯವಾಗುವುದು. ಆತ್ಮೀಯರು ದ್ಯೂತಪ್ರಿಯರೂ, ವಿಷಯಾಸಕ್ತರೂ, ಪಾಷಂಡಿಗಳೂ ಆಗಿದ್ದರೆ ಸಂಪೂರ್ಣ ವಾಗಿಯೂ ಉಜ್ವಲ ಭವಿತವ್ಯವನ್ನು ಪ್ರಪಾತಕ್ಕೆ ತಳ್ಳಿ ಹಾಕುವರು. ಆದರೆ ಸನ್ಮಿತ್ರನೂ ಆಪದ್ಬಂಧುವೂ, ಅಹರ್ನಿಶಿಯೂ ತನ್ನ ಮಿತ್ರನ ಅಭ್ಯುದಯವನ್ನೇ ಹಾರೈಸುವನು. ಸನ್ಮಿತ್ರನು ಪರಮಾತ್ಮನ ವರಪ್ರಸಾದ. ಮರ್ತ್ಯಲೋಕದ ಮಂದಾರ. ಜೀವಿತದ ಅಲಭ್ಯಭಾಗ್ಯ. ನಿರತ್ಯಯ ಮಧುರಸ್ಮೃತಿ. ಹೃದಯಾರವಿಂದದ ಬಾನು. ನಯನ ಚಕೋರ ಚಂದ್ರ. ತಮ್ಮ ಸನ್ಮಿತ್ರ ತಾರಾವಿತಾನವು ಘಳಿಗೆಘಳಿಗೆಗೂ ಅಧಿಕವಾಗುತ್ತಿರಲಿ. ಆದರೆ ನಿಮ್ಮ ಆಯ್ಕೆಯಲ್ಲಿ ವಿವೇಚನೆ ಇರಲಿ.''

ಬೆಂಗಳೂರು **ಸಿ. ಎಚ್. ಜಾಕೋಬ್ ಲೋಬೊ**

### ಅರಿವಿನ 'ಈ ತಿಂಗಳು'

ಪ್ರವಾಹದ ಅವಘಡಗಳಿಗೆ ಬೃಹತ್ ಅಣೆಕಟ್ಟುಗಳೇ ಕಾರಣ. ಗಾಂಧೀಜಿಯವರ ಗ್ರಾಮಸ್ವರಾಜ್ಯದ ಕಲ್ಪನೆ ಯಾಗಲೀ, ಸ್ಮಾಲ್ ಈಸ್ ಬ್ಯೂಟಿಫುಲ್ ಎಂಬುದರ ಅರ್ಥವಾಗಲೀ ನಮ್ಮ ರಾಜಕಾರಣಿಗಳಿಗೆ ಹೊಳೆಯಲೇ ಇಲ್ಲ. ತಾವು ಹೇಳಿರುವಂತೆ ಬೃಹತ್ ಅಣೆಕಟ್ಟುಗಳ ಹೂಳೆತ್ತುವುದೆಂತು ? ನಿರ್ವಹಣೆಯ ವೆಚ್ಚಗಳನ್ನು ಭರಿಸು ವುದೆಂತು ? ಕೆರೆಗಳ ನಿರ್ಮಾಣ, ನಿರ್ವಹಣೆ ಸುಲಭ, ಸಹಕಾರಿ. ಇದನ್ನು ಮೂಲೆಗಿಕ್ಕಿ ಬೃಹತ್ ಯೋಜನೆಗಳ




ಮಾಯಾಜಾಲಕ್ಕೆ ಬಿದ್ದು ಅನಾಹುತಗಳ ಸರಮಾಲೆಯನ್ನೇ ಸೃಷ್ಟಿಸಿಕೊಂಡಿದ್ದೇವೆ, ಸೃಷ್ಟಿಸಿಕೊಳ್ಳುತ್ತಿದ್ದೇವೆ. ನೆರೆ-ಬರಗಳ ಇಡುಗತ್ತರಿಗೆ ಕೊರಳು ಕೊಟ್ಟಿದ್ದೇವೆ.

ಗ್ಯಾಟ್ ಒಪ್ಪಂದ ಮಾಡಿಕೊಂಡ ಅಂದಿನ ಹಣಕಾಸು ಸಚಿವರಾಗಿದ್ದ ಮನಮೋಹನ ಸಿಂಗ್ ಗ್ರಾಮಸ್ವರಾಜ್ಯಕ್ಕೆ ಹಾಗೂ ರಾಷ್ಟ್ರ ಸ್ವಾತಂತ್ರ್ಯಕ್ಕೆ ಪರೋಕ್ಷವಾಗಿ ಧಕ್ಕೆ ತಂದು ಕೊಂಡರು. ಈಗ ಪ್ರಧಾನಿಯಾಗಿ ಅಣುಶಕ್ತಿ ಒಪ್ಪಂದ ಮಾಡಿಕೊಂಡು ಅದಕ್ಕಿಂತ ಹೆಚ್ಚಿನ ದುರಂತವನ್ನು ದೇಶಕ್ಕೆ ಆಹ್ವಾನಿಸಿದ್ದಾರೆ. ದರ್ಪಿಷ್ಠ ಅಮೆರಿಕಾದ ಆಲಿಂಗನ ವೆಂದರೆ ಅವಸಾನ ಎಂದರ್ಥ. ಶೀತಲವಾಗಿರುವ ಅದರ ಕಾವು ತಟ್ಟುವುದು ಈಗಲ್ಲ, ಮುಂದೆ.

ಕನ್ನಡ ಹೆಸರಿನ ಲೂಟಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಹೆಸರಿನಲ್ಲಿ ನಡೆಯುತ್ತಿರುವುದು ಈಗ ಅಮೆರಿಕಾದ 'ಅಕ್ಕ' ಸಂಸ್ಥೆಯ ನೆಪದಲ್ಲಿ ಸ್ಫಟಿಕಸ್ಪಷ್ಟ. ಕಲಾವಿದರು, ಗಣ್ಯರು, ರಾಜಕಾರಣಿಗಳು ವಿದೇಶ ಯಾತ್ರೆಯ ತೆವಲನ್ನು ವಿಶ್ವಕನ್ನಡ ಸಮ್ಮೇಳನದ ಹೆಸರಿನಲ್ಲಿ ತೀರಿಸಿಕೊಳ್ಳುವ ಮೋಜಿನ ದುರಂತ ಒಂದುಕಡೆಯಾದರೆ ಗಣಿ, ಲಂಚ, ಆರೋಪ-ಪ್ರತ್ಯಾರೋಪಗಳಲ್ಲಿ ಪ್ರಜಾ ಪ್ರಭುತ್ವ ವ್ಯವಸ್ಥೆಯ ಅಣಕ, ಲೂಟಿ ಮತ್ತೊಂದು ಕಡೆ. ಒಟ್ಟಿನಲ್ಲಿ ಬಡ ಬೋರೇಗೌಡನ ಬೆವರಿನ ತೆರಿಗೆ ಹಣ ನಯವಂಚಕರ ತೆವಲಿಗೆ !

ಇನ್ನು ನಮ್ಮ ಮಾಧ್ಯಮಗಳು ! ಅಮೆರಿಕಕ್ಕೆ ತಮ್ಮ ಬುದ್ಧಿಯನ್ನು ಒತ್ತೆ ಇಟ್ಟವರು. ಫಿಡೆಲ್ ಕ್ಯಾಸ್ಟ್ರೋನ ಅವಸಾನದ ಆಕಾಂಕ್ಷಿ ಅಮೆರಿಕಾ ಅಧ್ಯಕ್ಷನ ಪರ ತುತ್ತೂರಿ ಊದುವ, ಫಿಡೆಲ್ ಕ್ಯಾಸ್ಟ್ರೋನ ಸಮರ್ಥ ಆಡಳಿತವನ್ನು ಮರೆಮಾಚುವ ಈ ಮಾಧ್ಯಮದವರು ಸ್ವವಿವೇಚನೆಯನ್ನೇ ನೀಗಿಕೊಂಡ ಮತಿಭ್ರಷ್ಟರು. ಬಿಲ್ ಕ್ಲಿಂಟನ್-ಲೆವೆನೆಸ್ಕಿ ಲೈಂಗಿಕ ಹಗರಣವನ್ನು – ಅದು ಕನಿಷ್ಠ ಕಾಲಂಗೂ ಯೋಗ್ಯವಲ್ಲದ್ದು – ಚಿತ್ರಸಹಿತ ದಪ್ಪದಪ್ಪ ಅಕ್ಷರಗಳಲ್ಲಿ ಮುಖಪುಟದಲ್ಲೇ ಮುದ್ರಿಸುವ ಭಾರತೀಯ ಮಾಧ್ಯಮಗಳವರು ಮಾನಸಿಕವಾಗಿ ಇನ್ನೂ ಗುಲಾಮ ರಾಗಿಯೇ ಉಳಿದಿದ್ದಾರೆ. ಅವರಿಂದ ಹೆಚ್ಚಿನದನ್ನು ನಿರೀಕ್ಷಿಸುವುದು ಹುಂಬತನ ಅಲ್ಲವೆ ?

ಮೇಲಿನ ನಾಲ್ಕು ಮಹತ್ವದ ಅಂಶಗಳನ್ನು ಕುರಿತ 'ಈ ತಿಂಗಳು' ನಮ್ಮತನದ ಜಾಗೃತಿಯಿಂದ ವಂಚಿತರಾಗದೆ ನಿಜ ನೆಲೆಯಲ್ಲಿ ನಿಲ್ಲಬೇಕೆಂಬ ಅರಿವನ್ನು ತಂದುಕೊಡುತ್ತದೆ. ಅಭಿನಂದನೆಗಳು.

ಹಾಸನ **ಜ. ಹೊ. ನಾರಾಯಣಸ್ವಾಮಿ**

ಜಾನಪದ ಗಾರುಡಿಗ, ಸುಮಧುರ ಚಿತ್ರಗೀತೆಗಳ ಕರ್ತಾರ, ಅಪ್ಪಟ ಗಾಂಧೀವಾದಿ, ಡಾ॥ ಎಸ್. ಕೆ. ಕರೀಂ ಖಾನ್ ನಮ್ಮ ನಾಡು ಕಂಡ ಮತ್ತೋರ್ವ ಮಹಾನ್ ಚೇತನ. ಈ ದಿಗ್ಗಜನನ್ನು ಕಳೆದುಕೊಂಡು ನಾವು ಮತ್ತೊಮ್ಮೆ ಶೂನ್ಯದೆಡೆಗೆ ಸಾಗಿದ್ದೇವೆ ಎಂದು ಭಾಸವಾಯಿತು. ಈ ಶತಾಯುಷಿಗೆ ಪ್ರಶಸ್ತಿಗಳ ಸರಮಾಲೆಗಳೇ ದಕ್ಕಿದ್ದರೂ ಬರೀ ಕಷ್ಟ ಕಾರ್ಪಣ್ಯಗಳನ್ನೇ ಉಂಡ ಇವರ ಬದುಕಿನ ಬಗ್ಗೆ ಅರಿತಾಗ ಕಣ್ಣಲ್ಲಿ ಕಂಬನಿ ತುಂಬಿಬಂತು.

''ನುಡಿ ಮನ ಶಿವ ಗುಣ ಸಂಕೀರ್ತನ'' ಎಂದ ಈ ತ್ರಿಭಾಷಾ ಕೋವಿದ ಜನಪದ ಸೃಷ್ಟಿ, ಸಂಸ್ಕೃತಿಯ ಆಳ ಅಧ್ಯಯನ ನಡೆಸಿ ಜಾನಪದ ಸಾಹಿತ್ಯಕ್ಕೆ ತನ್ನನ್ನು ತಾನು ತೊಡಗಿಸಿಕೊಂಡ ಪರಿ ನಮ್ಮ ಐಸಿರಿಯೇ ಸರಿ. ನಾಡು ಕಂಡ ಮಹಾನುಭಾವನನ್ನು ಖಂಡಿತ, ಲೇಖಕರು ಪ್ರತಿಪಾದಿಸಿದಂತೆ, ಮರೆಯಲಾರೆವು ನಾವು.

ಬೆಂಗಳೂರು **ನೆ. ಲ. ರಾಮಮೂರ್ತಿ**

'ಹೊಸತು' ಅನೇಕ ಹೊಸ ವಿಷಯಗಳನ್ನು ಹೊತ್ತು ನವನವೋನ್ಮೇಷವಾಗಿ ಹೊರಬರುತ್ತಿದೆ. ಆಗಸ್ಟ್ ೨೦೦೬ರ ಸಂಚಿಕೆಯಲ್ಲಿ ಡಾ॥ ಮಾಧವಿ ಎಸ್. ಭಂಡಾರಿಯವರು ಅನುವಾದಿಸಿರುವ ಒರಿಯಾ ಕಥೆ 'ಮುಚ್ಚಿದ ಬಾಗಿಲು' ಮಾನವೀಯತೆಯ ದೃಷ್ಟಿಕೋನಗಳಿಂದ ಉತ್ತಮ ಕಥೆಯಾಗಿ ನಿಲ್ಲುತ್ತದೆ. ಅನುವಾದ ತುಂಬಾ ಚೆನ್ನಾಗಿದೆ. ಫಕೀರನ ಅಮ್ಮನ ಪಾತ್ರ, ಆ ಪಾತ್ರಕ್ಕೆ ಬಳಸಿದ ಭಾಷೆ ಸೊಗಸಾಗಿ ಮೂಡಿಬಂದಿವೆ. ಅಬ್ಬಾಸ್ ಮೇಲಿನಮನಿ ಯವರ ಎರಡೂ ಕಥೆಗಳು ಚಿಕ್ಕವಾಗಿದ್ದರೂ ಅರ್ಥ ವತ್ತಾಗಿದ್ದು ಇಂದಿನ ಸಮಾಜಕ್ಕೆ ಇಂತಹ ಅನೇಕ ಕಥೆಗಳ ಅವಶ್ಯಕತೆಯಿದೆ ಎಂಬುದನ್ನು ತೋರಿಸಿವೆ. ಎರಡೂ

ಕಥೆಗಳಲ್ಲಿ ವಾಸ್ತವಿಕತೆ, ಸಹಜತೆ ಇವೆ. ಮತಾಂಧತೆಯಲ್ಲಿ ಕೋಮುಕೋಮುಗಳ ನಡುವೆ ಕಿಚ್ಚು ಹಚ್ಚುವ ಜನರು ಇಂತಹ ಕಥೆಗಳನ್ನು ಓದಬೇಕು. ಅಂಥವರಲ್ಲಿ ಕೆಲವರಾದರೂ ಕಥೆಯನ್ನು ಓದಿ ಬದಲಾದರೆ ಲೇಖಕರ ಶ್ರಮಕ್ಕೆ ನಿಜವಾದ ಸಾರ್ಥಕತೆ ಸಿಗುತ್ತದೆ.

ನವದೆಹಲಿ **ಕ. ಕೃ. ಮೂರ್ತಿ**

ಸುವರ್ಣ ಕರ್ನಾಟಕ ವರ್ಷದಲ್ಲಿ 'ಹೊಸತು' ಏನನ್ನು ಹೇಳುತ್ತಿದೆ ಎಂಬುದನ್ನು ಗಮನಿಸಿದಾಗ ಪ್ರತಿ ಮಾಸಿಕ ಸಂಚಿಕೆಯಲ್ಲಿ ಕನ್ನಡ ಭಾಷೆ ಪರ ಚಿಂತನೆಗಳು, ಕನ್ನಡ ಜನಜಾಗೃತಿ, ಸಾಹಿತ್ಯ ಮತ್ತು ಸಂಸ್ಕೃತಿ, ಕನ್ನಡ ಜನತೆ, ಶುದ್ಧ ಸಾಹಿತ್ಯ ಹಾಗೂ ಶಾಸ್ತ್ರ ಸಾಹಿತ್ಯ ಅಥವಾ ಸೃಜನೇತರ ಸಾಹಿತ್ಯ ಬೆಳೆದುಬಂದ ದಾರಿಯನ್ನು ಗುರುತಿಸುತ್ತದೆ. ಸಾಹಿತ್ಯ ಮತ್ತು ಪರಿಸರ ಚಳುವಳಿ, ಸಾಹಿತ್ಯ ಮತ್ತು ಧರ್ಮ ಮುಂತಾದ ಲೇಖನಗಳು ಆಗಸ್ಟ್ ೨೦೦೬ರ 'ಹೊಸತು'ನಲ್ಲಿ ಕಂಡು ವಿಚಾರ ವಿಮರ್ಶೆ ಮಾಡಿದಾಗ ಇದೊಂದು ಕನ್ನಡಿಗರ ಹೆಮ್ಮೆಯ ದಾಖಲಾತಿ ಎನಿಸುತ್ತದೆ.

ನಾಗರಹಾಳು, ಬಳ್ಳಾರಿ ಜಿಲ್ಲೆ **ನಾ. ಮ. ಬಸವರಾಜಯ್ಯ**

'ಹೊಸತು' ಸದಾ 'ಚಿರಚೇತನ ಚಿರನೂತನ'. ಇಲ್ಲಿ ಬರುವ ಲೇಖನ, ಕಥೆ, ಕಾವ್ಯ ಎಲ್ಲವೂ ವಿದ್ವತ್‌ಪೂರ್ಣ ಮತ್ತು ವಿಚಾರ ಪ್ರಧಾನವಾದಂಥವು. ನನಗೆ ಪ್ರತಿ ತಿಂಗಳ 'ಹೊಸತು' ಇಷ್ಟವೇ. ಇದು ಉತ್ಪ್ರೇಕ್ಷೆಯ ಮಾತಲ್ಲ, ಸೂರ್ಯಸತ್ಯ. ಈ ತಿಂಗಳು (ಆಗಸ್ಟ್) ನನಗೆ ಹಲವಾರು ಕಾರಣಗಳಿಗೆ ಇಷ್ಟವಾಯಿತು. ಅದು ಈ ತಿಂಗಳು, ಸಂಪಾದಕೀಯದಿಂದ ಕಥೆ, ಕಾವ್ಯ, ವಿಚಾರಶೀಲ ಲೇಖನಗಳಿಂದಾಗಿಯೂ ಕೂಡ. ಉದಾಹರಣೆಗೆ, ಎಸ್. ಎಸ್. ಹಿರೇಮಠ ಅವರು ಬರೆದ 'ಸಾಹಿತ್ಯ ಮತ್ತು ಧರ್ಮ-ದರ್ಶನಗಳ ಒಳ ಸಂಬಂಧ' ಎಂಬ ಲೇಖನ ಅತ್ಯಂತ ಕುತೂಹಲಕಾರಿ ಹಾಗೂ ವಿಚಾರ ಪ್ರಧಾನ ಅಂಶಗಳಿಂದ ಕೂಡಿತ್ತು ಮತ್ತು ಜಿಜ್ಞಾಸೆಯನ್ನು ಮೂಡಿಸುವಂತಹದಾಗಿತ್ತು. ಅಂತೆಯೇ ಬೇರೆ ಲೇಖನಗಳು ಕತೆ, ಕವನಗಳು ಸಹ.

ಧಾರವಾಡ **ಸಿ. ಮಂಜುನಾಥ**

**ಸಾರಾ ಅಬೂಬಕ್ಕರ್**

ಸಾಹಿತ್ಯ ಕ್ಷೇತ್ರದಲ್ಲಿ ಜಾತಿ, ಮತ, ಧರ್ಮ ಸಂಬಂಧಗಳಿಗಿಂತ ಮೀರಿ ಬೆಳೆದು ಅತ್ಯಂತ ಸುಂದರ, ಸಹಜ ಹಾಗೂ ಮಾನವ ಜೀವನಕ್ಕೆ ಸಂಬಂಧಿಸಿದ ವಿಚಾರಗಳನ್ನು ಮನಮುಟ್ಟುವಂತೆ ಬರೆದು ಓದುಗರ ಹೃದಯಕ್ಕೆ ನಿಕಟರಾದ ಅತ್ಯಂತ ಸರಳ ವ್ಯಕ್ತಿ ಸಾರಾ ಅಬೂಬಕ್ಕರ್ ಅವರ ವ್ಯಕ್ತಿತ್ವ ಮತ್ತು ಲೇಖನಗಳ ಬಗ್ಗೆ ಮೂಡಿಬಂದಿರುವ, ಚಿಕ್ಕದಾದರೂ ಚೊಕ್ಕ ಮಾಹಿತಿಪೂರ್ಣ ಬರಹವಿದು. 'ಸಹನಾ' ಕಾದಂಬರಿಯಿಂದ ಕನ್ನಡಿಗರ ಒಡನಾಡಿಯಾದ ಸಾರಾ ತಮ್ಮ ಆದರ್ಶಪ್ರಾಯ ಬರವಣಿಗೆಗಳಿಂದ, ವ್ಯಕ್ತಿತ್ವದಿಂದ ಹಾಗೂ ವಿಚಾರಗಳಿಂದ ಜನತೆಗೆ ಅತ್ಯಂತ ಹತ್ತಿರವಾಗಿರುವ ವ್ಯಕ್ತಿ. ಸಾಂಪ್ರದಾಯಿಕ ಬದುಕಿನಿಂದ ತನ್ನನ್ನು ಪ್ರತ್ಯೇಕಗೊಳಿಸದೆ, ಸಾಮಾಜಿಕ ಬದುಕಿನ ಆರ್ಥಿಕತೆ, ಸಂಬಂಧಗಳು ಹಾಗೂ ಧಾರ್ಮಿಕತೆಯ ಬಗ್ಗೆ ಸ್ಪಷ್ಟ ಅಭಿಪ್ರಾಯಗಳಿಂದ ವಿಕ್ಷಿಪ್ತ ಎನಿಸುವ ವಿಚಾರಗಳನ್ನು ಆಂತರಿಕ ಮೂಲಭೂತವಾದವನ್ನು ಸರಳವಾಗಿ ಓದುಗರಿಗೆ ಮುಟ್ಟಿಸಿದ ಸಾರಾ ಬದುಕಿಗೆ ಅತ್ಯಂತ ನಿಕಟ ವಿಚಾರಗಳನ್ನು ಸೂಕ್ತ ರೀತಿಯಲ್ಲಿ ಬರೆದು ಜನರೊಂದಿಗೆ ಒಂದಾಗಿಬಿಟ್ಟಿದ್ದಾರೆ. ಸಂಕೀರ್ಣ ಸಮಾಜದಲ್ಲಿ ಬದುಕಿನ ಮೂಲ ಉದ್ದೇಶಗಳನ್ನು ಗುರುತಿಸುತ್ತಾ ಬರಹಗಳಲ್ಲಿ ಬಡತನ ಮತ್ತು ಧರ್ಮಗಳ ಅವಶ್ಯಕತೆಗಿಂತ ಜೀವನದ ಮೌಲ್ಯಗಳನ್ನು ಗುರುತಿಸಿದ ಸಾರಾ ಉತ್ತಮ ಲೇಖಕಿ ಹಾಗೂ ವ್ಯಕ್ತಿಯಾಗಿ ಆದರ್ಶಪ್ರಾಯರಾಗಿದ್ದಾರೆ.

ಬೆಂಗಳೂರು **ನರೇಂದ್ರ ಸಿರಕಜೆ**

ಡಾ॥ ರಾಜಕುಮಾರ್ ನಿಧನದ ನಂತರ 'ಹೊಸತು' ಆ ಬಗ್ಗೆ ಎರಡು ಮುಖ್ಯ ಲೇಖನಗಳನ್ನು ಪ್ರಕಟಿಸಿತು. ಬರಗೂರರ ಲೇಖನ ರಾಜಕುಮಾರ್ ಅವರ ಸಾಧನೆಯನ್ನು ದಾಖಲಿಸುವ ಮೂಲಕ ಮಹತ್ವದ್ದೆನಿಸಿದರೆ ರಹಮತ್ ಅವರ ಲೇಖನ ರಾಜಕುಮಾರ್ ಅವರಂಥ ಜನಪ್ರಿಯ ಕಲಾವಿದರ ಬದುಕು-ಸಾವುಗಳು ಜನಜೀವನದ ಮೇಲೆ ಉಂಟುಮಾಡುವ ತವಕ-ತಲ್ಲಣಗಳನ್ನು ದಾಖಲಿಸುವ ಮೂಲಕ ಮಹತ್ವದ್ದೆನಿಸುತ್ತದೆ.

ಕಲಾವಿದನೊಬ್ಬನಿಗೆ ತನ್ನ ಅಭಿಮಾನಿಗಳಲ್ಲಿ ಕಲೆಯ ಅಭಿರುಚಿಯನ್ನು ತಣಿಸುವ ಜವಾಬ್ದಾರಿಯ ಜೊತೆ ಅವರ ಅಭಿರುಚಿಯನ್ನು ಸಂಸ್ಕರಿಸುವ ಜವಾಬ್ದಾರಿಯೂ ಕೂಡ ಇರುತ್ತದೆ, ಇರಬೇಕು ಕೂಡ. ಮೊದಲನೇ ಜವಾಬ್ದಾರಿಯನ್ನು ಎಲ್ಲರೂ ನಿರ್ವಹಿಸುತ್ತಾರೆ. ಆದರೆ ಎರಡನೇ ಜವಾಬ್ದಾರಿಯನ್ನು ನಿರ್ವಹಿಸುವ ಕಲಾವಿದರು ನಮ್ಮಲ್ಲಿ ವಿರಳ. ಈ ಎರಡನೇ ಜವಾಬ್ದಾರಿಯನ್ನು ನಿರ್ವಹಿಸುವ ಕಲಾವಿದ ಸಹಜವಾಗಿಯೇ ಇತರರಿಗಿಂತ ಭಿನ್ನವಾಗಿ ಸಾಂಸ್ಕೃತಿಕ ಮಹತ್ವ ಪಡೆದುಕೊಳ್ಳುತ್ತಾನೆ. ಡಾ॥ ರಾಜಕುಮಾರ್ ತಮ್ಮ ನಾಲ್ಕು ದಶಕಗಳ ಸುದೀರ್ಘ ಕಲಾ ಜೀವನದಲ್ಲಿ ಈ ಎರಡನೇ ಜವಾಬ್ದಾರಿಯನ್ನು ಎಷ್ಟರಮಟ್ಟಿಗೆ ನಿರ್ವಹಿಸಿದರು ಎಂಬುದನ್ನು ನಾವಿಂದು ಅವಲೋಕನ ಮಾಡಬೇಕಾಗಿದೆ.

ಭಾರತದಂಥ ಸಾಮಾಜಿಕ ಸಂದರ್ಭದಲ್ಲಿ ಒಬ್ಬ ಕಲಾವಿದನ, ಅದರಲ್ಲೂ ಸಿನಿಮಾ ಕಲಾವಿದನ ಜವಾಬ್ದಾರಿ ಒಬ್ಬ ಪುಸ್ತಕ ಲೇಖಕನಿಗಿಂತ ಹೆಚ್ಚು ಎಂದೇ ನನ್ನ ಭಾವನೆ. ಒಬ್ಬ ಲೇಖಕ ತನ್ನ ಪುಸ್ತಕದಲ್ಲಿ ಒಂದು ಮೂಢನಂಬಿಕೆಯನ್ನೋ ಅವೈಜ್ಞಾನಿಕ ವಿಚಾರಧಾರೆಯನ್ನೋ ಪ್ರತಿಪಾದಿಸಿದರೆ ಅವನ ಓದುಗರು ಅದನ್ನು ಪ್ರಶ್ನಿಸಿ ತಿರಸ್ಕರಿಸುವ ಸಾಧ್ಯತೆ ಸಾಕಷ್ಟು ಇದೆ. ಆದರೆ ಒಬ್ಬ ನಾಯಕನಟ ಅಂಥದೊಂದು ವಿಚಾರಧಾರೆಯನ್ನು ತನ್ನ ಪಾತ್ರದ ಮೂಲಕ ಪ್ರತಿಪಾದಿಸಿದಾಗ ಈ ಪ್ರಶ್ನಿಸಿ ತಿರಸ್ಕರಿಸುವ ಸಾಧ್ಯತೆಗಳು ಎಷ್ಟರಮಟ್ಟಿಗೆ ಇರುತ್ತವೆ ? ಇಲ್ಲ ಎನ್ನುವಷ್ಟು ಕಡಿಮೆ ಪ್ರಮಾಣದಲ್ಲಿರುತ್ತವೆ. ತನ್ನ ನಾಯಕ ಮಾಡಿದ್ದನ್ನು ಯಥಾವತ್ತಾಗಿ ಅನುಕರಿಸುವ ಸಾವಿರ ಸಾವಿರ ಸಂಖ್ಯೆಯ ಜನ ನಮ್ಮಲ್ಲಿದ್ದಾರೆ. ಇಂಥ ಜನರ ಜೀವನದ ಮೇಲೆ ರಾಜ್ ಮಾಡಿದ ಪರಿಣಾಮ ಎಂಥದು ಎಂಬುದನ್ನು ಶೋಧಿಸಿಕೊಳ್ಳುವುದು ಸಾಂಸ್ಕೃತಿಕವಾಗಿ ಮುಖ್ಯವಾದ ಸಂಗತಿಯಾಗುತ್ತದೆ. ಭಕ್ತ ಸಿರಿಯಾಳ ಸಿನಿಮಾ (ಇದು ರಾಜ್ ಅಭಿನಯದ್ದಲ್ಲ) ನೋಡಿಬಂದ ಯಾವುದೋ ಒಂದು ಹಳ್ಳಿಯ ದನಕಾಯುವ ಹುಡುಗರು ಮರುದಿನ ದನ ಮೇಯಿಸುವಾಗ ಒಬ್ಬ ಸಿರಿಯಾಳ ಆಗಿ ಮತ್ತೊಬ್ಬ ಶಿವನಾಗಿ ಇನ್ನೊಬ್ಬ ಸಿರಿಯಾಳನ ಮಗನಾಗಿ ಅಭಿನಯ ಮಾಡಲು ಹೋಗಿ ಸಿರಿಯಾಳನ ಪಾತ್ರಧಾರಿ ಸಿನಿಮಾದಂತೆ ಮಗನ ತಲೆ ಕತ್ತರಿಸಿದ ಎಂಬ ಸುದ್ದಿ ಆ ಕಾಲದಲ್ಲಿ ಹಬ್ಬಿತ್ತು. ಘಟನೆ ನಡೆದದ್ದು ಸುಳ್ಳೂ ಇರಬಹುದು. ಆದರೆ ಆ ಸಾಧ್ಯತೆಗಳು ಇಲ್ಲ ಎನ್ನಲು ಸಾಧ್ಯವೇ ? ಅದರಂತೆ ಇನ್ನಾವುದೋ ಸಿನಿಮಾದಲ್ಲಿ ಭಕ್ತನಾದ ಹುಡುಗನೊಬ್ಬ ದೇವಾಲಯದ ಕಂಬಕ್ಕೆ ತಲೆ ಹೊಡೆದುಕೊಳ್ಳುವ ದೃಶ್ಯವಿದೆ. ಅವನು ತಲೆಹೊಡೆದುಕೊಳ್ಳುವಾಗ ಗರ್ಭಗುಡಿಯಲ್ಲಿನ ಮೂರ್ತಿಯಿಂದ ದೇವರು ಪ್ರತ್ಯಕ್ಷವಾಗಿ ಬಂದು ಅವನನ್ನು ಮೆಚ್ಚಿ ಆಶೀರ್ವದಿಸುತ್ತಾನೆ. ಈ ದೃಶ್ಯ ನಾನು ಚಿಕ್ಕವನಿದ್ದಾಗ ಎಷ್ಟು ಪ್ರಭಾವ ಉಂಟುಮಾಡಿತ್ತು ಎಂದರೆ ಯಾರೂ ಸುಳಿಯದ ನಮ್ಮೂರಿನ ಹೊರಭಾಗದಲ್ಲಿರುವ ದೇವಾಲಯದಲ್ಲಿ ನಾನೂ ಕೂಡ ತಲೆಹೊಡೆದುಕೊಳ್ಳತೊಡಗಿದ್ದೆ. ದೇವರು ಬಂದೇ ಬರುತ್ತಾನೆ, ನನ್ನ ಭಕ್ತಿಯನ್ನು ಮೆಚ್ಚುತ್ತಾನೆ ಎಂದು ನಾನು ತಿಳಿದುಕೊಂಡಿದ್ದೆ. ದೇವರು ಬರುತ್ತಿದ್ದನೋ ಅಥವಾ ನನ್ನ ತಲೆ ಒಡೆದು ನಾನು ಸಾಯುತ್ತಿದ್ದೆನೋ! ಅಷ್ಟರಲ್ಲಿ ಯಾರೋ ಊರ ಹಿರಿಯರು ಅಲ್ಲಿಗೆ ಬಂದರು. ನಾನು ಎದ್ದುಹೋದೆ.

ಇಂಥ ಪ್ರಭಾವ ತಮ್ಮ ನಟನೆಯಿಂದ ಆಗುತ್ತದೆ ಎಂಬುದನ್ನು ಬಹಳಷ್ಟು ಕಲಾವಿದರು ಗಮನಿಸುವುದಿಲ್ಲ. ರಾಜ್ ಇದನ್ನು ಗಮನಿಸಿದರೆ ? ೮೦ರ ದಶಕದ ಜನಪ್ರಿಯ ದೇವರಾದ ಮಂತ್ರಾಲಯದ ರಾಘವೇಂದ್ರ ಸ್ವಾಮಿಯ ಸಾವಿರಾರು ಭಕ್ತರು ಕರ್ನಾಟಕದಲ್ಲಿ ನಿರ್ಮಾಣವಾದದ್ದರ ಹಿಂದೆ ಮತ್ತು ೯೦ರ ದಶಕದಲ್ಲಿ ಈ ದೇವರನ್ನು ಹಿಂದೆ ಹಾಕಿ ಅತ್ಯಂತ ಜನಪ್ರಿಯತೆ ಗಳಿಸಿದ ಬ್ರಹ್ಮಚಾರಿ ದೇವರಾದ ಅಯ್ಯಪ್ಪಸ್ವಾಮಿಯ ಭಕ್ತರ ಪಡೆಗಳೇ ಕರ್ನಾಟಕದಲ್ಲಿ ನಿರ್ಮಾಣವಾದದ್ದರ ಹಿಂದೆ ರಾಜ್ ಅವರ ಚಿತ್ರಗಳ ಪ್ರಭಾವ ಇದ್ದಿರಲಾರದೆ ?

ಮುಂದಿನ ಪುಟಕ್ಕೆ

**ರಾಜ್ಯಮಟ್ಟದ ಜನಪದ ಗೀತೆ ಸಮೂಹ ಸ್ಪರ್ಧೆ ೨೦೦೬**

'ರಂಗ ಸಂಸ್ಥಾನ' ಸಂಸ್ಥೆಯು ಜಾನಪದ ಸಂಗೀತವನ್ನು ಹಾಗೂ ಜನಪದ ಸಾಹಿತ್ಯವನ್ನು ಜೀವಂತವಾಗಿಡುವ ಸದುದ್ದೇಶದಿಂದ ಮತ್ತು ಜನಪದ ಗಾಯಕರನ್ನು ಗುರುತಿಸುವ ಸಲುವಾಗಿ ೧೮ ವರ್ಷ ಮೇಲ್ಪಟ್ಟವರಿಗೆ ರಾಜ್ಯಮಟ್ಟದ ಜನಪದ ಗೀತೆ ಸಮೂಹ ಸ್ಪರ್ಧೆಯನ್ನು ದಿನಾಂಕ: ೨೮-೧೦-೨೦೦೬ರಂದು ಬೆಳಿಗ್ಗೆ ೯.೦೦ ಗಂಟೆಗೆ ಕನ್ನಡ ಸಾಹಿತ್ಯ ಪರಿಷತ್ತು ಸಭಾಂಗಣದಲ್ಲಿ ಏರ್ಪಡಿಸಿದೆ. ಸ್ಪರ್ಧಿಗಳು ಕನಿಷ್ಠ ನಾಲ್ಕು ಜನರಿರಬೇಕು. ೧೮ ವರ್ಷದಿಂದ ೩೦ ವರ್ಷ ಹಾಗೂ ೩೦ ವರ್ಷ ಮೇಲ್ಪಟ್ಟವರಿಗೆ ಎರಡು ವಿಭಾಗಗಳಿರುತ್ತವೆ. ಸ್ಪರ್ಧೆಯ ದಿನದಂದೇ ವಿಜೇತರಿಗೆ ಬಹುಮಾನಗಳನ್ನು ನೀಡಲಾಗುವುದು.

*ಸ್ಪರ್ಧೆಯ ಅರ್ಜಿಗಳಿಗಾಗಿ ಸಂಪರ್ಕಿಸಿ :*
**ಅಧ್ಯಕ್ಷರು**, ರಂಗ ಸಂಸ್ಥಾನ, ನಂ. ೫೬೨೫
೧ನೇ ಮಹಡಿ, ೧೬ನೇ ಮುಖ್ಯರಸ್ತೆ, ೩ನೇ ಹಂತ
ಮಂಜುನಾಥನಗರ, ಬೆಂಗಳೂರು - ೫೬೦ ೦೧೦

*ಹಿಂದಿನ ಪುಟದಿಂದ*

ಯಾವುದೇ ಒಬ್ಬ ಮುಖ್ಯ ಕಲಾವಿದ ಅಥವಾ ಸಾಹಿತಿ ತನ್ನ ಕಾಲದ ಸಮಾಜವನ್ನು (ಅದು ಎಷ್ಟೇ ಚೆನ್ನಾಗಿದ್ದರೂ) ಅದು ಹೇಗಿರಬೇಕಿತ್ತೋ ಹಾಗೆ ಇಲ್ಲ ಎಂದು ಭಾವಿಸುತ್ತಾನೆ. ಹೀಗೆ ಭಾವಿಸುವುದು ಅವನಿಗೆ ತನ್ನ ಜವಾಬ್ದಾರಿ ಏನು ಎಂಬುದನ್ನು ಆಲೋಚಿಸಲು ತಕ್ಕ ಅಡಿಪಾಯ ಹಾಕಿಕೊಡುತ್ತದೆ. ತಮ್ಮ ಕೈಲಾದ ಮಟ್ಟಿಗೆ ತಾವಿರುವ ಸಮಾಜವನ್ನು ಒಂದಿಷ್ಟು ಚಲಿಸುವಂತೆ ಮಾಡುವ ಆಶಯವನ್ನು ಅವರೆಲ್ಲ ಹೊಂದಿರುತ್ತಾರೆ. ಹಾಗಾಗಿ ತಮ್ಮ ಸಾಧನೆಯ ಮೂಲಕ ಈ ಸಮಾಜವನ್ನು ಒಂದಿಷ್ಟು ಎಳೆಯುವ ಪ್ರಯತ್ನ ಮಾಡುತ್ತಾರೆ. ಇವರಲ್ಲಿ ಕೆಲವರು ಮುಂದಕ್ಕೆ ಎಳೆದರೆ ಮತ್ತೆ ಕೆಲವರು ಹಿಂದಕ್ಕೆ ಎಳೆಯುತ್ತಾರೆ. ಸಮಾಜ ಸಹಜವಾಗಿ ಬಲ ಯಾವ ಕಡೆ ಹೆಚ್ಚಿರುತ್ತದೆಯೋ ಆ ಕಡೆ ಸ್ವಲ್ಪ ಚಲಿಸುತ್ತದೆ. ಈ ಚಲನೆ ಎಳೆಯುವವರ ಬಲ ಮಾತ್ರವಲ್ಲದೆ ಎಳೆಸಿಕೊಳ್ಳುವ ಸಮಾಜದ 'ತೂಕ'ವನ್ನೂ ಅವಲಂಬಿಸಿರುತ್ತದೆ. ಎರಡೂ ಕಡೆಯ ಎಳೆತ ಸಮಬಲದಿಂದ ಕೂಡಿದಾಗ ಸಮಾಜ ಆ ಕಡೆಯೂ ಚಲಿಸದೆ ಈ ಕಡೆಯೂ ಚಲಿಸದೆ ಬರಿ ಒಂದಿಷ್ಟು ಗೊಂದಲ ಅಥವಾ ಗದ್ದಲಕ್ಕೆ ಆಸ್ಪದ ಆಗುವುದೂ ಉಂಟು.

ಒಬ್ಬ ಪ್ರಮುಖ ಕಲಾವಿದನಾಗಿ ಡಾ|| ರಾಜಕುಮಾರ್ ನಮ್ಮ ಸಮಾಜವನ್ನು ಯಾವ ಕಡೆ ಎಳೆದರು ? ಅವರ ಅನೇಕ ಚಿತ್ರಗಳನ್ನು ನೋಡಿದ ಯಾರಾದರೂ ಒಂದಿಷ್ಟು ಯೋಚಿಸಿ ಕೊಡಬಹುದಾದ ಉತ್ತರ ''ಅವರು ಎರಡೂ ಕಡೆ ಎಳೆದಿದ್ದಾರೆ'' ಎಂಬುದು ಆಗಿರುವ ಸಾಧ್ಯತೆ ಹೆಚ್ಚು. ಅವರ ಈ ಎಳೆತ ಅವರು ಪ್ರಜ್ಞಾಪೂರ್ವಕವಾಗಿಯೇ ಮಾಡಿದ್ದು ಎಂದು ನಾವ್ಯಾರೂ ಭಾವಿಸುವ ಅಗತ್ಯವಿಲ್ಲ. ಯಾವ ಕಡೆ ಎಳೆದದ್ದು ಹೆಚ್ಚು ? ಇದನ್ನು ಖಚಿತವಾಗಿ ಹೇಳಬೇಕಾದರೆ ಅವರೆಲ್ಲ ಚಿತ್ರಗಳನ್ನು ಯಾರಾದರೊಬ್ಬರು ಅಧ್ಯಯನಕ್ಕೆ ಒಳಪಡಿಸಿ ಅವರ ಅಭಿನಯ ಉಂಟುಮಾಡಿದ ಸಾಮಾಜಿಕ ಪ್ರಭಾವವನ್ನು ದಾಖಲಿಸುವ ಪ್ರಯತ್ನವಾಗಬೇಕು. ಆಗ ನಾವು ರಾಜ್ ಅಂಥವರನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತದೆ.

*ಸಾಲೇಕೊಪ್ಪ, ಶಿವಮೊಗ್ಗ ಜಿಲ್ಲೆ* — ***ರಾಜೇಂದ್ರ ಬುರಡಿಕಟ್ಟಿ***

### ಕೊನೆಗೂ ಬುಷ್ ನಮಗೆ ದೇವರಾದ

''ನಾವು ಬಲಿಷ್ಠರು, ನಮ್ಮ ರಾಷ್ಟ್ರ ಬಲಿಷ್ಠ'' ಎಂದು ನಮ್ಮ ಪ್ರಧಾನಿಗಳು ಹೇಳುತ್ತಾರೆ. ಆದರೆ ''ನನ್ನಷ್ಟು ಬಲಿಷ್ಠರು ಯಾರೂ ಇಲ್ಲ'' ಎಂದು ಅಹಂಕಾರದಿಂದ ಅಧಿಕಾರದ ಮದದಿಂದ ಬೀಗುತ್ತಿರುವ ಬುಷ್ ಮುಂದೆ 'ಜೀ ಹುಜೂರ್' ಎಂದು ನಮ್ಮ ಪ್ರಧಾನಿಗಳು ಕೈಕಟ್ಟಿ ಯಾಕೆ ನಿಲ್ಲುತ್ತಾರೆ ? ಆತನ ನರಿಬುದ್ಧಿಯನ್ನು ಅರಿಯದೆ (ಅಥವಾ ಅರಿತೇ ?) ಪರಮಾಣು ಒಪ್ಪಂದಕ್ಕೆ ಯಾಕೆ ಒಪ್ಪಿಕೊಂಡರು ? ''ಈ ಒಪ್ಪಂದದಿಂದ ನಮಗೆ ಲಾಭ ವಲ್ಲದೆ ಹಾನಿ ಏನೂ ಇಲ್ಲ, ದೇಶದ ಹಿತವನ್ನು ಕಾಪಾಡಿಕೊಂಡೇ ಮುನ್ನಡೆದಿದ್ದೇವೆ'' ಎಂದು ಹೇಳುತ್ತಿದ್ದಾರೆ. ಸದ್ಯಕ್ಕೆ ಅವರ ಮಾತು ನಿಜವೆಂದು ಭಾವಿಸೋಣ. ಮುಂದೆಯಷ್ಟೇ ಅದರ ಪರಿಣಾಮ ಗೊತ್ತಾಗಬೇಕು. ಮೊನ್ನೆಯಷ್ಟೇ ದಿಲ್ಲಿಯಲ್ಲಿ ನಡೆದ ಅಣುವಿಜ್ಞಾನಿಗಳ ಸಭೆ ಯಲ್ಲಿ ಭಾಗವಹಿಸಿದ ವಿಜ್ಞಾನಿಗಳು ಪ್ರಧಾನಿಗಳ ಹೇಳಿಕೆಯಿಂದ ತೃಪ್ತರಾಗಿದ್ದಾರೆಂದು ವರದಿಯಾಗಿದೆ. ಪ್ರಧಾನಿಗಳ ಮುಂದೆ ವಿರೋಧ ವ್ಯಕ್ತಪಡಿಸುವುದು ಸದಾಚಾರ ವಲ್ಲವೆಂದು ಸುಮ್ಮನಿದ್ದಿರಬಹುದೇ ?

ಪರಮಾಣು ಕಾರ್ಯಕ್ರಮ ನಿಲ್ಲಿಸಬೇಕೆಂದು ಉತ್ತರ ಕೊರಿಯಾ ಮತ್ತು ಇರಾನಿನ ಮೇಲೆ ತೀವ್ರ ಒತ್ತಡ ಹಾಕುತ್ತಿರುವ ಬುಷ್ ನರಭಕ್ಷಕ ಮೊನ್ನೆ ಅಮೆರಿಕಾದ ನೆವಾಡಾದಲ್ಲಿ ಇನ್ನೊಂದು ಪರಮಾಣು ಪರೀಕ್ಷೆ ಯಾಕೆ ನಡೆಸಿದ ? ''ನೀನು ಮಾತ್ರ ನಾನು ಹೇಳಿದಂತೆ ಕುಣಿ; ನನ್ನನ್ನು ಪ್ರಶ್ನಿಸಿದರೆ ಜೋಕೆ'', ಎನ್ನುವ ಆತನ ಉದ್ಧಟತನಕ್ಕೆ ಎದೆ ಒಡ್ಡಿ ನಿಲ್ಲುವ ಧೈರ್ಯ ನಮ್ಮ ಬಲಿಷ್ಠ ರಾಷ್ಟ್ರಕ್ಕೆ ಇಲ್ಲದೇ ಹೋಯಿತಲ್ಲಾ! ಈ ವಿಚಾರದಲ್ಲಿ ಇರಾನಿನ ಧೈರ್ಯವನ್ನು, ಆತ್ಮಗೌರವವನ್ನು ಎಷ್ಟು ಕೊಂಡಾಡಿದರೂ ಕಡಿಮೆಯೇ.

*ಬೆಂಗಳೂರು* — **ಎಂ. ವಿ. ಭಟ್**

---

*೫ನೇ ಪುಟದಿಂದ (ಸಂಪಾದಕೀಯ)*

ಷೇರುಗಳ ಮಾರುಕಟ್ಟೆ ಇದ್ದಂತೆ, ಕಮಾಡಿಟೀಸ್ (ಸರಕುಗಳ) ಎಕ್ಸ್‌ಛೇಂಜ್‌ಗಳೂ ಇವೆ. ಲೋಹಗಳಿಗೆ ಎಕ್ಸ್‌ಛೇಂಜುಗಳೂ ಇವೆ. ಈಗ ಕಮಾಡಿಟೀಸ್ ಮಾರುಕಟ್ಟೆಗಳ ಪ್ರಭೇದವಾಗಿ ಕೃಷಿ ಉತ್ಪನ್ನಗಳ ಮಾರುಕಟ್ಟೆಯೂ ಬಂದಿದೆ. ಇಲ್ಲಿ ಗಮನಿಸಬೇಕಾದ್ದು ಈ ಸರಕುಗಳ ಉತ್ಪನ್ನಗಳ ನೇರ ವ್ಯಾಪಾರವಾಗದ ಮಾರುಕಟ್ಟೆಯ ವಿಷಯವನ್ನು. ಈ ಸರಕುಗಳು ಹೆಸರಿಗೆ ಮಾತ್ರ, ಅಷ್ಟೆ. ಅವುಗಳ ಮಾರುಕಟ್ಟೆಗಳಲ್ಲಿನ ವ್ಯವಹಾರಕ್ಕೆ ನೇರ ಸಂಬಂಧವಿಲ್ಲದ, ಆದರೆ ಅವುಗಳಿಂದ ಉತ್ಪನ್ನವಾದ ಡೆರಿವೇಟಿವ್ಸ್ ಮಾರುಕಟ್ಟೆಯ ವಿಷಯ. ಇಲ್ಲಿ ಸರಕುಗಳು ವಾಸ್ತವದಲ್ಲಿ ಅದಲುಬದಲಾಗುವುದಿಲ್ಲ. ವಿವಿಧ ರೀತಿಯ ಪತ್ರಗಳ ನಡುವಿನ ವ್ಯಾಪಾರ ನಡೆದು, ಅವುಗಳ ಲಾಭ ನಷ್ಟಗಳು ದಾಖಲಾಗುತ್ತವೆ. ಷೇರು ಮಾರುಕಟ್ಟೆಯಲ್ಲಿ ಹತ್ತು ರೂ. ಷೇರಿನ ಬೆಲೆ ೧೫೦ ರೂಪಾಯಿ ಎಂದಾಗ ಆ ಕಂಪನಿಯ ಆಸ್ತಿಯ ಮೂಲಬೆಲೆ ಅದರಲ್ಲಿ ಒಂದು ಅಲ್ಪ ಪ್ರಮಾಣದ್ದು ಮಾತ್ರ ಎಂಬುದನ್ನೂ ಗಮನಿಸಬೇಕು. ಹಾಗೆಯೇ, ಒಂದು ವೇಳೆ ಅದು ಕೇವಲ ೮ ರೂಪಾಯಿ ಎಂದಾಗಲೂ ಆ ಕಂಪನಿಗೆ ಅದರಿಂದ ನೇರವಾಗಿ ಯಾವ ಆಘಾತವೂ ಉಂಟಾಗುವುದಿಲ್ಲ. ಕಮಾಡಿಟೀಸ್ ಎಕ್ಸ್‌ಛೇಂಜ್‌ನ ವ್ಯವವಹಾರದ ಪ್ರಮಾಣ ೨೦೦೩-೦೪ರಲ್ಲಿ ದೇಶದ ಒಟ್ಟು ಉತ್ಪಾದನೆಯ (ಜಿ.ಡಿ.ಪಿ.ಯ) ಶೇ. ೫.೮೧ ಇದ್ದದ್ದು ೨೦೦೫-೦೬ ರಲ್ಲಿ ಶೇ. ೬೬ಕ್ಕೆ ಜಿಗಿದು ೨೧.೩೪ ಲಕ್ಷ ಕೋಟಿ ರೂಪಾಯಿಗಳಷ್ಟಾಗಿತ್ತು. ಇದು ಶೀಘ್ರದಲ್ಲೇ ಮುಂಬಯಿ ಸ್ಟಾಕ್ ಎಕ್ಸ್‌ಛೇಂಜ್ ವ್ಯವಹಾರದ ಪ್ರಮಾಣಕ್ಕೂ ಮೀರಿ ಬೆಳೆಯುವ ನಿರೀಕ್ಷೆಯಿದೆ. ದೇಶದ ಆರ್ಥಿಕ ಬೆಳವಣಿಗೆಗೆ ಸಂಬಂಧವಿಲ್ಲದ ಈ ಪ್ರಮಾಣದ ಹಣಕಾಸಿನ ವಹಿವಾಟು ಕಪ್ಪು ಹಣದಂತಹ ಅನೈತಿಕ ಸಂಪತ್ತನ್ನು ಹೊರತರುವ ಹಾಗೆಯೇ ವರ್ಧಿಸುತ್ತಲೇ ಹೋಗುವ ಲಾಟರಿಯಾಗಿರುವುದು ಸ್ಪಷ್ಟ. ಈ ಪ್ರಕ್ರಿಯೆ ವ್ಯವಸ್ಥೆಯನ್ನು ಪೋಷಿಸುವ, ಸಮರ್ಥಿಸುವ ಕೆಲವೇ ಕೋಟ್ಯಾಧೀಶ್ವರರನ್ನು ಸೃಷ್ಟಿಸುತ್ತಾ ಹೋಗುತ್ತದೆ.

ಇದು ಬಂಡವಾಳವು ವ್ಯವಸ್ಥೆಯ ಒಂದು ಸಹಜ ಅಂಗ ಎಂದು ಸುಮ್ಮನಿರಬಹುದಾಗಿತ್ತು. ಆದರೆ, ಈ ಸಟ್ಟಾ ವ್ಯವಹಾರವನ್ನು ಕೃಷಿ ಉತ್ಪನ್ನಗಳಿಗೂ, ಅದರಲ್ಲೂ ಅಕ್ಕಿ, ಬೇಳೆ, ಗೋಧಿ, ಖಾದ್ಯತೈಲ, ಸಕ್ಕರೆಗಳಂತಹ ಆಹಾರ ಸಾಮಗ್ರಿಗಳಿಗೂ ವಿಸ್ತರಿಸಿದ್ದರಿಂದ ಈ ವ್ಯವಹಾರದಲ್ಲಿ ಮೂಗುತೂರಿಸದ ಬಹುಸಂಖ್ಯಾತ ಪ್ರಜೆಗಳ ಬದುಕಿನ ಮೇಲೆ ಆಗುತ್ತಿರುವ ದುಷ್ಪರಿಣಾಮವನ್ನು ಗಮನಿಸಿದ ತಜ್ಞರು ಈ ಕುರಿತು ಪದೇ ಪದೇ ಸರ್ಕಾರವನ್ನು ಎಚ್ಚರಿಸಿದ್ದಾರೆ. ಆಹಾರ ಸಾಮಗ್ರಿಗಳನ್ನು ಇಂಥ ಮಾರುಕಟ್ಟೆಯ ಸರಕಾಗಿಸ ಕೂಡದೆಂದು ಪ್ರಗತಿಪರ ಚಿಂತಕರೂ, ರಾಜಕೀಯ ಪ್ರತಿನಿಧಿಗಳೂ ಒತ್ತಾಯಮಾಡಿದ್ದಾರೆ. ಡೆರಿವೇಟಿವ್ಸ್ ಮಾರುಕಟ್ಟೆಯಲ್ಲಿ ಅಕ್ಕಿಯ ಬೆಲೆ ಅವಾಸ್ತವವಾಗುವಷ್ಟು ನೂರುಪಟ್ಟು ಹೆಚ್ಚಾದರೆ ಅದನ್ನು ಕೊಂಡು, ಶೇಖರಿಸಿಟ್ಟವನು ವಾಸ್ತವ ಬೆಲೆಯನ್ನು ಒಂದಿಷ್ಟಾದರೂ ಹೆಚ್ಚಿಸಿಯೇ ಹೆಚ್ಚಿಸುತ್ತಾನೆ. ಈ ಸಂದರ್ಭದಲ್ಲಿ ಉತ್ಪಾದನೆಯಲ್ಲಿ ಖೋತಾ, ರೈತರಿಗೆ ಉತ್ತಮ ಬೆಲೆ ನೀಡಿ, ಸರ್ಕಾರ ಸಂಗ್ರಹಿಸುತ್ತಿದ್ದ ಕಾಪು ದಾಸ್ತಾನಿನ ಪ್ರಮಾಣದಲ್ಲಿ ಮಹತ್ತರ ಖೋತಾ, ಇತ್ತೀಚೆಗೆ ಕೃಷಿ ಉತ್ಪಾದನಾ ಮಾರುಕಟ್ಟೆ ಕಾನೂನಿಗೆ ಖಾಸಗಿಯವರೂ ದಾಸ್ತಾನು ಮಾಡಬಹುದೆಂಬ ತಿದ್ದುಪಡಿಯಾಗಿ, ರಿಲೈಯನ್ಸ್, ಕಾರ್ಗಿಲ್, ಐಟಿಸಿ ಮುಂತಾದ ಬೃಹತ್ ವ್ಯಾಪಾರಿ ಸಂಸ್ಥೆಗಳು, ವ್ಯಾಪಾರಿಗಳು ವಿಪರೀತವಾಗಿ ದಾಸ್ತಾನು ಸಂಗ್ರಹಿಸಿರುವುದು, ಇದೇ ವ್ಯಾಪಾರಿಗಳದ್ದೇ. ತೆರೆಮರೆಯ ಸಟ್ಟಾ ವ್ಯಾಪಾರಿಗಳು ಕಮಾಡಿಟೀಸ್ ಮಾರುಕಟ್ಟೆಯಲ್ಲಿ ಸಕ್ರಿಯವಾಗಿರುವುದು, ಸರ್ಕಾರ ಸಕಾಲದಲ್ಲಿ ಕೊರತೆಯನ್ನು ನೀಗಿಕೊಳ್ಳಲು ಆಮದು ಮಾಡಿಕೊಳ್ಳಲು ವಿಳಂಬ, ಅಂತರರಾಷ್ಟ್ರೀಯ ಕಮಾಡಿಟೀಸ್ ಮಾರುಕಟ್ಟೆಯಲ್ಲೂ ಇದೇ ಉತ್ಪನ್ನಗಳ ಬೆಲೆಯ ವಿಪರೀತ ಹೆಚ್ಚಳ – ಇವೆಲ್ಲವನ್ನೂ ಒಟ್ಟಾರೆಯಾಗಿ ಗ್ರಹಿಸಿದರೆ ನಾವು ಈಗ ಅನುಭವಿಸುತ್ತಿರುವ ಸಾಮಾನ್ಯ ಧಾರಣೆವಾಸಿಯ ಹೆಚ್ಚಳ, ಅದರಲ್ಲೂ ಆಹಾರಧಾನ್ಯ, ಖಾದ್ಯತೈಲಗಳ ಬೆಲೆಯ ಹೆಚ್ಚಳಕ್ಕೆ ಕಾರಣ ಸ್ಪಷ್ಟವಾಗುತ್ತದೆ. ಬೇರೆ ಕ್ಷೇತ್ರಗಳಲ್ಲಿ ಏನಾದರೂ ಮಾಡಿಕೊಳ್ಳಿ, ಆಹಾರ ಧಾನ್ಯಗಳನ್ನಾದರೂ ಈ ಮಾರುಕಟ್ಟೆಯ ವಿಷ ವರ್ತುಲದಲ್ಲಿ ಸಿಕ್ಕಿಸಬೇಡಿ ಎಂದು ಒತ್ತಾಯ ಮಾಡಿದರೆ ಅದರಲ್ಲಿ ತಪ್ಪೇನಿದೆ ? ೧೯೯೪ರ ಫಾರ್ವರ್ಡ್ ಮಾರ್ಕೆಟ್ ರಿವ್ಯೂ ಕಮಿಟಿ, ಇಸ್ರೋ ಕಮಿಟಿ ಎಲ್ಲವೂ ಇದೇ ರೀತಿ ಅಭಿಪ್ರಾಯಪಟ್ಟಿವೆ. ಚಿನ್ನ, ಬೆಳ್ಳಿ, ವಜ್ರ ವ್ಯಾಪಾರಗಳಲ್ಲಿ ಹಣ ಹೂಡುವುದನ್ನು ಅಭಿವೃದ್ಧಿಗಾಗಿ ಹೂಡಿದೆ ಎಂದು ಕರೆಯುವ ಸರ್ಕಾರ ಈ ವಸ್ತುಗಳ ಆಮದಿಗೆ ವೆಚ್ಚಮಾಡಿದ್ದು ೪೭೦೦೦ ಕೋಟಿ ರೂಪಾಯಿ. ಸರಿಸುಮಾರು ನಮಗೆ ಅದೇ ಕಾಲದಲ್ಲಿ ಒಳಬಂದ ವಿದೇಶೀ ಬಂಡವಾಳವು ಅಷ್ಟೇ ಮಹತ್ವದ್ದು. ಒಂದಿಷ್ಟೂ ಹೊಸ ಸಂಪತ್ತು ಸೃಷ್ಟಿಸದೆಯೇ ಕೆಲವರಿಗೆ ಮಾತ್ರ ಧನ ರಾಶಿಯನ್ನು ತರುವ ನೀತಿಯ ಬಗ್ಗೆ ನಂಬಿಕೆ ಇಟ್ಟಿರುವ ಸರ್ಕಾರ ಅಗತ್ಯ ವಸ್ತುಗಳನ್ನು ಕಮಾಡಿಟೀಸ್ ಮಾರುಕಟ್ಟೆಯ ಏರುಪೇರುಗಳಿಗೆ ಬಲಿ ಕೊಟ್ಟಿರುವುದು ಒಂದು ದುರಂತ. ಆಹಾರ ಪದಾರ್ಥಗಳನ್ನು ಉತ್ಪಾದಿಸುವ ರೈತನಿಗೆ ಯಾವ ಪ್ರಯೋಜನವೂ ಇಲ್ಲ ಮತ್ತು ಬಳಕೆದಾರರಿಗೆ ಬೆಲೆ ಏರಿಕೆಯನ್ನು ಉಂಟುಮಾಡುವುದಲ್ಲದೆ ಬೇರಾವ ಪ್ರಯೋಜನವೂ ಇಲ್ಲದ, ಆದರೆ ಆನ್‌ಲೈನ್ ಲಾಟರಿಯಂತೆ ಸಟ್ಟಾ ಜೂಜುಕೋರರಿಗೆ ಮಾತ್ರ ಅವಕಾಶ ಮಾಡಿಕೊಟ್ಟಿರುವ, ಹಾಗೂ ಸಾಮಾಜಿಕ ವಿಪತ್ಕಾರಿಯಾಗಿರುವ ಈ ವಿವಿಧ ರೂಪದ ಮಾರುಕಟ್ಟೆಯ ಅವ್ಯವಸ್ಥೆಯಿಂದ ಕೊನೆಯ ಪಕ್ಷ ಆಹಾರ ಪದಾರ್ಥಗಳನ್ನಾದರೂ ಹೊರಗಿಡುವ ಅಗತ್ಯವಿದೆ.

**ಚಿಕಿತ್ಸಕ :** ಆಗುವುದೆಲ್ಲ ಒಳ್ಳೆಯದಕ್ಕೆ! ಇಂಗ್ಲಿಷರು ರಾಜರಾಗದೆ ಹೋದರೆ ಆರ್ಯ ಧರ್ಮವು ಪುನರುದ್ಧಾರವಾಗುವ ಸಂಭವವಿಲ್ಲ... ಆರ್ಯಧರ್ಮವನ್ನು ಪುನರುದ್ಧಾರ ಮಾಡಬೇಕಾದರೆ ಮೊದಲು ಬಹಿರ್ವಿಷಯಕವಾದ ಜ್ಞಾನವನ್ನು ಪ್ರಚಾರ ಮಾಡಬೇಕು. ಈಗ ಈ ದೇಶದಲ್ಲಿ ಬಹಿರ್ವಿಷಯಕವಾದ ಜ್ಞಾನವೇ ಇಲ್ಲ. ತಿಳಿಸಿ ಹೇಳಿ ಕೊಡುವ ಜನರಿಲ್ಲ; ನಾವು ಜನಗಳಿಗೆ ಶಿಕ್ಷಣ ನೀಡುವುದರಲ್ಲಿ ಅಷ್ಟು ಸಮರ್ಥರಾಗಿಲ್ಲ; ಅದು ಕಾರಣ ಬೇರೆ ದೇಶದಿಂದ ಬಹಿರ್ವಿಷಯಕವಾದ ಜ್ಞಾನವು ಬರಬೇಕು. ಇಂಗ್ಲಿಷರು ಬಹಿರ್ವಿಷಯಕ ವಾದ ಜ್ಞಾನದಲ್ಲಿ ಪಂಡಿತರು. ಜನಗಳಿಗೆ ತಿಳಿಸುವು ದರಲ್ಲಿ ಪಟುಗಳಾಗಿದ್ದಾರೆ. ಆದುದರಿಂದ ಇಂಗ್ಲಿಷರು ರಾಜರಾಗಬೇಕು. ಇಂಗ್ಲಿಷ್ ಕಲಿತರೆ ಬಹಿರ್ವಿಷ ಯಕವಾದ ಜ್ಞಾನದಲ್ಲಿ ಸುಶಿಕ್ಷಿತರಾಗಿ ಜನರು ಅಂತ ಸ್ತತ್ವವನ್ನು ತಿಳಿಯಲು ಸಮರ್ಥರಾಗುತ್ತಾರೆ.... ಎಷ್ಟು ದಿನ ಹಿಂದುಗಳು ಜ್ಞಾನಿಗಳಾಗುವುದಿಲ್ಲವೋ, ಗುಣಾಢ್ಯರಾಗುವುದಿಲ್ಲವೋ, ಬಲಿಷ್ಠರಾಗುವುದಿಲ್ಲವೋ, ಅಷ್ಟು ದಿನ ಇಂಗ್ಲಿಷರ ರಾಜ್ಯವು ಅಕ್ಷಯ ವಾಗುವುದು. ಇಂಗ್ಲಿಷರ ರಾಜ್ಯದಲ್ಲಿ ಪ್ರಜೆಗಳು ಸುಖಿ ಗಳಾಗುವರು. ನಿಷ್ಕಂಟಕವಾಗಿ ಧರ್ಮಾ ಚರಣೆಯನ್ನು ಮಾಡಬಲ್ಲರು. ಆದುದರಿಂದ ಎಲೈ ಬುದ್ಧಿವಂತನೇ! ಇಂಗ್ಲಿಷರ ಸಂಗಡ ಯುದ್ಧ ಮಾಡದೆ ನನ್ನನ್ನು ಅನುಸರಿಸಿ ಬಂದುಬಿಡು.''

(ಪುಟ ೨೦೨-೨೦೩)

ಇಂದು 'ವಂದೇ ಮಾತರಂ' ಹಾಡನ್ನು ಹಾಡಿ ಹೊಗಳಲು ತಾವೇ ಬಾಧ್ಯರೆಂದು ತಿಳಿದಿರುವವರು ಅಂದು ಬಂಕಿಂಚಂದ್ರರ ಮಾತನ್ನು ಪುರಸ್ಕರಿಸಿ ಇಂಗ್ಲಿಷರ ವಿರುದ್ಧ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗಿ ಗಳಾಗಲು ನಿರಾಕರಿಸಿದರೆಂದು ತೋರುತ್ತದೆ. ಇಂದಿಗೂ ಅವರಿಗೆ ಬುಷ್-ಬ್ಲೇರ್ ಎಂದರೆ ಪಂಚ ಪ್ರಾಣವೆಂಬುದಕ್ಕೆ ಆಧಾರಗಳಿಲ್ಲದಿಲ್ಲ. ಈ ಹಾಡು ಮಧುರವಾದ್ದು, ಆಪ್ಯಾಯಮಾನವಾದ್ದು, ಭವಿಷ್ಯದ ಕಲ್ಪನೆಯನ್ನು ಕುರಿತಂತೆ ಹೃದ್ಯವಾದದ್ದು. ವಸ್ತುಸ್ಥಿತಿ ಏನೇ ಇರಲಿ, ನಾಳಿನ ಸಂಭ್ರಮದ ಜೀವನ ನಾಡಿ ನಲ್ಲಿ ಹೇಗಿರಬೇಕೆಂಬುದರ ಭವ್ಯಕನಸು ಉದಾತ್ತ ವಾದುದು. ಆ ಹಾಡನ್ನು ಹಾಡಲಿ, ಬಿಡಲಿ, ಆ ಕನಸಿಗೆ ಬದ್ಧರಾಗುವುದು ನಾಡಿನ ಎಲ್ಲರಿಗೂ ಶ್ರೇಯಸ್ಕರ. ಆದರೆ ಅದನ್ನು ಹಾಡುವವರೆಲ್ಲ ದೇಶ ಭಕ್ತರು, ಹಾಡದವರು ರಾಷ್ಟ್ರದ್ರೋಹಿಗಳು, ಎಂಬರ್ಥ ಬರುವ ಮಾತುಗಳು ಅನ್ಯಾಕ್ರಮಣ ಶೀಲತೆಯ ಕುರುಹು, ದರ್ಪದ ಬೇಜವಾಬ್ದಾರಿ ಕಂಠ ಶೋಷಣೆ. ಹಾಡನ್ನು ಭಾಗಶಃ ಸ್ವೀಕರಿಸಿದ್ದುದು ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸ ಬಲ್ಲವರಿಗೆಲ್ಲಾ ತಿಳಿದಿದೆ; ಉಳಿದ ಭಾಗವನ್ನು ಹಾಡದಿದ್ದವರೇ ಹೆಚ್ಚು. ಆ ಭಾಗದ ಬಗ್ಗೆ ಇಂದಿಗೂ ಕೊಂಚ ಅನುಮಾನ ಗಳಿದ್ದರೆ ಅದು ಬಂಕಿಂಚಂದ್ರರಿಗಾಗಲಿ, 'ವಂದೇ ಮಾತರಂ'ಗಾಗಲಿ ಬಗೆದ ಅಪಚಾರವೆನಿಸಿಕೊಳ್ಳುವು ದಿಲ್ಲ. ಹಾಡಿನ ಪೂರ್ಣಪಾಠವು (ಕೆಲವು ಬಂಗಾಲಿ ಭಾಷೆಯ ಸಾಲುಗಳನ್ನು ಬಿಟ್ಟು) ಹೀಗಿದೆ :

ವಂದೇ ಮಾತರಂ<br>
ಸುಜಲಾಂ ಸುಫಲಾಂ ಮಲಯಜಶೀತಲಾಂ<br>
ಸಸ್ಯಶ್ಯಾಮಲಾಂ ಮಾತರಂ –<br>
ವಂದೇ ಮಾತರಂ<br>
ಶುಭ್ರಜ್ಯೋತ್ಸ್ನಾಪುಲಕಿತಯಾಮಿನೀಂ<br>
ಫುಲ್ಲಕುಸುಮಿತದ್ರುಮದಳಶೋಭಿನೀಂ<br>
ಸುಹಾಸಿನೀಂ ಸುಮಧುರಭಾಷಿಣೀಂ<br>
ಸುಖದಾಂ ವರದಾಂ ಮಾತರಂ<br>
ವಂದೇ ಮಾತರಂ<br>
ಸಪ್ತಕೋಟಿ ಕಂಠ ಕಲಕಲನಿನಾದ ಕರಾಳೇ<br>
ದ್ವಿಸಪ್ತ ಕೋಟಿ ಭುಜೈರ್ಧೃತಖರ ಕರವಾಲೇ<br>
ಬಹುಬಲಧಾರಿಣೀಂ ನಮಾಮಿ ತಾರಿಣೀಂ<br>
ರಿಪುಬಲವಾರಿಣೀಂ ಮಾತರಂ<br>
ವಂದೇ ಮಾತರಂ<br>
ತ್ವಂ ಹಿ ದುರ್ಗಾ ದಶಪ್ರಹರಣಧಾರಿಣೀ<br>
ಕಮಲಾ ಕಮಲದಳವಿಹಾರಿಣೀ<br>
ವಾಣೀ ವಿದ್ಯಾದಾಯಿನೀ<br>
ನಮಾಮಿ ತ್ವಾಂ<br>
ನಮಾಮಿ ಕಮಲಾಂ ಅಮಲಾಂ ಅತುಲಾಂ<br>
ಸುಜಲಾಂ ಸುಫಲಾಂ ಮಾತರಂ<br>
ವಂದೇ ಮಾತರಂ<br>
ಶ್ಯಾಮಲಾಂ ಸರಳಾಂ ಸುಸ್ಮಿತಾಂ ಭೂಷಿತಾಂ<br>
ಧರಣೀಂ ಭರಣೀಂ ಮಾತರಂ<br>
ವಂದೇ ಮಾತರಂ

(ಪುಟ ೩೬)

– ಭಾರತಮಾತೆಯ ಸೌಮ್ಯ ಮತ್ತು ರೌದ್ರ ಮುಖಗಳು ಇಲ್ಲಿ ಬಿಂಬಿತವಾಗಿವೆ. ಅವಳು ಕಮಲಾ, ವಿದ್ಯಾ ದಾಯಿನೀ, ಆಗಿರುವಂತೆ ಕರಾಳೇ, ಧೃತಖರ ಕರವಾಲೇ (ಹರಿತವಾದ ಆಯುಧವನ್ನುಳ್ಳವಳು), ಬಹು ಬಲ ಧಾರಿಣೀ, ದುರ್ಗಾ, ಪ್ರಹರಣಧಾರಿಣೀ (ಶಸ್ತ್ರಸಜ್ಜಿತೆ) ಸಹ ಆಗಿದ್ದಾಳೆ; ಅಥವಾ ಆಗಿರಬೇಕೆಂಬ ಆಶಯವಿದೆ. ನಮ್ಮ ದೇಶವು ಪರಮಾಣು ಶಸ್ತ್ರಾಸ್ತ್ರಗಳನ್ನು ತಯಾರಿಸಿದ ನಂತರ ಸಹ 'ರಿಪುಬಲ ವಾರಿಣಿ' (ವೈರಿಬಲವನ್ನು ನಿವಾರಿಸು ವವಳು) ಆಗಿಲ್ಲ ಮತ್ತು ಆ ಮೂಲಕ ಆಗುವುದಿಲ್ಲ. ನಮ್ಮ ವಿಜಯಗಳೇನಿದ್ದರೂ ಸ್ವಾತಂತ್ರ್ಯ ಪಡೆದಿದ್ದು ಮತ್ತು ನಂತರದಲ್ಲಿ ಆಗಾಗ್ಗೆ ಆಕ್ರಮಣಕಾರರನ್ನು ಹಿಂದೆಗೆಯು ವಂತೆ ಮಾಡಿದ್ದು ಎನ್ನಬಹುದು. ಅದಕ್ಕೆ ಮುಂಚೆ, ಇತಿಹಾಸದ ಪಠ್ಯಪುಸ್ತಕಗಳಲ್ಲಿ ಹೇಳುವಂತೆ, ನಾವು ''ರಣರಂಗದಲ್ಲಿ ವೀರಾವೇಶದಿಂದ ಹೋರಾಡಿ'' ಮಡಿದಿದ್ದು ಮತ್ತು ಮಣಿದದ್ದೇ ಹೆಚ್ಚು. ನಿರ್ಭಾವುಕತೆ ಇಲ್ಲದಿದ್ದರೆ ಇದನ್ನು ಹೇಳುವುದೂ ಕಷ್ಟ. ಆರ್ಯರು ಬಂದ ಕಾಲದಿಂದಲೂ ನಾವು ಸೋಲುತ್ತಾ ಬಂದಿದ್ದಕ್ಕೆ 'ಮಾತೆ'ಯನ್ನು ದೂಷಿಸಲಾಗುವುದಿಲ್ಲ; ಹಾಗೆಯೇ ವೈಭವೀಕರಿಸುವುದೂ ಸಲ್ಲದು. ಹೀಗಿರುವಾಗ ಭಾರತ ಮಾತೆಯನ್ನು ದುರ್ಗೆ ಎಂದು ಆರಾಧಿಸಲು ಮನವೊಪ್ಪ ದಿರುವುದು ಅಸಹಜವೇನಲ್ಲ; ಅವಳು ವಿಶ್ವದಲ್ಲಿ ನಗೆ ಮುಖದಿಂದ, ಮಧುರವಾದ ಮಾತುಗಳಿಂದ ಕಂಗೊಳಿಸ ಬೇಕು (ಸುಹಾಸಿನೀ, ಸುಮಧುರ ಭಾಷಿಣೀ). ಬಂಕಿಂಚಂದ್ರರ ಬಂಗಾಳದಲ್ಲಿ ಏಳುಕೋಟಿ ಧ್ವನಿಗಳು, ಹದಿನಾಲ್ಕು ಕೋಟಿ ಕೈಗಳು; ಆಯುಧಪಾಣಿ ದುರ್ಗೆ. ಆದರೂ ಸಿರಾಜುದ್ದೌಲ ಮತ್ತು ವಾರನ್ ಹೇಸ್ಟಿಂಗ್ಸ್ ಆಕ್ರಮಣ ಮಾಡಿದ್ದರು. ಇದೇ ಬಂಕಿಂಚಂದ್ರರ ವಿಹ್ವಲ. ''ಇವರೇ ಏನು ನಿನ್ನ ಮೂವತ್ತಮೂರು ಕೋಟಿ ಮಕ್ಕಳು ?'' – ಹೀಗೆಂದು ಹಾಡಿದ್ದ ಬೇಂದ್ರೆಯವರಂತೆ ಬಂಕಿಂಚಂದ್ರರು ಕೂಡ ಉದ್ವಿಗ್ನರು. ನಿನ್ನೆ ಮತ್ತು ನಾಳೆಗಳ ವಿವೇಚನೆಗೆ 'ವಂದೇ ಮಾತರಂ' ಹಾಡು ಕಣ್ಣು ತೆರೆಸು ವಂಥದು. ಮಾಧುರ್ಯ, ಸ್ನೇಹ, ಶಸ್ತ್ರಾಸ್ತ್ರ, ಮಹದಾಸೆ, ಗೌರವ, ಎಲ್ಲವೂ ಇಲ್ಲಿ ಸೂಚಿತವಾಗಿದೆ. ಆದರೆ ತಾಯಿಯನ್ನು ದುರ್ಗೆ ಎಂದು ಕಲ್ಪಿಸಿಕೊಳ್ಳುವುದು ಸರಿಯಲ್ಲವೆನಿಸಿದರೆ ಅದರಿಂದ ಯಾರೂ ಸಮಚಿತ್ತ ಹಾಳುಮಾಡಿಕೊಳ್ಳಬೇಕಾಗಿಲ್ಲ. ಮೇಲಾಗಿ, ಆ ಹಾಡನ್ನು ಹಾಡುವವರು ಶ್ರೇಷ್ಠರು – ಹಾಡದವರು ಕನಿಷ್ಠರು ಎಂಬ ಮಾತೇ ನಮ್ಮ ಮಾತೆಗೆ ರುಚಿಸುವುದಿಲ್ಲ. ಇದನ್ನೊಂದು ರಾಜಕೀಯ ಪ್ರಶ್ನೆಯನ್ನಾಗಿ ಮಾಡುವಷ್ಟು ಸಮಸ್ಯೆಗಳ ಬರ ನಮ್ಮಲ್ಲಿಲ್ಲ. ದೇಶವನ್ನು ''ಸುಜಲಾಂ ಸುಫಲಾಂ ಸುಖದಾಂ'' ಮಾಡಲು ಬದ್ಧರಾಗುವುದು ಮುಖ್ಯ, ಅಷ್ಟೆ.

* * *

ನಮ್ಮ ರಾಜ್ಯದಲ್ಲಿ ''ಅಭಿವೃದ್ಧಿಗಾಗಿ ಸಮ್ಮಿಶ್ರ ಸರ್ಕಾರ'' ಇದೆಯೆಂದು ಹೇಳಲಾಗುತ್ತಿದೆ; ನಿಜಕ್ಕೂ ಇರುವುದು ಕೋಮುವಾದಿ – ಜಾತ್ಯತೀತ (ಕೋ-ಜಾ) ಸರ್ಕಾರ. ಶಿಕ್ಷಣ ಸಚಿವ ಶಂಕರಮೂರ್ತಿಯವರು 'ಕೋ' ಪ್ರತಿನಿಧಿ ಸಿದರೆ ಗೃಹಸಚಿವ ಎಂ. ಪಿ. ಪ್ರಕಾಶ್ ಅವರು 'ಜಾ' ಪ್ರತಿನಿಧಿಸಬೇಕು. ಟಿಪ್ಪೂ ಕನ್ನಡದ ವಿರೋಧಿ ಎಂದು ಶಂಕರಮೂರ್ತಿಗಳು ಹೇಳಿದ್ದಾರೆ. ಅವರಿನ್ನೂ ವಸಾಹತು ಕಾಲದ ಇತಿಹಾಸದ ಪುಸ್ತಕಗಳಲ್ಲೇ ಮುಳುಗಿರುವುದರಿಂದ ಅಲೆಕ್ಸಾಂಡರ್ ಮತ್ತು ಅಕ್ಬರ್ ಹೇಗೆ ತಾನೆ 'ಗ್ರೇಟ್' ಎಂಬ ಜಿಜ್ಞಾಸೆಯಲ್ಲಿ ಮಗ್ನರು. 'ಗ್ರೇಟ್' ಅಲ್ಲವೆಂದು ಬರೆಯಲು ಯಾರು ಅಡ್ಡಿ ಬಂದಿದ್ದಾರೆ? ವಿಜ್ಞಾನ ಸಚಿವ ರಾಮಚಂದ್ರೇಗೌಡರು 'ಪ್ರೈಡ್ ಆಫ್ ಇಂಡಿಯ' ಎಂಬ ಅ-ಚಾರಿತ್ರಿಕ ವೈಭವೀಕರಣದ ಪುಸ್ತಕವನ್ನು ಪ್ರಚುರ ಪಡಿಸುತ್ತಿದ್ದಾರೆ. ಬಾಬಾಬುಡನ್ ಗಿರಿಯ ಕ್ಷೋಭಾ ಯಾತ್ರೆಯನ್ನು ನಡೆಸಲೇಬೇಕೆಂಬ ಉಗ್ರ ಪ್ರತಿಪಾದನೆ ಯನ್ನು ಶಂಕರಮೂರ್ತಿ ಮಾಡಿದ್ದಾರೆ. ಅಂದರೆ 'ಕೋ' ವಿಭಾಗ ತನ್ನ ಕಾರ್ಯಸೂಚಿಯನ್ನು ಕಾರ್ಯಗತ ಗೊಳಿಸಲು ಸಜ್ಜಾಗಿದೆ. ಆದರೆ 'ಜಾ' ವಿಭಾಗಕ್ಕೆ ಇದರ ಬಿಸಿ ಮುಟ್ಟಿಲ್ಲ. ಅವರಿಗೆ ಇವೆಲ್ಲಾ ಚರ್ಚಾರ್ಹ ವಿಷಯಗಳೂ ಅಲ್ಲ, ಏಕೆಂದರೆ ಅದರಲ್ಲಿ ಕೋಟಿಗಟ್ಟಲೆ ಹಣದ ವ್ಯವಹಾರವಿಲ್ಲ. ಸರ್ಕಾರದ ಗೃಹ ಮಂತ್ರಿಯಾಗಿ ಪ್ರಕಾಶ್ ಅವರು ಕಾನೂನು-ಶಿಸ್ತು-ಶಾಂತಿ ಕಾಪಾಡುತ್ತಾರೋ ಇಲ್ಲವೇ ಯಡಿಯೂರಪ್ಪ ಪಕ್ಷವೆಂಬ ಕಪ್ಪುಸೂರ್ಯನ ಸುತ್ತ ನಿಯಮಿತವಾಗಿ ಚಲಿಸುವ ಗ್ರಹ ಮಂತ್ರಿಯಾಗುತ್ತಾರೋ ಕಾದುನೋಡಬೇಕಾಗಿದೆ.

* * *

ನಮ್ಮ ದೇಶದಲ್ಲಿದ್ದಂತೆ ಪಾಕಿಸ್ತಾನದಲ್ಲೂ ಖಾಸಗೀ ಕರಣದ ಪ್ರಕ್ರಿಯೆಯು ಸಾರ್ವಜನಿಕ ಸಂಪತ್ತನ್ನು ಹಾಳು ಮಾಡುವ ಕೆಲಸ ಮಾಡುತ್ತಿದೆ. ರಾಷ್ಟ್ರೀಯ ಶಾಸನ ಸಭೆಯಲ್ಲಿ ಪ್ರಧಾನಿಯು ಸಾರ್ವಜನಿಕ ಸ್ವತ್ತನ್ನು ಖಾಸಗಿ ಗೊಳಿಸುವಾಗ ಭ್ರಷ್ಟಾಚಾರದಲ್ಲಿ ತೊಡಗಿದ್ದಾರೆಂದು

೧೬ನೇ ಪುಟಕ್ಕೆ

# ಪ್ಲೂಟೋದ ರಾಜಕೀಯ

**ಪ್ಲೂ**ಟೋವನ್ನು ಗ್ರಹಗಳ ಪಟ್ಟಿಯಿಂದ ಹೊರ ದೂಡಿದ ಸಂಗತಿ ಈಗ ಹಳತಾಯಿತು. ಹೀಗೆ ಮಾಡಿದ್ದು ಅನ್ಯಾಯ ಎಂದು ಪರಿತಪಿಸುವವರಿಗೆ ಮುದ್ದಿನ ಸಾಕು ನಾಯಿಯನ್ನು ಮನೆ ಆಚೆ ಕಟ್ಟಿಹಾಕಬೇಕಾಗಿ ಬಂದಾಗ ಉಂಟಾಗುವ ಪರಿಸ್ಥಿತಿ ಎದುರಾಗಿರಬೇಕು. ಆದರೆ ಈ ಬಗ್ಗೆ ಖಗೋಳ ವಿಜ್ಞಾನಿಗಳಲ್ಲೇ ಭಿನ್ನಾಭಿಪ್ರಾಯ ಮೂಡಿ ಹಸ್ತಾಕ್ಷರ ಸಂಗ್ರಹದಂತಹ ಪ್ರತಿಭಟನೆ ಆರಂಭವಾಗಿದ್ದು ಏಕೆ? ಇದು ಕೇವಲ ವೈಯಕ್ತಿಕ ಘರ್ಷಣೆಯೋ? ಅಥವಾ ವೈಜ್ಞಾನಿಕ ಜಿಜ್ಞಾಸೆಯೋ?

ಈ ಪ್ರಶ್ನೆಗಳು ಏಳಲು ಕಾರಣವಿಲ್ಲದಿಲ್ಲ. ಅಂತರ ರಾಷ್ಟ್ರೀಯ ಖಗೋಳ ತಾರುಗಳನ್ನು ಬಹು ಯಶಸ್ವಿಯಾಗಿ ನಿರ್ವಹಿಸಿದ ವಿಜ್ಞಾನಿ ಬ್ರೇನ್ ಮಾರ್ಸ್‌ಡನ್. ಯಾವುದೇ ಮೂಲೆಯಿಂದ ಹೊಸ ಕಾಯ ಪತ್ತೆಯಾದ ವರದಿ ಬಂದ ಕೂಡಲೇ ಅದರ ತಥ್ಯಾತಥ್ಯತೆಯನ್ನು ಒರೆಗೆ ಹಚ್ಚಿ ಪರೀಕ್ಷಿಸಿ, ಇತರ ಎಲ್ಲ ವೀಕ್ಷಕರಿಗೆ ತಾರು ಕಳುಹಿಸುವ ಮಹತ್ಕಾರ್ಯ ವನ್ನು ಅವರು ಸುಮಾರು ಮೂರು ದಶಕಗಳ ಕಾಲ ನಿರ್ವಹಿಸಿ, ಈಚೆಗೆ ನಿವೃತ್ತರಾದರು. ಈಗಿನ ಇ-ಮೈಲ್ ಯುಗದಲ್ಲಿ ಇದು ಬಹಳ ಸುಲಭದ ಕೆಲಸ. ಆದರೆ ಅವರು ಅದನ್ನು ಕೈಗೆತ್ತಿಕೊಂಡಾಗ ಕಂಪ್ಯೂಟರ್‌ಗಳೂ ಇರಲಿಲ್ಲವೋ ಏನೋ. ಪ್ರತಿ ಸಣ್ಣ ಪುಟ್ಟ ಕಾಯಗಳು, ಧೂಮಕೇತುಗಳು ಪತ್ತೆಯಾದಾಗಲೂ ಅದರ ಜಾಡು ಹಿಡಿದು, ಅದರ 'ಜಾತಿ' ಯನ್ನು ಗುರುತಿಸಿ ನಾಮಕರಣ ಮಾಡುತ್ತಿದ್ದರು. ಈಗ ಅದಕ್ಕೊಂದು ಸಮಿತಿಯೇ ಇದೆ. ಇವರು ಎರಡು ದಶಕಗಳ ಹಿಂದೆ ಪ್ಲೂಟೋದ ಬಗ್ಗೆ ಅಪಸ್ವರ ಎತ್ತಿದರು. ಪ್ಲೂಟೋ ದಂತಹ ಹೊಸ ಹೊಸ ಕಾಯಗಳು ಒಂದೊಂದು ಪತ್ತೆ ಆಗಿವೆ, ಇದಕ್ಕೇಕೆ ಗ್ರಹ ಎಂಬ ಮನ್ನಣೆ ಎಂದು ದನಿ ಎತ್ತಿದರು. ಆದರೆ ಅನೇಕರು ಇವರ ವಾದವನ್ನು ಬೆಂಬಲಿಸಲಿಲ್ಲ. ಪ್ಲೂಟೋವನ್ನು ಕಂಡುಹಿಡಿದ ಕ್ಲೈಡ್ ಟಾಂಬೋ ಕೂಡ ವಿರೋಧಿಸಿದರು. ಆದರೆ ಬರಬರುತ್ತಾ ಈ ಬಗೆಯ ಕಾಯಗಳ ಸಂಖ್ಯೆ ಹೆಚ್ಚತೊಡಗಿದಾಗ ಅವರು ತಮ್ಮ ನಿಲುವಿನ ಬಗ್ಗೆ ಪುನರ್ವಿಮರ್ಶೆ ನಡೆಸಲು ನಿಶ್ಚಯಿಸಿದ್ದರು.

ಕಳೆದ ದಶಕದಿಂದ ಪ್ಲೂಟೋ ಬಗೆಗೆ ಗೊಣಗಾಟ ಜೋರಾಗಿಯೇ ಕೇಳತೊಡಗಿತು. ೧೯೯೭ರಲ್ಲಿ ಟಾಂಬೋ ನಿಧನರಾದರು. ಅವರ ಅಭಿಮಾನಿ ಡೇವಿಡ್ ಲೆವಿ (ಅನೇಕ ಧೂಮಕೇತುಗಳನ್ನು ಕಂಡುಹಿಡಿದ ಖ್ಯಾತಿ ಯವರು) ಪ್ಲೂಟೋವನ್ನು 'ಪದಚ್ಯುತಿ'ಗೊಳಿಸದಂತೆ ನೋಡಿಕೊಳ್ಳು ವುದಾಗಿ ಟಾಂಬೋಗೆ ಆಶ್ವಾಸನೆ ಕೊಟ್ಟಿದ್ದಾಗಿ ಹೇಳಿಕೊಂಡರು. ಹೀಗೆ ಈ ವೈಜ್ಞಾನಿಕ ಚರ್ಚೆ ವೈಯಕ್ತಿಕ ಧೋರಣೆಯಾಗಿ ಮಾರ್ಪಟ್ಟಿತು.

ಪ್ರಾಗ್‌ನಲ್ಲಿ ಆಗಸ್ಟ್‌ನಲ್ಲಿ ನಡೆದ ಬೃಹತ್‌ಮೇಳ (ಮಹಾಸಭೆ)ದಲ್ಲಿ ೨೫೦೦ ಖಗೋಳ ವಿಜ್ಞಾನಿಗಳು ಸೇರಿದ್ದು ನಿಜ. ಆದರೆ ಪ್ಲೂಟೋ ಕುರಿತ 'ಚುನಾವಣೆ' ಯಲ್ಲಿ ಭಾಗವಹಿಸಿದವರು ಕೇವಲ ೩೦೦ ಜನ. ಇವರಲ್ಲಿ ಗ್ರಹಗಳ ಕುರಿತು ಅಧ್ಯಯನ ಮಾಡಿರುವವರು ಬೆರಳೆಣಿಕೆಯಷ್ಟು ಮಾತ್ರ. ಕಳೆದ ವರ್ಷ 'ಪ್ಲೂಟೋ'ದ 'ಗತಿ'ಯ ಬಗ್ಗೆ ನಿರ್ಧರಿಸಲು ರಚಿಸಿದ ಸಮಿತಿಯಲ್ಲಿ ಒಬ್ಬರು ಮಾತ್ರ ಗ್ರಹಗಳ ಅಧ್ಯಯನದಲ್ಲಿ ಪರಿಣತಿ ಪಡೆದವರು. ಉಳಿದವರಲ್ಲಿ ಕಲಾವಿದರು, ಸಮಾಜ ವಿಜ್ಞಾನಿಗಳು, ವೇದಾಂತಿಗಳು ಸೇರಿದ್ದರು. ಆದ್ದರಿಂದ ಪ್ಲೂಟೋವನ್ನು ಸಾಂಸ್ಕೃತಿಕ ದೃಷ್ಟಿಯಿಂದ ಅಳೆದು 'ಹೇಗಾದರೂ' ಗ್ರಹಗಳ ಪಟ್ಟಿಯಲ್ಲಿ ಉಳಿಸಬೇಕೆಂದು ಮೊದಲೇ ನಿರ್ಧರಿಸಿದ್ದರೋ ಎಂದು ಅನುಮಾನ ಬರುವಂತೆ 'ಗ್ರಹ' ಪದದ ವ್ಯಾಖ್ಯೆಯನ್ನು ಸಿದ್ಧಪಡಿಸಿಟ್ಟು ಕೊಂಡಿದ್ದರು. ಇದು ಗೊಂದಲಕ್ಕೆ ಎಡೆ ಉಂಟುಮಾಡಿತು. ಪ್ಲೂಟೋದ ಜೊತೆ ಶೆರಾನ್ ಎಂಬ ಹೆಸರಿನ ಅದರ ಉಪಗ್ರಹ, ಸಿರಿಸ್ ಎಂಬ ಕ್ಷುದ್ರಗ್ರಹ ಮತ್ತು ಹೋದ ವರ್ಷ (ಪ್ಲೂಟೋಗಿಂತ ದೊಡ್ಡದು ಎಂಬ ಕಾರಣಕ್ಕೆ) ಸುದ್ದಿಮಾಡಿದ ಝೀನಾ (ಝೀನಾಗೆ ಇನ್ನು ಮೇಲೆ ಈರಿಸ್ ಎಂಬ ಹೊಸ ಹೆಸರು; ಇದರ ಉಪಗ್ರಹಕ್ಕೆ ಡಿಸ್ನೋಮಿಯಾ ಎಂದು ಹೆಸರು ಕೊಟ್ಟಿದ್ದಾರೆ; ಹಳೆಯ ಹೆಸರು ಗೇಬ್ರಿಯಲೆ ಎಂದಿತ್ತು) ಎಂಬವುಗಳನ್ನೂ ಸೇರಿಸಿ ಒಟ್ಟು ಹನ್ನೆರಡು ಗ್ರಹಗಳ ಪಟ್ಟಿ ಸಿದ್ಧವಾಯಿತು. ಆದರೆ ಇದೂ ಕೂಡ ಮತಗಟ್ಟೆಯಲ್ಲಿ ಬಿದ್ದುಹೋಯಿತು. ಹಾಗಾಗಿ ಗ್ರಹ ಎಂಬ ಪದದ ವ್ಯಾಖ್ಯೆ 'ವಿಚಿತ್ರ' ಎನ್ನಿಸಬಹುದಾದ ಅಂಶಗಳನ್ನು ಒಳಗೊಂಡಿತು :

೧. ಗ್ರಹ ಗೋಳಾಕಾರವಾಗಿರಬೇಕು.

೨. ಸೂರ್ಯನನ್ನು ಸುತ್ತುತ್ತಿರಬೇಕು.

೩. ಸಾಕಷ್ಟು ಪ್ರಮಾಣದಲ್ಲಿ ವಸ್ತುವನ್ನು ಸಂಗ್ರಹಿಸಿ ಕೊಂಡಿರಬೇಕು.

ಈ ಮೂರು ಅಂಶಗಳನ್ನು ಮಾತ್ರ ಗಮನಿಸಿಕೊಂಡರೆ ಗ್ರಹಗಳ ಸಂಖ್ಯೆ ಹನ್ನೆರಡನ್ನೂ ದಾಟಬಹುದು. ಆದ್ದರಿಂದ ಇನ್ನೂ ಒಂದು ಅಂಶ ಸೇರಿಸಿ ಪ್ಲೂಟೋವನ್ನು ಪಟ್ಟಿಯಿಂದ ಹೊರಹಾಕಲಾಯಿತು.

೪. ತನ್ನ ಕಕ್ಷೆಯಲ್ಲಿನ ವಸ್ತುವೆಲ್ಲವನ್ನೂ ಅದು (ಕ)ಬಳಸಿಕೊಂಡಿರಬೇಕು; ಅಂದರೆ ಕಕ್ಷೆಯ ಆಚೀಚೆ ಇತರೆ ಕಾಯಗಳಿರಬಾರದು.

ಇದನ್ನು ಪ್ಲೂಟೋ ವಿರೋಧಿಗಳ ಕುತಂತ್ರ ಎಂದು ತಳ್ಳಿಹಾಕುವಂತಿಲ್ಲ. ಏಕೆಂದರೆ ಗ್ರಹಗಳ ರಚನೆ ಹೇಗಾಗಿರ ಬಹುದು ಎಂದು ತಿಳಿಯಲು ಹೊರಟ ವಿಜ್ಞಾನಿಗಳಿಗೆ ದಿನ ದಿನವೂ ಹೊಸ ಹೊಸ ಸಮಸ್ಯೆಗಳು ಎದುರಾಗುತ್ತಲೇ ಇವೆ. ಇತ್ತೀಚೆಗೆ ಒರೈಯನ್ ಪುಂಜದಲ್ಲಿ ಗ್ರಹಗಳು ಪತ್ತೆ ಯಾದುದನ್ನು ಸಂಭ್ರಮದಿಂದ ವರದಿ ಮಾಡಲಾಗಿತ್ತು. ದಕ್ಷಿಣ ಧ್ರುವದ ಬಳಿಯ ಶಾಮೆಲಾಂಟಿಸ್ ಎಂಬ ಪುಂಜದಲ್ಲಿಯೂ ಗ್ರಹಗಳು ಸಿಕ್ಕುಬಿದ್ದವು. ಆದರೆ ಇದು ತಂದಿಟ್ಟ ಸಮಸ್ಯೆ ಬೇರೆ ಬಗೆಯದು.

ಈ 'ಗ್ರಹ'ಗಳಿಗೆ ಸೂರ್ಯನೇ ಇಲ್ಲ!

ಇವನ್ನು ಏನೆಂದು ಕರೆಯೋಣ? ಬೀಡಾಡಿ ಗ್ರಹಗಳು? ಒಂಟಿ ಗ್ರಹಗಳು? ಪ್ಲಾನೆಟಾರ್? ಚಿಕ್ಕ ಬ್ರೌನ್ ಡ್ವಾರ್ಫ್?

ಹೀಗೆ ಗ್ರಹ ಎಂಬ ವ್ಯಾಖ್ಯೆಗೆ ಅಗತ್ಯವಾದ ಮೊದಲ ನಿಯಮವೇ ಇಲ್ಲಿ ಉಲ್ಲಂಘನೆಯಾಗಿದೆ. ಯಾವುದೇ ಸೂರ್ಯನನ್ನು ಇವು ಸುತ್ತುತ್ತಿಲ್ಲ. ಈಗ 'ಗ್ರಹ' ಎಂಬ ಪದದ ವ್ಯಾಖ್ಯೆಯ ಬಗ್ಗೆ ಗೊಣಗಾಟ ಏಕೆ ಎಂದು ಅರ್ಥವಾಗಿರಬೇಕಲ್ಲ!

ಈ ಕಗ್ಗಂಟು ಜನಸಾಮಾನ್ಯರ ತಿಳುವಳಿಕೆಗೆ ಮೀರಿದುದು. ''ಗ್ರಹಕ್ಕೊಂದು ಸೂರ್ಯ ಇರಲೇಬೇಕು; ಅದು ನಿಮಗೆ ಕಂಡಿಲ್ಲ ಅಷ್ಟೇ'' ಎಂದು ಮೊಂಡುವಾದ ಹೂಡುವವರಿದ್ದಾರೆ. ಜ್ಯೋತಿಷದ ನವಗ್ರಹಗಳೇ ಸತ್ಯ ಎಂದು ಘೋಷಿಸುವವರೂ ಇದ್ದಾರೆ. ಪ್ಲೂಟೋವನ್ನು ಸೌರಮಂಡಲದಿಂದಾಚೆಗೇ ತಳ್ಳಿದ ವಿಜ್ಞಾನಿಗಳು ಕೃತಘ್ನರು ಎಂಬ 'ಶಾಪ'ವೂ ಕೇಳಿಬಂದಿದೆ.

ಈ ಎಲ್ಲ ಗದ್ದಲಗಳಿಗೆ ಪ್ಲೂಟೋ ಕಿವುಡಾಗಿದೆ. ತನ್ನ ಕಕ್ಷೆಯಲ್ಲಿ ತಾನು ಮುಂದುವರೆದಿದೆ.

ಆದ್ದರಿಂದ ಬರಿಗಣ್ಣಿಗೆ ಕಾಣುವ ಬುಧ, ಶುಕ್ರ, ಮಂಗಳ, ಗುರು ಮತ್ತು ಶನಿಗಳನ್ನು ಮಾತ್ರ ಗ್ರಹ ಎಂದು ಕರೆದು ತೃಪ್ತಿಪಟ್ಟುಕೊಳ್ಳೋಣವೇ?

**ಡಾ|| ಬಿ. ಎಸ್. ಶೈಲಜಾ**
ಜವಹರಲಾಲ್ ನೆಹರೂ ತಾರಾಲಯ, ಬೆಂಗಳೂರು - ೫೬೦ ೦೦೧

---

'ಹೊಸತು' ಆರಂಭವಾದಾಗಿನಿಂದಲೂ ಅದರ ಓದುಗರಾಗಿ ಮತ್ತು ವಿಮರ್ಶಕರಾಗಿ ಪ್ರೋತ್ಸಾಹ ನೀಡುತ್ತಿದ್ದ **ಶ್ರೀಮತಿ ಯು. ಸಾಕಮ್ಮನವರು** (ಜನನ : ೧೩-೦೪-೧೯೦೭) ೨೦೦೨ರ ಆಗಸ್ಟ್ ೧೮ರಂದು ನಿಧನರಾದರು. ಅವರ ಜ್ಞಾಪಕಾರ್ಥ ಅವರ ಮಗಳಾದ **ಶ್ರೀಮತಿ ಯು. ಎಸ್. ಪಾರ್ವತಿ** ಅವರು ಒಂದು ವರುಷದ ಅವಧಿಯಲ್ಲಿ 'ಹೊಸತು'ವಿನಲ್ಲಿ ಪ್ರಕಟವಾಗುವ ಮಹಿಳಾ ವಿಷಯದ ಲೇಖನಗಳ ಪೈಕಿ ಎರಡಕ್ಕೆ ತಲಾ ಐನೂರು ರೂಪಾಯಿಗಳ ಬಹುಮಾನ ನೀಡಲು ಆಶಿಸಿದ್ದಾರೆ. ಅವರಿಗೆ 'ಹೊಸತು' ಕೃತಜ್ಞತೆ ಸಲ್ಲಿಸುತ್ತದೆ.

ಅಕ್ಟೋಬರ್ ೨೦೦೫ರಿಂದ ಸೆಪ್ಟೆಂಬರ್ ೨೦೦೬ರ ವರೆಗಿನ ಸಂಚಿಕೆಗಳನ್ನು ಗಮನಿಸಿ ಈ ವರ್ಷದ ಇಬ್ಬರು ಬಹುಮಾನಿತರ ವಿವರಗಳನ್ನು ಪ್ರಕಟಿಸುತ್ತಿದ್ದೇವೆ.

೧. **ಡಾ|| ಎನ್. ಗಾಯತ್ರಿ** : ಅರಿವಿನಿಂದ ಬದಲಾವಣೆಯ ಕಡೆಗೆ (ಜನವರಿ ೨೦೦೬)

೨. **ಡಾ|| ಎಚ್. ಎಸ್. ಮೋಹನ್** : ಸ್ತ್ರೀ ಭ್ರೂಣ ಹತ್ಯೆ – ಒಂದು ಅವಲೋಕನ (ಮೇ ೨೦೦೬)

ಮುಂದಿನ ವರ್ಷಗಳಲ್ಲಿಯೂ ಈ ಬಹುಮಾನಗಳನ್ನು ನೀಡಲಾಗುತ್ತದೆ.

# ನಿಸಾರ್ ಸಂಸ್ಕೃತಿಗಳ ನಡುವಣ 'ಕಷ್ಟ'ದ ಕವಿ

**ಡಾ॥ ರಹಮತ್ ತರೀಕೆರೆ**



- ೧ -

**ಕ**ಳೆದ ವರ್ಷ ಕವಿ ನಿಸಾರ್ ಅಹಮದ್ ಅವರಿಗೆ ೭೦ ತುಂಬಿದಾಗ ಒಂದು ಕಾರ್ಯಕ್ರಮ ಏರ್ಪಾಡಾಗಿತ್ತು. ಅದರಲ್ಲಿ ನಿಸಾರರ ನಿಡುಗಾಲದ ಗೆಳೆಯರು ತಮ್ಮ ಅನುಭವಗಳನ್ನು ಆಪ್ತವಾಗಿ ಹಂಚಿಕೊಳ್ಳುತ್ತಿದ್ದರು. ಅವರಲ್ಲೊಬ್ಬರು ಮಾತಾಡುತ್ತ: ''ನೋಡಿ, ನಿಸಾರ್ ನಮ್ಮ ಧರ್ಮದವರಲ್ಲ, ಆದರೂ ನಮ್ಮ ಸಂಸ್ಕೃತಿಯ ಬಗ್ಗೆ ಚೆನ್ನಾಗಿ ತಿಳ್ಕೊಂಡಿದಾರೆ. ಎಷ್ಟೊಂದು ಸೊಗಸಾಗಿ ಬರೀತಾರೆ!'' ಎಂದು ಹೇಳಿದರು. ಅವರ ಮಾತಲ್ಲಿ ಮೆಚ್ಚುಗೆ ಮತ್ತು ವಿಸ್ಮಯವಿತ್ತು. ಪ್ರಾಮಾಣಿಕತೆಯಿತ್ತು. ಆದರೆ 'ನಾವು-ಅವರು' 'ನಮ್ಮ-ಅವರ' ಎಂಬ ಪರಿಭಾಷೆ ಮಾತ್ರ, ಅಪ್ರಜ್ಞಾಪೂರ್ವಕವಾಗಿ, ನಿಸಾರ್ ಸಾಂಸ್ಕೃತಿಕವಾಗಿ ಪರಕೀಯ ಎಂಬ ಧ್ವನಿಯನ್ನು ಹೊಮ್ಮಿಸುತ್ತಿತ್ತು. ಸಂಬಂಧ ಕಲ್ಪಿಸುವ ಆಶಯದಲ್ಲಿ ಆಡುವ ಮಾತು, ಸಂಬಂಧದ ಬಿರುಕನ್ನು ಸೂಚಿಸುವ ಈ ಪರಿಯೇ ವಿಚಿತ್ರ. ಲೇಖಕರು ನಿರ್ದಿಷ್ಟವಾದ ಜಾತಿಗೊ ಧರ್ಮಕ್ಕೊ ಸಂಬಂಧಿಸಿರುವುದು ನಮ್ಮ ಸಾಮಾಜಿಕ ವಾಸ್ತವಗಳಲ್ಲಿ ಒಂದು; ಅವರ ಅನುಭವಲೋಕ ಈ ವಾಸ್ತವದ ಭಾಗವಾಗಿಯೆ ಬಂದಿರುತ್ತದೆ. ಆದರೆ ನಿಜವಾದ ಲೇಖಕರ ಭಾವಕೋಶದಲ್ಲಿ ಅವರ ಜಾತಿಧರ್ಮದ್ದು ಮಾತ್ರವಲ್ಲ, ಅವರು ಬದುಕುತ್ತಿರುವ ಇಡೀ ಪರಿಸರದ ಅನುಭವಲೋಕವೂ ಸೇರಿಹೋಗಿರುತ್ತದೆ. ಸಂಕರರೂಪಿಯಾದ ಈ ಅನುಭವ ಸೃಜನಶೀಲ ಅಭಿವ್ಯಕ್ತಿ ಪಡೆಯುವಾಗ (ಜಾತ್ಯತೀತ ಲೇಖಕರಾಗಿದ್ದಲ್ಲಿ), ಸಾಧಾರಣೀಕರಣಗೊಂಡು, ಸಮಸ್ತ ಮಾನವಾನುಭವವಾಗಿ ಬದಲಾಗುತ್ತದೆ. ಇದು ಸೃಜನಶೀಲ ಕ್ರಿಯೆಯಲ್ಲಿ ಸಂಭವಿಸುವ ರೂಪಾಂತರ; ಚರಿತ್ರೆಯ ಚೌಕಟ್ಟಿಗೆ ಒಳಗಾಗಿಯೂ ಮೀರುವ ಕ್ರಿಯೆ; ಕೆಲವೊಮ್ಮೆ ನಮ್ಮ ಲೇಖಕರು ಹಲವು ಧರ್ಮ ಜಾತಿಗಳಲ್ಲಿ ಹರಡಿಹೋಗಿರುವ ಓದುಗರಿಗಾಗಿ ಬರೆಯಬೇಕಾಗಿರುವುದು ಕೂಡ ಈ ಮೀರುವಿಕೆಯನ್ನು ಮಾಡಿಸಬಹುದು. ಇಲ್ಲಿ ಲೇಖಕರು ಧಾರ್ಮಿಕ ಮತೀಯ ಅನುಭವವನ್ನು ಒಳಗೊಂಡರೂ ಅದನ್ನು ವಿಮರ್ಶೆಯ ಮೂಲಕ ಮಂಡಿಸುತ್ತಾರೆ. ಇಂತಹ ಕೃತಿಯಲ್ಲಿ ನಿರ್ದಿಷ್ಟ ಧರ್ಮದ ಅಥವಾ ಸಂಸ್ಕೃತಿಯ ಸತ್ವ ಇದೆ; ಮೆಚ್ಚುವುದು ಅಥವಾ ಟೀಕಿಸುವುದು ಉಪಯುಕ್ತವಲ್ಲ. ಕೆಲವೊಮ್ಮೆ ಇದರ ಹುಡುಕಾಟವು ದೇಶನಿಷ್ಠೆಗೂ ಧಾರ್ಮಿಕ ಸಮುದಾಯಕ್ಕೂ ಸಂಬಂಧ ಕಲ್ಪಿಸುವ ಬಲಪಂಥೀಯ ರಾಜಕಾರಣಕ್ಕೆ ಹತ್ತಿರ ಹೋಗಿ ನಿಲ್ಲಬಹುದು. ಇದು ಲೇಖಕರು ಟೀಕಾಕಾರರಿಗೆ ಉತ್ತರಿಸಲು ಹಾಗೂ ಪ್ರಶಂಸಕರಿಗೆ ಮೆಚ್ಚಿಸಲು ಬರೆಯುವಂತೆ ಒತ್ತಡ ನಿರ್ಮಿಸಬಹುದು; ತಂತಮ್ಮ ಧಾರ್ಮಿಕ ಸಮುದಾಯದ ಅನುಭವದ ಜತೆ ಅನುಸಂಧಾನ ಮಾಡಲು ಹಿಂಜರಿಕೆ ಉಂಟುಮಾಡಬಹುದು. ತನ್ನ ಅನುಭವಕ್ಕೆ ತಾನೇ ಎರವಾಗುವ ವಿಚಿತ್ರ ಕಷ್ಟವನ್ನು ದಲಿತ, ಮುಸ್ಲಿಂ, ಕ್ರೈಸ್ತ ಹಾಗೂ ಜೈನ ಲೇಖಕರು ಎದುರಿಸಿದ್ದಾರೆ. ಇದು ಸೃಜನಶೀಲತೆಯ ಕಷ್ಟ ಮಾತ್ರವಲ್ಲ, ಸಾಂಸ್ಕೃತಿಕವಾದ ಬಿಕ್ಕಟ್ಟೂ ಕೂಡ; ಶಾಂತಿನಾಥ ದೇಸಾಯಿಯವರು ಜೈನ ದಿಗಂಬರ ಧಾರ್ಮಿಕ ಸಮುದಾಯದಲ್ಲಿ ತಾವು ಪಡೆದ ಅನುಭವ ಜಗತ್ತನ್ನು ಮುಖಾಮುಖಿ ಮಾಡಲು ತಮ್ಮ ಕೊನೆಯ ಕಾದಂಬರಿ 'ಓಂಣಮೊ' ತನಕ ಯಾಕೆ ಕಾಯಬೇಕಾಯಿತು ? ಈ ಪ್ರಶ್ನೆಯನ್ನು ಕೇಳಿಕೊಂಡರೆ, ಈ ಬಿಕ್ಕಟ್ಟಿನ ಸ್ವರೂಪ ಗೊತ್ತಾಗುತ್ತದೆ. ನಿಸಾರರ ನಾಲ್ಕು ದಶಕಗಳ ಕಾವ್ಯದ ಮಹತ್ವವು, ಇಂತಹ ಬಿಕ್ಕಟ್ಟುಗಳನ್ನು ಮುಖಾಮುಖಿ ಮಾಡಲು ಹಿಂಜರಿಕೆಯಲ್ಲಲ್ಲ, ಪ್ರಾಮಾಣಿಕವಾಗಿ ತುಡುಕಿ ಪಟ್ಟ ಕಷ್ಟದಲ್ಲಿದೆ ಎಂದು ಅನಿಸುತ್ತದೆ.

- ೨ -

ನಿಸಾರರ ಮೊದಲ ಘಟ್ಟದ ಕಾವ್ಯವು ಸಾಂಪ್ರದಾಯಿಕ ಧರ್ಮದ ಹಿಡಿತಕ್ಕೆ ಸಿಲುಕುವ ಆತಂಕ ಹಾಗೂ ಅದರಿಂದ ತಪ್ಪಿಸಿಕೊಳ್ಳುವ ಸಂಕಲ್ಪದಿಂದ ಶುರುವಾಗುತ್ತದೆ. ಇದೊಂದು ಬಗೆಯಲ್ಲಿ ನವ್ಯದ ವ್ಯಕ್ತಿವಾದಿ ವೈಚಾರಿಕ ಪ್ರಜ್ಞೆಯ ಚಡಪಡಿಕೆ. ಇಲ್ಲಿ ಬದುಕನ್ನು ಉತ್ಕಟವಾಗಿ ಪ್ರೀತಿಸುವಿಕೆಯಿದೆ. ತನ್ನಿಚ್ಛೆಯಂತೆ ಬದುಕುವುದಕ್ಕೆ ಅಡ್ಡಿಯೆನಿಸುವ ಧರ್ಮ ಜಾತಿಗಳನ್ನು ಪ್ರತಿರೋಧಿಸುವ ಛಲವಿದೆ.

*ಇಪ್ಪತ್ತ ಐದರವ ನಾನಿನ್ನು ಯುವಕ, ಗುಡಿ ಮಸೀದಿಗಳಲ್ಲಿ ಬತ್ತಲಾಗಿಸಿ ಬದುಕ*
*ಭವದ ಬರೆಗಳ ಗುರುತ ಮುಚ್ಚಲಾಗದೆ ನಾಚಿ, ಅಧ್ಯಾತ್ಮದಿರುಕಿನಲ್ಲಿ ನುಗ್ಗಿ*
*ಮೈಮನತರಚಿ ತಲೆನರೆತು ಕುಸಿದವರ ಗುಂಪಿಂದ ನಾ ದೂರ*

*('ಹುಟ್ಟಿದ ಹಬ್ಬದ ಹಾಡು')*

ಇಲ್ಲಿ 'ಆಧ್ಯಾತಿಕ', 'ಧಾರ್ಮಿಕ' ಲೋಕದಲ್ಲಿರುವ ಯಾವ ಚೈತನ್ಯವನ್ನೂ ಪಡೆವ ವ್ಯವಧಾನವಿಲ್ಲ. ಇಲ್ಲಿನ ಅನುಮಾನ, ಬಿರುಸು, ಆದರ್ಶವಾದ ಆತ್ಮವಿಶ್ವಾಸಗಳಿಗೂ, 'ನಾನಿನ್ನೂ ಯುವಕ' ಎಂಬುದಕ್ಕೂ ಸಂಬಂಧವಿದೆ. 'ಹುಟ್ಟಿದ ಹಬ್ಬದ ಹಾಡಿ'ನ ವ್ಯಕ್ತಿವಿಶಿಷ್ಟವಾದಿ ಬಂಡುಕೋರ ನಾಯಕರು ಬಹಳ ಕಾಲ ನಿಲ್ಲುವುದಿಲ್ಲ. ಅವರ ಜಾಗದಲ್ಲಿ ಸಮುದಾಯದ ಭಾಗವಾಗಿ ಹೋದ, ಆದರೆ ಜೀವನದ ದಾರಿಯನ್ನು ಆಯ್ಕೆಮಾಡಿಕೊಳ್ಳುವಲ್ಲಿ ದ್ವಂದ್ವಕ್ಕೆ ಸಿಲುಕಿದ ನಾಯಕರು ಕಾಣಿಸುತ್ತಾರೆ. ಅವರ ಪರಕೀಯ ಪ್ರಜ್ಞೆ ಹಾಗೂ ವಿಷಾದಗಳಿಗೆ ಕೆಲಮಟ್ಟಿಗೆ ನವ್ಯಸಾಹಿತ್ಯದ ಅನಾಥಪ್ರಜ್ಞೆ, ವ್ಯಕ್ತಿವಾದಿ ಚಿಂತೆ, ಅಸ್ತಿತ್ವವಾದಿ ನಿರಾಶೆಗಳ ಪ್ರೇರಣೆ ತುಸುಮಟ್ಟಿಗೆ ಇದೆ. ಆದರೆ ಇದು ಆಧುನೀಕರಣಗೊಳ್ಳಬಯಸುವ ಭಾರತೀಯ ವಿಚಾರವಾದಿ ಮುಸ್ಲಿಮ್ ತರುಣನ ವಿಚಿತ್ರ ತಳಮಳವಾಗಿದೆ.

*ದಾಡಿ ಗಡ್ಡ ನಮಾಜಿನ ದಿವ್ಯ ಚಹರೆಯ, ತುರ್ಕೀಟೋಪಿಯ ಓರೆಯ, ಪರಿಚಿತ ಮೋರೆಯ*

*ಬದಲು ಟೈ ಸೂಟಿನ ಪರದೇಶಿ ನೆತ್ತರು ತೊಗಲಿನ, ದೇವರ ಶಂಕಿಸಿ, ಶಂಕಿಸಿ ದರೆಂತೊ ಎನುವ ದಿಗಿಲಿನ*

*ಐದು ದೆವ್ವಗಳ-ಹಾಂಗೊಮ್ಮೆ ಹೀಂಗೊಮ್ಮೆ ಕುಣಿಯೋಣು ಬಾರಾದ ದ್ವಂದ್ವ*

*('ನಾನೆಂಬ ಪರಕೀಯ')*

ಕನ್ನಡದಲ್ಲಿ 'ಮುಸ್ಲಿಂ ಲೇಖಕರು' ಎಂದು ಕರೆಯಲಾಗುವ – ಸಾರಾ ಅಬೂಬಕ್ಕರ್, ಫಕೀರ್ ಮುಹಮ್ಮದ್ ಕಟ್ಪಾಡಿ, ಬೊಳುವಾರು ಮಹಮದ್ ಕುಂಞ಼ಿ ಮುಂತಾದ ಲೇಖಕರಿಗೂ, ಈ ಘಟ್ಟದ ನಿಸಾರರಿಗೂ ವ್ಯತ್ಯಾಸವಿರುವುದು ಇಲ್ಲೆ. ಈ 'ಮುಸ್ಲಿಂ' ಲೇಖಕರು – ಬಾನು ಮುಶ್ತಾಕ್, ರಂಜಾನ ದರ್ಗಾ ಬಿಟ್ಟರೆ – 'ಬ್ಯಾರಿ' ಸಮುದಾಯದಿಂದ ಬಂದವರು. ಕರಾವಳಿಯವರು. ಸಾಮಾಜಿಕ ಅನುಭವವನ್ನು ಧಾರಣ ಮಾಡಲು ಹೆಚ್ಚು ಅವಕಾಶವುಳ್ಳ ಕಥೆ ಕಾದಂಬರಿ ಬರೆಯುವವರು. ನಿಸಾರರಂತೆ ಕವಿಗಳಲ್ಲ. ಧಾರ್ಮಿಕ ವಿಶೇಷಣದಲ್ಲಿ ತಮ್ಮನ್ನು ಗುರುತಿಸಿಕೊಳ್ಳುವುದಕ್ಕೆ ಅಷ್ಟು ಮುಜುಗರಪಡದವರು; ದಲಿತ, ಮಹಿಳಾ ಸಂವೇದನೆಗಳ ಹಾಗೆ

ಮುಸ್ಲಿಮರದೂ ಒಂದು ಸಂವೇದನೆಯಿದೆ ಎಂದು ಭಾವಿಸಿದವರು; ಅನುಭವವು ಧಾರ್ಮಿಕ ಸಾಮಾಜಿಕ ಲೋಕದ ಭಾಗವಾಗಿದ್ದರೂ ಅದರ ಜತೆಗೆ ವಿಮರ್ಶಾತ್ಮಕವಾದ ಅನುಸಂಧಾನ ಮಾಡಬಲ್ಲವರು; ಅಂದರೆ, ಪುರೋಹಿತಶಾಹಿ ಹಾಗೂ ಕೋಮುವಾದದ ಬಗ್ಗೆ ವಿರೋಧ ಉಳ್ಳವರು; ಮೂಲಭೂತವಾದಿಗಳೂ ಕೋಮುವಾದಿಗಳೂ ಅಲ್ಲದ, ಆದರೆ ಧಾರ್ಮಿಕ ನಂಬಿಕೆಯನ್ನು ಇರಿಸಿಕೊಂಡು ಬದುಕುತ್ತಿರುವ ದುಡಿವ ಸಮುದಾಯಗಳ ಬಗ್ಗೆ ಪ್ರೀತಿಯುಳ್ಳವರು. ಸಾಮಾನ್ಯರು, ಅದರಲ್ಲೂ ಮಹಿಳೆಯರು ನಿತ್ಯ ಬಾಳಿನಲ್ಲಿ ಎದುರಿಸುವ ಕಷ್ಟ ಹಾಗೂ ಪ್ರಕಟಿಸುವ ಚೈತನ್ಯವನ್ನು ಚಿತ್ರಿಸುವವರು; ಧಾರ್ಮಿಕ ಸಮುದಾಯದ ಬದುಕನ್ನು ಹೀಗೆ ಆಪ್ತತೆ ಮತ್ತು ವಿಮರ್ಶೆಗಳ ದ್ವಂದ್ವಾತ್ಮಕ ವಿಧಾನದಲ್ಲಿ ಮಂಡಿಸುವುದನ್ನು ಒಂದು ಸಾಂಸ್ಕೃತಿಕ ಹೊಣೆಗಾರಿಕೆ ಎಂದು ನಂಬಿದವರು; ಎಂತಲೇ ಇವರ ಮೊದಲ ಘಟ್ಟದ ಕತೆ-ಕಾದಂಬರಿಗಳಲ್ಲಿ ಧರ್ಮದ ಜತೆ ಸಂಘರ್ಷ ಮಾಡುವ ಬಂಡುಕೋರ ನಾಯಕರು ಬರುತ್ತಾರೆ. ಇವರು ನಿಸಾರರ ಕಾವ್ಯದ ನಾಯಕರಿಗಿಂತ ಕೊಂಚ ಭಿನ್ನರಾದವರು.

- ೩ -

ಈ ಹೋಲಿಕೆಯ ಮಾತುಗಳನ್ನಾಡುವಾಗ, ನಿಸಾರ್ ಬರೆಯಲು ಆರಂಭಿಸಿದ ಮೊದಲ ಘಟ್ಟದಲ್ಲಿ ಕನ್ನಡದಲ್ಲಿ ಬಹಳ 'ಮುಸ್ಲಿಂ' ಲೇಖಕರು ಇರಲಿಲ್ಲ; ತಮ್ಮ ಧಾರ್ಮಿಕ ಸಮುದಾಯ ಮೂಲಕದ ಅನುಭವವನ್ನು ಬಳಸಿಕೊಳ್ಳುವುದಕ್ಕೆ ಮುಜುಗರ ಪಡುವ ಸನ್ನಿವೇಶವಿತ್ತು ಎಂಬುದನ್ನು ಮರೆವಂತಿಲ್ಲ. ಈ ಹಿಂಜರಿಕೆಗೆ ನಗರವಾಸಿ ಬ್ರಾಹ್ಮಣ ಮಧ್ಯಮ ವರ್ಗವೇ ಪ್ರಧಾನವಾಗಿರುವ ಓದುಗ ವರ್ಗವು ಪರೋಕ್ಷ ಕಾರಣ. ಆದರೆ ನಂತರದ ಘಟ್ಟದಲ್ಲಿ ನಿಸಾರ್ ಕಾವ್ಯ ಧಾರ್ಮಿಕ ಲೋಕದ ಅನುಭವಗಳನ್ನು ದೂರೀಕರಿಸುವುದಕ್ಕೆ ಬದಲಾಗಿ, ಅದರ ಜತೆ ವಿಮರ್ಶಾತ್ಮಕವಾದ ನಿಲುನಿಂದ ಅನುಸಂಧಾನ ಮಾಡಲು ಆರಂಭಿಸಿತು. ನಾಸ್ತಿಕವಾದಿ ವಿಚಾರವಾದದ ಸೆಡವು ಕಡಿಮೆಗೊಂಡು, ಧಾರ್ಮಿಕತೆಯ ಒಳಗೂ ಮಾನವೀಯ ಆಯಾಮಗಳಿರ ಬಹುದು ಎಂದು ನೋಡುವ ಉದಾರವಾದಿ ಗುಣಗ್ರಾಹಿತನ ಕೆಲಸ ಮಾಡತೊಡಗಿತು. ಕವಿಗೆ ಪ್ರವಾದಿಯನ್ನು 'ದೇವರ ಕನ್ನಡಿ' ಎಂಬ ರೂಪಕದಲ್ಲಿ ಬಣ್ಣಿಸಲು ಸಾಧ್ಯವಾಗುವುದು ಈ ಸಹನೆಯಿಂದ. ಇದೇ ಹೊತ್ತಲ್ಲಿ ಇಸ್ಲಾಮ್ ಧರ್ಮದ ಭಾಗವಾಗಿ ಬೆಳೆದಿರುವ ಕಂದಾಚಾರಗಳನ್ನು ಕುರಿತ ಅಸಹನೆ, ಅಮಾಯಕ ಜನರನ್ನು ವಶಪಡಿಸಿಕೊಳ್ಳುವ 'ಕೋಮಿನ ಕಂತ್ರಾಟುದಾರರ' ಬಗ್ಗೆ ವ್ಯಗ್ರತೆಯೂ ಕಾಣಿಸುತ್ತದೆ. ಈ ಹಂತದಲ್ಲೆ ನಿಸಾರರ ಜನಪ್ರಿಯವಾದ 'ಅಮ್ಮ ಆಚಾರ ಮತ್ತು ನಾನು' ಪದ್ಯ ಹುಟ್ಟಿದ್ದು. ಇಲ್ಲಿ ಧರ್ಮದ ಹೆಸರಲ್ಲಿ ಹುಟ್ಟುವ ಸಂಪ್ರದಾಯದ ಉಗ್ರಟೀಕೆಯಿಲ್ಲ, ವೈಚಾರಿಕತೆಯಿಂದ ಹುಟ್ಟಿದ ವ್ಯಂಗ್ಯ ಮತ್ತು ತಮಾಷೆಯಿದೆ. ಕಾರಣ, ಬುರುಖಾ ಆಚರಣೆ ಮಾಡುತ್ತಿರುವವರು ಸ್ವತಃ ತನ್ನ ತಾಯಿ ಮತ್ತು ಹೆಂಡತಿ. ಕೋಮಿನ ಕಂತ್ರಾಟುದಾರರಲ್ಲ. ಒಂದೇ ಧಾರ್ಮಿಕ ಮೂಲದಿಂದ ಹುಟ್ಟುವ ಎರಡು ಬಗೆಯ ಅಭಿವ್ಯಕ್ತಿಗಳನ್ನು ವಿಂಗಡಿಸಿ ನೋಡುವ, ಅವಕ್ಕೆ ತಕ್ಕವಾದ ಆಕ್ರೋಶ ಮತ್ತು ಗೇಲಿ ಮಾಡುವ ತಾರತಮ್ಯವನ್ನು ಕಾವ್ಯ ತೋರುತ್ತದೆ.

ಪಾಂಡವರ ರೀತಿಯಲಿ ಒಳಿತು ಕೆಲವಿದ್ದರೂ
ಕೆಡುಕು ವಿಧಗಳೆನಿತು ಕೌರವರ ತರಹ
ಪಾಂಡವರ-ಕೌರವರ ಕುರುಕ್ಷೇತ್ರ ನಿನ್ನ ಮನ
ಪಾಂಡವರ ಗೆಲಿಸು ನೀ, ಕೌರವರ ತರಿದು.

ಬಿ. ಎಸ್. ರಾಮರಾವ್

- ೪ -

ನಿಸಾರ್ ಕಾವ್ಯದಲ್ಲಿ ೧೯೭೦ರಿಂದ ಪರಕೀಯ ಪ್ರಜ್ಞೆಯೊಂದರ ಪ್ರವೇಶವಾಗುತ್ತದೆ. ಇದು 'ನಾನೆಂಬ ಪರಕೀಯ' ಕವಿತೆಯ ವ್ಯಕ್ತಿ ವಿಶಿಷ್ಟವಾದಿ ನಾಯಕನ ಬಿಡುಗಡೆಯ ತುಡಿತವಲ್ಲ. ನಿರ್ದಿಷ್ಟ ಧರ್ಮದಲ್ಲಿ ಹುಟ್ಟಿದ ಕಾರಣದಿಂದಲೇ ಅನುಭವಕ್ಕೆ ಬರುವ ಸಾಂಸ್ಕೃತಿಕ ಪರಕೀಯತೆಯ ಪ್ರಜ್ಞೆ. ಇಲ್ಲಿಂದ ಕಾವ್ಯ ಧಾರ್ಮಿಕವಾದ ಸರಳ ವಿಮರ್ಶೆಯಿಂದ ಮುನ್ನಡೆದು, ನಿರ್ದಿಷ್ಟ ಧಾರ್ಮಿಕ ಸಮುದಾಯಗಳನ್ನು ಬಲಪಂಥೀಯ ರಾಷ್ಟ್ರೀಯವಾದಿಗಳು ನಡೆಸಿಕೊಳ್ಳುವುದರಿಂದ ಹುಟ್ಟುವ ವೇದನೆಗಳ ಶೋಧಕ್ಕೆ ತೊಡಗಿಸಿಕೊಳ್ಳುತ್ತದೆ. ಇದು ನಿಸಾರ್ ಕಾವ್ಯಕ್ಕೆ ವಿಷಾದದ ಧಾಟಿಯನ್ನು ದಾರ್ಶನಿಕತೆಯನ್ನು ರಾಜಕೀಯ ಜಿಜ್ಞಾಸೆಯನ್ನು ತಂದಿತ್ತಿತು. ಕವಿಯ ಗ್ರಹಿಕೆಗಳು ಬದಲಾಗುತ್ತ ಹೋದಂತೆ ಕವಿತೆಯ ಅಭಿವ್ಯಕ್ತಿಯಲ್ಲಿ ಬಳಕೆಯಾಗುವ ಧಾಟಿಯೂ ಬದಲಾಗುತ್ತ ಹೋಗುತ್ತದೆ. 'ನಿಮ್ಮೊಡನಿದ್ದೂ ನಿಮ್ಮಂತಾಗದೆ' ಕವಿತೆ ಹುಟ್ಟಿದ್ದು ಆಗ. ಬಹುಶಃ ಮುಸ್ಲಿಮ್ ಹಿನ್ನೆಲೆಯಿಂದ ಬಂದವರು ನಗರದ ಉಚ್ಚ ಜಾತಿಯ ಮಧ್ಯಮ ವರ್ಗದ ನಡುವೆ ಬದುಕುವಾಗ ಅನುಭವಕ್ಕೆ ಬರುವ ಚಿತ್ರ ಪರಕೀಯತೆಯದು; ಈ ಕವಿತೆಯಲ್ಲಿ ತನ್ನನ್ನು ಹಾಗೂ ತನ್ನ ಬೆಲೆಗಟ್ಟುವವರನ್ನೂ 'ನಾನು' 'ನೀವು' ಎಂಬ ಸರ್ವನಾಮಗಳನ್ನು ಬಳಸಿ ನೋಡುವ ವಿಧಾನವಿದೆ.

ನಿಮ್ಮ ಮಾತುಕತೆಗಳಲ್ಲಿ ಹುದುಗಿದ್ದ ಬೆಕ್ಕು, ಸಂಶಯದ ಪಂಜವೆತ್ತಿ
ನನ್ನ ನಂಬಿಕೆ ನೀಯತ್ತು ಹಕ್ಕು, ಕೊನೆಗೆ ಸಾಚಾತನವನ್ನೂ ಪರಚಿ
ಒತ್ತಿನೋವಿಗೆ ಕಣ್ಣು ತುಂಬಿದ್ದರೂ, ಚೆಲ್ಲಿದ ರಕ್ತದಲ್ಲಿ ರಾಷ್ಟ್ರೀಯತೆಯ ಧಾತು
ನನ್ನೆದುರಿನಲ್ಲೇ ತನಿಖೆ ಮಾಡುವ ಕ್ಷಣವನ್ನ , ಹುಸಿನಗುತ ಎದುರಿಸುವುದಿದೆಯಲ್ಲ
ಅದು ಬಲು ಕಷ್ಟದ ಕೆಲಸ ('ನಿಮ್ಮೊಡನಿದ್ದೂ ನಿಮ್ಮಂತಾಗದೆ')

- ೫ -

ಮುಂದೆ ನಿಸಾರ್ ಕಾವ್ಯ ಮತ್ತಷ್ಟು ಗಾಢ ವಿಷಾದದ ಕಡಲಿಗೆ ಇಳಿಯುತ್ತದೆ. ತನ್ನನ್ನು ಬಲಿಪಶು ಎಂದು ಭಾವಿಸುತ್ತದೆ. ತನ್ನ ಸ್ಥಿತಿಗೆ ರೋದಿಸುತ್ತ ಸ್ವಮರುಕದತ್ತ ಚಲಿಸುತ್ತದೆ. ಆತ್ಮರಕ್ಷಣಾತ್ಮಕವಾಗುತ್ತದೆ. ಈ ಸನ್ನಿವೇಶದಲ್ಲಿ 'ಸವತಿ ಮಕ್ಕಳ ಹಾಗೆ ಕಾಡಬೇಡವ್ವ' 'ಭಾರತಾಂಬೆಗೆ' ಮುಂತಾದ ಕವನಗಳು ಮೂಡಿದವು. ಕೋಮುವಾದಿ ರಾಷ್ಟ್ರೀಯತೆಗೆ ನಿಸಾರ್ ಕಾವ್ಯ ಮಾಡುವ ತೀವ್ರ ಪ್ರತಿಕ್ರಿಯೆಯ ಹಂತವಿದು. ಕುತೂಹಲಕರ ಎಂದರೆ ಈ ಕವಿತೆಗಳ ನಾಯಕರು ತಮ್ಮ ವೇದನೆ ಅಹವಾಲುಗಳನ್ನೆಲ್ಲ ವ್ಯಕ್ತಮಾಡುವುದು ಭಾರತಾಂಬೆಯ ಮುಂದೆ; ಬ್ರಿಟಿಶರ ಆಳ್ವಿಕೆಯ ಹೊತ್ತಲ್ಲಿ ನಾಡಿನ ದುರವಸ್ಥೆಯನ್ನು ಚಿತ್ರಿಸಲು ಭರತಮಾತೆಯ ಜತೆಗೆ ಸಂಭಾಷಣೆ ಮಾಡುವ ನಾಟಕೀಯ ವಿನ್ಯಾಸವು ಕನ್ನಡ ರಾಜಕೀಯ ಕಾವ್ಯದಲ್ಲಿದೆಯಷ್ಟೆ. ಬಿ.ಎಂ.ಶ್ರೀ. ('ಭರತಮಾತೆಯ ನುಡಿ'), ಬೇಂದ್ರೆ ('ನರಬಲಿ') ಬಳಸಿದ ಈ ವಿನ್ಯಾಸವನ್ನು ಮುಂದೆ ದಲಿತಕವಿಗಳು ತಮ್ಮದೇ ಆದ ರೀತಿಯಲ್ಲಿ ಮುಂದುವರೆಸಿದರು. ಈ ಹಂತದ ನಿಸಾರ್ ಕಾವ್ಯದಲ್ಲಿ ಎರಡು ತಾತ್ವಿಕ ಸಮಸ್ಯೆಗಳಿವೆ. ಮೊದಲನೆಯದಾಗಿ, ಇಲ್ಲಿ ಕೋಮುವಾದಿ ರಾಷ್ಟ್ರೀಯತೆಯ ಜತೆ ಸಂಘರ್ಷಕ್ಕೆ ಇಳಿಯುವಿಕೆಯಿಲ್ಲ. ಬದಲಿಗೆ ಅದರ ಆಪಾದನೆಗಳಿಗೆ ಉತ್ತರಿಸುತ್ತಾ ಹೋಗುವಿಕೆಯಿದೆ. ಎರಡನೆಯದಾಗಿ, ವರ್ತಮಾನದ ವಿಷಮತೆಯನ್ನು ಪ್ರತಿರೋಧಿಸುವುದಕ್ಕಾಗಿ ಗತಕಾಲದಲ್ಲಿತ್ತು ಎನ್ನಲಾಗುವ ಸೌಹಾರ್ದತೆಯನ್ನು ಬಣ್ಣಿಸುವುದು. ಚರಿತ್ರೆಯನ್ನು ವೈರುಧ್ಯಗಳಿಲ್ಲದ ಸಾಮರಸ್ಯವನ್ನು ಕಲ್ಪಿಸಿಕೊಳ್ಳುವ ನಿಲುವೆ ಅಮಾಯಕ. ಬಹುಶಃ ಈ ನಿಲುವಿನ ಮುಂದುವರಿಕೆಯಾಗಿ ಗತಕಾಲದ ಭವ್ಯ ಪರಂಪರೆಯ ಕಲ್ಪಿಸಿಕೊಂಡು ಹಾಡುವ 'ನಿತ್ಯೋತ್ಸವ'ದಂತಹ ಭಾವಗೀತೆಗಳನ್ನು ನಿಸಾರ್ ರಚಿಸತೊಡಗಿದರು. ವರ್ತಮಾನ ವಿಷಮತೆಯನ್ನು ಗತದ ವೈಭವೀಕರಣದಿಂದ ಮುಖಾಮುಖಿ ಮಾಡುವ ತಾತ್ವಿಕ ವಿನ್ಯಾಸದ ಈ ಕವಿತೆಗಳು ಸಂಸ್ಕೃತಮಯವಾಗಿವೆ, ಪ್ರಾಸಬದ್ಧವಾಗಿವೆ ಎಂಬುದು ಗಮನಾರ್ಹ. ಕೃತಕ ಪ್ರಾಸಗಳಲ್ಲಿ ಕವಿತೆಯ ಸಾಲುಗಳು ಬಂಧನಕ್ಕೊಳಗಾದಂತೆ, ಚಿಂತನೆ ಕೂಡ ಸ್ಥಗಿತಗೊಳ್ಳುತ್ತದೆ. ಕೋಮುವಾದದ ಆಪಾದನೆ ರಾಜಕಾರಣಕ್ಕೆ ಪ್ರತಿಕ್ರಿಯೆಯಾಗಿ ಹುಟ್ಟುವ ಈ ಮಾದರಿಯ ಸಾಮರಸ್ಯ ತತ್ವ ಅರ್ಥವಾಗುತ್ತದೆ. ಆದರೆ ಇದು ನಮ್ಮ ಸಂಸ್ಕೃತಿಗಳಲ್ಲಿರುವ ಸಂಕೀರ್ಣ ಬಿಕ್ಕಟ್ಟುಗಳ ಅನುಸಂಧಾನಕ್ಕೆ ಬೇಕಾದ ಸೂಕ್ಷ್ಮತೆಗೆ ಕಾವ್ಯವನ್ನು ಎರವಾಗಿಸುತ್ತದೆ.

ನಿಸಾರ್ ಕಾವ್ಯದಲ್ಲಿ ಚಿಂತನಶೀಲತೆ ಇದ್ದರೂ, ಅವರದು ಮೂಲತಃ ಭಾವುಕತೆ ತುಂಬಿದ ಕಾವ್ಯ. ಹೀಗಾಗಿ ಅವರ ನಾಡಗೀತೆಗಳಲ್ಲಿ ಇರುವ ದೇಶಭಕ್ತಿ ಪ್ರಾಮಾಣಿಕವಾಗಿದೆ. ಅದರಲ್ಲೂ ಚೀನಾ-ಭಾರತ ಯುದ್ಧದ ಹೊತ್ತಿನ ಕವನಗಳಲ್ಲಿ ಇದು ಚೆನ್ನಾಗಿ ಕಾಣುತ್ತದೆ. ಆದರೆ ಈ ಭಾವುಕತೆಯೆ ಪ್ರಚಲಿತ ಜನಪ್ರಿಯ ಗ್ರಹಿಕೆಗಳನ್ನು ಒಡೆದು ನೋಡಲು ತೊಡಕಾಗಿದೆ. ಯುದ್ಧಕಾಲೀನ ದೇಶಭಕ್ತಿ ಪರಿಕಲ್ಪನೆಯ ಪ್ರಮುಖ ಲಕ್ಷಣವೆಂದರೆ, ಶತ್ರುವನ್ನು ಕಟ್ಟಿಕೊಳ್ಳುವುದು; ಶತ್ರುದೇಶವನ್ನು ಆಕ್ರಮಣಕಾರಿಯೆಂದೂ ತನ್ನನ್ನು ಆಕ್ರಮಣಕ್ಕೆ ಒಳಗಾದ ಮುಗ್ಧನೆಂದೂ ನಂಬುವುದು; ಶತ್ರುಸೈನಿಕರ ಸಾವನ್ನು ನಮ್ಮ ಸೈನಿಕ ಶೌರ್ಯವೆಂದು ತಿಳಿಯುವುದು; ಎಲ್ಲವನ್ನೂ 'ನನ್ನ' 'ಅನ್ಯ' ಎಂಬ ಭೇದ ಕಲ್ಪನೆಯಲ್ಲೆ ಗ್ರಹಿಸುವುದು.

ನಾಡ ಮಾನ ನಮ್ಮ ಮಾನ ಶತ್ರುದಮನ ನಮ್ಮ ಗಾನ
ಮನೆಬಾಗಿಲ ಹೊಗಲು ಬಂದ ಪರದೇಶದ ಹುಲು ಮದಾಂಧ
('ನೆಲ ನಮ್ಮದು ಜಲ ನಮ್ಮದು')

ತಾಯ ಮಾನ ಉಳಿಸಲೆಂದು, ಕಳೆದ ನೆಲವ ಗಳಿಸಲೆಂದು
ಶ್ರಮಿಸಿದ ನಮ್ಮ ತೇಜರೆ, ಇಗೋ ವಂದನೆ ನಿಮಗೆ ('ಅಭಿವಂದನೆ ನಿಮಗೆ')

ಇವು ಬಲಪಂಥೀಯ ರಾಷ್ಟ್ರೀಯತೆಗೆ ಪ್ರಿಯವಾದ ರಚನೆಗಳು. ಇಲ್ಲಿನ ನುಡಿಗಟ್ಟು, ಕೃತಕ ಲಯಗಾರಿಕೆ ಹಾಗೂ ಬಹಿರ್ಮುಖತೆಗಳು ಇದಕ್ಕೆ ಪೂರಕವಾಗಿವೆ. ಕುವೆಂಪು ಅವರ 'ಭಾರತ ಜನನಿಯ ತನುಜಾತೆ'ಯನ್ನು ಒಳಗೊಂಡಂತೆ, ಎಲ್ಲ ನಾಡಗೀತೆಗಳು ಚರಿತ್ರೆ ಹಾಗೂ ವರ್ತಮಾನದ ವೈರುಧ್ಯಗಳನ್ನು ನಿವಾರಿಸಿಕೊಂಡ ಸುಂದರ ಚಿತ್ರ ಕಟ್ಟಿಕೊಡುತ್ತವೆ.

ಕನ್ನಡದಲ್ಲಿ ಬಂದ ಬಹುತೇಕ ಯುದ್ಧವಿರೋಧಿ ಕವಿತೆಗಳು 'ಯುದ್ಧಸಂಸ್ಕೃತಿಯನ್ನು ಯಾರು ಹುಟ್ಟುಹಾಕುತ್ತಿದ್ದಾರೆ, ಇದಕ್ಕೆ ಬಲಿಯಾಗುತ್ತಿರುವವರು ಯಾರು ?' ಮುಂತಾದ ಮೂಲ ಭೂತ ಪ್ರಶ್ನೆಗಳನ್ನೆ ಎತ್ತುವುದಿಲ್ಲ. ಬಲಪಂಥೀಯ ರಾಷ್ಟ್ರವಾದಿಗಳು ಕಟ್ಟುವ ಏಕರೂಪಿ ಗ್ರಹಿಕೆಗಳನ್ನು ನಮ್ಮ ಲೇಖಕರೂ ವಿಮರ್ಶೆಯಿಲ್ಲದೆ ಒಪ್ಪುವುದು ವಿಸ್ಮಯ ಬರಿಸುತ್ತದೆ. ಕಾರ್ಗಿಲ್ ಸಮಯದಲ್ಲಿ ಕನ್ನಡದ ಕವಿಗಳು ಬರೆದ ಹೆಚ್ಚಿನ ಕವಿತೆಗಳು ಇಂತಹವು. ವ್ಯಂಗ್ಯವೆಂದರೆ, ಬದುಕಿನ ವೈರುಧ್ಯಗಳನ್ನು ಧೇನಿಸುವ ನಿಸಾರರ ಜಿಜ್ಞಾಸು ಕವಿತೆಗಳಿಗಿಂತ, ಓದುಗರು ಈ ನಾಡಗೀತೆಗಳನ್ನು ಹೆಚ್ಚು ಮಾನ್ಯ ಮಾಡಿದ್ದು, ನಿಸಾರರ ಜನಪ್ರಿಯತೆಗೆ ಕಾರಣವಾದ ಈ ಕವಿತೆಗಳಿಗೂ, ಅವು ಗತದ ವೈಭವೀಕರಣವನ್ನು ವಿಮರ್ಶೆಯಿಲ್ಲದೆ ಮಾಡುತ್ತವೆ ಎನ್ನುವುದಕ್ಕೂ, ಕವಿಯ ಧಾರ್ಮಿಕ ಹಿನ್ನೆಲೆಗೂ ವಿಚಿತ್ರ ಸಂಬಂಧವಿದೆ.

- ೬ -

ಆದರೆ ನಿಸಾರ್ ಕಾವ್ಯಕ್ಕೆ ತನ್ನ ಪರಿಮಿತಿಗಳ ಚಿಪ್ಪನ್ನು ಒಡೆದು ಹೊರಬರುವ ವಿಚಿತ್ರ ಶಕ್ತಿಯಿದೆ. ಒಳಎಚ್ಚರ ಹಾಗೂ ಸೂಕ್ಷ್ಮತೆ ಇರುವ ಲೇಖಕರು ಹುಸಿ ವಿಚಾರ ಪ್ರಣಾಳಿಕೆಯಲ್ಲಿ ಕರೆಂಟು ತಂತಿಗೆ ಸಿಲುಕಿಕೊಂಡ ಗಾಳಿಪಟದಂತೆ ಸಿಲುಕುವುದಿಲ್ಲ. ಬಲಪಂಥೀಯರಿಗೆ ಪ್ರಿಯವಾದ ರಾಷ್ಟ್ರೀಯತೆಯನ್ನು ಮಂಡಿಸಿದ ಕಾವ್ಯವೆ ಅದರಿಂದ ತನಗಾದ ಗಾಯಗಳನ್ನು ತೋರಿಸಲು ಶುರುಮಾಡುತ್ತದೆ; ಗತದ ವೈಭವೀಕರಣ ಮಾಡಿದ್ದ ಕಾವ್ಯವೆ, ವೈಚಾರಿಕ ಎಚ್ಚರದಿಂದ ಗಾಢ ವಿಷಾದದಿಂದ ತನ್ನ ದೇಶವನ್ನು ನೋಡತೊಡಗುತ್ತದೆ: 'ನಾಡ ದೇವಿಯೇ ನಿನ್ನ ಮಡಿಲಲ್ಲಿ ಕಂಡೆ ಎಂಥ ದೃಶ್ಯ... ಒಂದೆದೆಯ ಹಾಲ ಕುಡಿದವರ ನಡುವೆ ಎಷ್ಟೊಂದು ಭೇದ ತಾಯೆ' ಎಂಬ ದುಗುಡವು ತನ್ನ ಶ್ರದ್ಧೆಯನ್ನು ತಾನೇ ಭಗ್ನಗೊಳಿಸಿ ಕೊಂಡು ಹುಟ್ಟಿದ್ದು. ಇದು 'ಹಲವೆನ್ನದ ಹಿರಿಮೆಯೆ ಕುಲವೆನ್ನದ ಗರಿಮೆಯೆ' ಎಂದು ಸಂಭ್ರಮಿಸುವ 'ನಿತ್ಯೋತ್ಸವ' ಕವಿತೆಗೆ ತಾನೇ ಎದುರುಟೀಕು ಬರೆಯುತ್ತದೆ. ಹಿಂದೆ ಕವಿಯಿಂದ ಸ್ತುತಿಸಿಕೊಂಡಿದ್ದ ನಾಡದೇವಿ, ಈಗ ಕವಿಯಿಂದ ದೂರು ಕೇಳುವ, 'ಸವತಿ ಮಕ್ಕಳ ಹಾಗೆ ಕಾಡಬೇಡವ್ವ' ಎಂಬ ಬುದ್ಧಿಮಾತು ಕೇಳುವ ನಾಟಕೀಯ ಪರಿಸ್ಥಿತಿ ಬರುತ್ತದೆ. ನಿಸಾರ್ ಕಾವ್ಯದಲ್ಲಿ ಬೇರೆಬೇರೆ ಕವಿತೆಗಳು ಒಂದಕ್ಕೊಂದು ವಿರುದ್ಧ ನಿಂತು ತಮ್ಮೊಳಗೆ ವಾಗ್ವಾದ ಮಾಡುವ ಈ ಪರಿ ವಿಶಿಷ್ಟವಾಗಿದೆ. ನಿಸಾರರ ರಾಷ್ಟ್ರೀಯವಾದಿ ನಾಡಗೀತೆಗಳು ಅರೆಸತ್ಯಗಳಿಂದಲೂ ಮುಗ್ಧತೆಯಿಂದಲೂ ಕೂಡಿದ್ದರೆ, ವಾಸ್ತವವಾದಿ ನಾಡಗೀತೆಗಳು ವಿಷಾದದಿಂದಲೂ ವಿಚಾರದಿಂದಲೂ ಎಚ್ಚರಿಕೆಯಿಂದಲೂ ಸಾಂಸ್ಕೃತಿಕ ಪ್ರಜ್ಞೆಯಿಂದಲೂ ಕೂಡಿವೆ.

- ೭ -

ಸಾಂಸ್ಕೃತಿಕವಾಗಿ ಪ್ರಬುದ್ಧವಾದ ಕಾವ್ಯವನ್ನು ನಿಸಾರ್ ತಮ್ಮ ನಡುಗಾಲದಲ್ಲಿ ಬರೆದರು. ಇದರಲ್ಲಿ ಭಿನ್ನ ಧಾರ್ಮಿಕ ಸಮುದಾಯಗಳ ನಡುವಣ ಚಾರಿತ್ರಿಕ ಸಂಘರ್ಷ ಹಾಗೂ ದೈನಿಕ ಬದುಕಿನಲ್ಲಿ ಇರುವ ಸಾಮಾಜಿಕ ಮಾನವೀಯ ಸಂಬಂಧಗಳ ನಡುವಣ ಬಿಕ್ಕಟ್ಟುಗಳ ಶೋಧವಿದೆ. ಸನ್ನಿವೇಶವನ್ನು ತಣ್ಣಗೆ ಸೂಕ್ಷ್ಮವಾಗಿ ವಿಸ್ಮಯದಿಂದ ದುಗುಡದಿಂದ ಪರಿಶೀಲಿಸುವ ಗುಣವಿದೆ. 'ರಂಗೋಲಿ ಮತ್ತು ಮಗ' ಇತ್ಯಾದಿ ಕವನಗಳು ಇಂತಹವು. ಇದು ರಂಗೋಲಿಗೆ ನಾಲ್ಕು ತಲೆಮಾರುಗಳ ಭಿನ್ನ ಪ್ರತಿಕ್ರಿಯೆಗಳನ್ನು ಒಳಗೊಂಡಿದೆ. ಮೊದಲ ತಲೆಮಾರಿಗೆ ಸೇರಿದ ಅಜ್ಜ, ಔಟ್‌ಹೌಸಿನ ಜನ ರಂಗೋಲಿ ಬಿಡಿಸಿದರೆ ಬಿರುನುಡಿಯ ದೌಲತ್ತು ತೋರುವವಳು; ಎರಡನೆಯ ತಲೆಮಾರಿನ ತಾಯಿ, ಮಗ ಮನೆಯಲ್ಲಿ ರಂಗೋಲಿ ಬಿಡಿಸಿದರೆ 'ಕಾಫರ್' ಎಂದು ಬೈಯುವವಳು; ಮೂರನೆಯ ತಲೆಮಾರಿಗೆ ಸೇರಿದ ಕತೆಯ ನಾಯಕ, ಬಾಲ್ಯದಿಂದಲೂ ರಂಗೋಲಿಗೆ ಆಕರ್ಷಿತನಾದವನು. ಧರ್ಮ ಭೀರುವಾದ ಕಾರಣ, ಈ ಪ್ರೀತಿಯನ್ನು ನಿರಾಳವಾಗಿ ವ್ಯಕ್ತಮಾಡಲಾಗದ ಅಸಹಾಯಕನು; ತನ್ನ ಮಗ 'ನಾವು ಯಾಕೆ ರಂಗೋಲಿ ಬಿಡೋಲ್ಲ' ಎಂದು ಕೇಳಿದರೆ, 'ಇದು ನಮ್ಮ ಪದ್ಧತಿಗೆ ಸಲ್ಲ' ಎಂದು ಉತ್ತರಿಸಿ ಜಾರಿಕೊಳ್ಳುವವನು; ಆದರೆ ನಾಲ್ಕನೇ ತಲೆಮಾರಿಗೆ ಸೇರಿದ ಅವನ ಮಗನಿಗೆ ಮತಧರ್ಮದ ಅಂಕುಶವಿಲ್ಲ. ಅವನು ಮಗುಸಹಜ ಮುಗ್ಧತೆ ಹಾಗೂ ಕುತೂಹಲದಿಂದ ರಂಗೋಲಿಗೆ ಮನಸೋತವನು. ಅವನು ಹಾಕುವ ಸರಳ ಪ್ರಶ್ನೆಗಳು ಕತೆಯ ನಾಯಕನ ಆತ್ಮಸಾಕ್ಷಿಯನ್ನು ಕಂಗೆಡಿಸುತ್ತವೆ. ಮಗನಿಗೆ ತೃಪ್ತಿಕರ ಉತ್ತರ ಕೊಡಲಾಗದೆ ಒದ್ದಾಡುತ್ತಾನೆ. ಅಪ್ಪನ ಅಧಿಕಾರದಿಂದ ಕೊಟ್ಟ ಉತ್ತರವು ಹುಸಿ ಎಂದು ಅವನಿಗೇ ಅನಿಸುತ್ತದೆ. ಮಗನ ಮುಗ್ಧ ಮಾತಲ್ಲಿ ಹೊಮ್ಮುವ ನಿಷ್ಠುರ ಸತ್ಯ ಚುಚ್ಚುತ್ತದೆ. ಅವನು ಅಂತರ್ಮುಖಿಯಾಗುತ್ತಾನೆ.

ಕವಿತೆ ಏನನ್ನು ಧ್ವನಿಸುತ್ತಿದೆ ? ಸತ್ಯವನ್ನು ಹೇಳುವ ಶಕ್ತಿಯು ಮತಧರ್ಮಗಳ ನಿರ್ಬಂಧಗಳ ಹಂಗಿಲ್ಲದೆ ಚಿಂತಿಸುವ ಮಕ್ಕಳ ಮುಗ್ಧತೆಗಿದೆ ಎಂದೆ ? ಖಚಿತ ಉತ್ತರ ಕೊಡುವ ಹಠಮಾಡದೆ ಕವಿತೆ 'ರಂಗೋಲಿ ಹಾಯಾಗಿತ್ತು ಯಾವತ್ತಿನಂತೆ, ಬೆರಗು ಪ್ರಶ್ನೆಗಳವಳಿ ರೆಕ್ಕೆ ಹರಡಿದ ಪುಟ್ಟ ಹಕ್ಕಿಯಂತೆ' ಎಂದು ಮುಗಿಯುತ್ತದೆ. ಇಲ್ಲಿ ಸಾಂಸ್ಕೃತಿಕ ಸಂಘರ್ಷಗಳಲ್ಲಿ ಬದುಕಿನ ಅರ್ಥ ಹುಡುಕುವ ಸಂಯಮವಿದೆ. ಗುಡಿ ಮತ್ತು ಮಸೀದಿ ಸಂಸ್ಕೃತಿಗಳು ಕವಿತೆಯ ನಾಯಕನಲ್ಲಿ ಹುಟ್ಟಿಸುವ ಆಕರ್ಷಣೆ ವಿಕರ್ಷಣೆಗಳನ್ನು ಚಿತ್ರಿಸುವ 'ಇಬ್ಬಂದಿ' ತರಹದ ಕವನಗಳಲ್ಲೂ ('ಸಂತೈಸದು ವಿಗ್ರಹ, ಬಾ ಎನ್ನದು ಕಾಬಾ') ದ್ವಂದ್ವವಿದೆ. ಸಮಸ್ಯೆಯನ್ನು, ಅಲ್ಲಿ ದ್ವಂದ್ವಗಳನ್ನು, ಸರಳವಾಗಿ ಸಮನ್ವಯಗೊಳಿಸುವಿಕೆ ಇದೆ. ಆದರೆ ಇಲ್ಲಿ ಸಂಘರ್ಷಗಳನ್ನು ಸಮನ್ವಯಗೊಳಿಸುವ ಅವಸರವಿಲ್ಲ. ಇಲ್ಲಿನ ಸಾಂಸ್ಕೃತಿಕ ವಿವೇಕದ ಮಹತ್ವ ಇರುವುದು ರಂಗೋಲಿಯನ್ನು 'ಸ್ವಧರ್ಮ'ದ ಭಯದಿಂದ ನಿರಾಕರಿಸುವುದರಲ್ಲಿ ಅಲ್ಲ; ಅದನ್ನೊಂದು ಸಂಸ್ಕೃತಿ ಶಿಷ್ಟ ಆಚರಣೆಯೆಂದು ಸಂಭ್ರಮಿಸುವುದರಲ್ಲೂ ಅಲ್ಲ; ಬದಲಿಗೆ ಕಲೆಯನ್ನು ಸೌಂದರ್ಯದ ಅನುಭವವಾಗಿ ನೋಡುವುದಕ್ಕೂ ಬಿಡದ ಮತೀಯ ಅಂಕುಶಗಳನ್ನು ಮನಸ್ಸನ್ನು ನಿಯಂತ್ರಿಸುವುದಕ್ಕೆ ಪಡುವ ತಲ್ಲಣದಲ್ಲಿ; ಸಮಸ್ಯೆಗೆ ಸರಳ ಪರಿಹಾರ ಕಂಡುಕೊಳ್ಳುವ ಬದಲು ಉತ್ತರ ಹುಡುಕುವ ಮುಕ್ತತೆಯಲ್ಲಿ. ಧಾರ್ಮಿಕ ಲೋಕಗಳನ್ನು ಅವುಗಳ ಮೂಲಭೂತವಾದಿ ನೆಲೆಯಿಂದ ಹೊರತುಪಡಿಸಿ ಡೆಮಾಕ್ರಟಿಕ್ಕಾಗಿ ಸೆಕ್ಯುಲರಾಗಿ ಅನುಸಂಧಾನ ಮಾಡುವುದು ಹೇಗೆ ಎಂಬುದು ಈಗ್ಲೂ ಸವಾಲಾಗಿದೆ. ಇದಕ್ಕೆ ಕವಿತೆ ಬಹುಶಃ ಲೋಕವನ್ನು ಬೆರಗಿನಿಂದ ನೋಡುವ ಮಗುತನ, ತರ್ಕಸತ್ಯವುಳ್ಳ ವೈಜ್ಞಾನಿಕ ಮನೋಧರ್ಮ ಹಾಗೂ ಕಲಾತ್ಮಕವಾದ ಸೌಂದರ್ಯತತ್ವಗಳನ್ನು ಪರಿಹಾರವಾಗಿ ಸೂಚಿಸುತ್ತಿದೆ. ಮಗು ರಂಗೋಲಿಯ ಚೆಲುವಿಗೆ ಮತೀಯ ಕಟ್ಟುಪಾಡಿಗೆ ಒಳಗಾಗದ ಮನಸ್ಸಿರುವ ಕಾರಣದಿಂದಲೇ ಸಹಜವಾಗಿ ಒಲಿಯುತ್ತದೆ ಅಥವಾ ರಂಗೋಲಿಯು ಕಲೆಯೂ ಆದ ಕಾರಣದಿಂದಲೇ ಜಾತ್ಯತೀತವಾದ ಆಕರ್ಷಕ ಶಕ್ತಿ ಪಡೆದಿದೆ. 'ಕವಿತೆ ಆಕಾಶದಂತೆ ಸರ್ವಧಾರೆ, ಅದಕ್ಕಿಲ್ಲ ಧರ್ಮಗಿರ್ಮಗಳ ಗಡಿಗೆರೆ,...ಜಾತಿಕುಲವರ್ಗದ ಟೇಪಿನಳತೆಯ ಮೇರೆ' ('ಆಕಾಶಕ್ಕೆ ಸರಹದ್ದುಗಳಿಲ್ಲ') ಎಂದು ಕವಿ ಒಂದೆಡೆ ಘೋಷಿಸುತ್ತಾರೆ. ಇದೊಂದು ಉತ್ಪ್ರೇಕ್ಷಿತವಾದ ಆದರ್ಶವಾದಿ ನಂಬಿಕೆ. ಆದರೆ ಇಲ್ಲಿರುವ ಕಲೆಯನ್ನು ಮತಧರ್ಮದ ಹಿಡಿತದಿಂದ ಪಾರುಮಾಡುವ ತುಡಿತ ಅಥವಾ ಕಲೆ ವಿಜ್ಞಾನ ಮಗು ಮುಗ್ಧತೆಗಳೂ ಮತೀಯ ತಡೆಗಳನ್ನು ಹಾಯಬಲ್ಲವು ಎಂಬ ಆಶಯ ಮಾತ್ರ ಮಹತ್ವದ್ದಾಗಿದೆ.

---

ನಿಸಾರರು ಧಾರ್ಮಿಕ ಅನುಭವಗಳನ್ನು ವೈಚಾರಿಕವಾಗಿ ನಿರಾಕರಿಸಿ ಬರೆಯುವಾಗ ವ್ಯಕ್ತಿನಿಷ್ಠವಾದಿ ಕವಿತೆಗಳನ್ನು ರಚಿಸುತ್ತಾರೆ; ಧಾರ್ಮಿಕ ಲೋಕದ ಜತೆ ಭಾವುಕವಾಗಿ ಒಡನಾಡುವಾಗ 'ಬೆಣ್ಣೆಗಳ್ಳ ಕೃಷ್ಣ'ದಂತಹ ಸ್ತುತಿಗೀತಗಳನ್ನು ರಚಿಸುತ್ತಾರೆ; ಸಂಸ್ಕೃತಿಗಳಲ್ಲಿರುವ ಭೇದ ಹಾಗೂ ವೈರುಧ್ಯಗಳನ್ನು ಧ್ಯಾನಿಸುವಾಗ ಜಿಜ್ಞಾಸೆಯ ಕಾವ್ಯ ಸೃಷ್ಟಿಸುತ್ತಾರೆ. ಆದರೆ ಭೇದವೂ ಸಂಘರ್ಷವೂ ಇದೆ. ಆಕರ್ಷಣೆಯೂ ವಿಕರ್ಷಣೆಯೂ ಇದೆ ಎಂಬ ದ್ವಂದ್ವಾತ್ಮಕ ಮನೋಭಾವದಲ್ಲಿ ಧಾರ್ಮಿಕ ಅನುಭವವನ್ನು ಅನುಸಂಧಾನ ಮಾಡುವಾಗ, ಪ್ರಾಮಾಣಿಕವಾದ, ಸಾಂಸ್ಕೃತಿಕವಾಗಿ ಸಂಕೀರ್ಣವಾದ, ದಾರ್ಶನಿಕವಾಗಿ ಆಳದ ಕಾವ್ಯ ಸೃಷ್ಟಿಸುತ್ತಾರೆ. ಆದ್ದರಿಂದ ನಿಸಾರ್ ಕಾವ್ಯದ ಶಕ್ತಿಯಿರುವುದು 'ಎರಡು ಸಂಸ್ಕೃತಿ'ಗಳ ಆಚೆಹೋಗಿ ಬರೆಯುವುದರಲ್ಲಿ ಅಲ್ಲ, ಅವುಗಳ ನಡುವೆ ನಿಂತು ಅದರ ಬಿಗುವನ್ನು ಮುಖಾಮುಖಿ ಮಾಡುವಲ್ಲಿ; ಆಕರ್ಷಣೆ ಹಾಗೂ ಘರ್ಷಣೆಗಳು ಒಟ್ಟಿಗೆ ಇರುವ ಸನ್ನಿವೇಶದಲ್ಲಿಯೇ ಸೃಜನಶೀಲ ಜೀವಂತಿಕೆ ಮೈದಳೆಯುತ್ತದೆ. ಭಾರತದ ಸಂಸ್ಕೃತಿಗಳಲ್ಲಿ ಬಹಳಷ್ಟು ಸೃಜನಶೀಲವಾದ ಗಳಿಗೆಗಳು ಹುಟ್ಟಿರುವುದು ಇಂತಹ ನೋ ಮ್ಯಾನ್ಸ್ ಲ್ಯಾಂಡುಗಳಲ್ಲಿ ಅಥವಾ ಎರಡು ದಡಗಳ ಪಯಣದಲ್ಲಿ; ನಿಸಾರ್ ಯಾವುದನ್ನು ''ಕಷ್ಟದ ಕೆಲಸ'' ಎನ್ನುತ್ತಾರೊ ಅದರಲ್ಲಿ, ಮತಾತೀತವಾದ ಪರ್ಯಾಯಗಳನ್ನು ಹುಡುಕುವ ಯಾರಿಗೂ ಈ ಕಷ್ಟದಿಂದ ಬಹುಶಃ ಬಿಡುಗಡೆ ಇದ್ದಂತಿಲ್ಲ.

- ೮ -

'ಧಾರ್ಮಿಕ' ಅನುಭವಗಳ ಲೋಕವನ್ನು ನೋಡುವ ಇನ್ನೊಂದು ನ್ಯಾಸ ನಿಸಾರ್ ಕಾವ್ಯದಲ್ಲಿದೆ. ಅದೆಂದರೆ, ಅನುಭವವನ್ನು ಮಾನವ ಬದುಕಿನ ನಿಗೂಢ ಅರ್ಥಗಳ ಶೋಧಕ್ಕಾಗಿ ಬಳಸುವುದು; ಇದನ್ನು ಅನುಭವದ ದಾರ್ಶನಿಕ ರೂಪಾಂತರ ಎನ್ನಬಹುದು. 'ರಂಗೋಲಿ ಮತ್ತು ಮಗ' ತರಹದ ಕವಿತೆಗಳಲ್ಲಿ, ಧರ್ಮ ಮತ್ತು ಕಲಾಸೌಂದರ್ಯಗಳ ನಡುವಿನ ಬಿಕ್ಕಟ್ಟಿನ ಪರಿಶೀಲನೆಯಿದ್ದರೆ, 'ಮೃಗಾಯಣ' ತರಹದ ಕವನಗಳಲ್ಲಿ, ಸಾಮಾಜಿಕ ಧಾರ್ಮಿಕ ಎನ್ನಬಹುದಾದ ಸ್ತರಗಳಾಚೆ ಹೋಗಿ, ಮತಾತೀತವಾದ ದಾರ್ಶನಿಕ ಭಿತ್ತಿಯಲ್ಲಿ ಜೀವನದ ಅರ್ಥ ಶೋಧಿಸುವ ಹಂಬಲವಿದೆ. ಈ ಶೋಧವು 'ರಾಮನ್ ಸತ್ತಸುದ್ದಿ' 'ಖಾಲಿ ಸೈಟುಗಳು' ಮುಂತಾದ ಕತೆಗಳಲ್ಲೂ ಇದೆ. ನಿಸಾರ್ ತಮ್ಮ ಚುರುಕಾದ ವಿಡಂಬನೆ ತಮಾಷೆಯ ಕವನಗಳಿಂದ ತಟ್ಟನೆ ಸರಿದು ದಾರ್ಶನಿಕ ಕವಿತೆಗಳ ರಚನೆಗೆ ಹೋಗಿಬಿಡುತ್ತಾರೆ. 'ಮೃಗಾಯಣ' ಕವಿತೆ ಶಿಕಾರಿಗಾರನೊಬ್ಬನ ಬದುಕಿನ ಕಥೆಯನ್ನು ಒಳಗೊಂಡಿದೆ. ಕವನದ ನಾಯಕರಾದ ಹನೀಫ್ ಸಾಹೇಬರು 'ಆರೂವರಡಿಯ ಕೊತ್ತಿಗಣ್ಣಿನ ಪಠಾಣದೈತ್ಯ' ನಂಥವರು; ತಾವು ಬೇಟೆಯಾಡಿದ ಪ್ರಾಣಿಗಳ ಚರ್ಮ ತಲೆ ಕೊಂಬುಗಳನ್ನು ಮನೆತುಂಬ ಜೋಡಿಸಿಕೊಂಡು, ತಮ್ಮ ಶೌರ್ಯ ಸಾರುವವರು. ಕವಿತೆ ಅವರ ಲೌಕಿಕ ಬದುಕಿನ ವಿಲಾಸವನ್ನು ಉದ್ದೇಶಪೂರ್ವಕವಾಗಿ ವರ್ಣರಂಜಿತವಾದ ಆಡಂಬರದ ಭಾಷೆಯಲ್ಲಿ ಬಣ್ಣಿಸುತ್ತದೆ. ಒಂದು ದಿನ ಇಂತಹ ಶೂರನಿಗೂ ಸಾವು ಬರುತ್ತದೆ. ಅದು ಬಂದದ್ದಾದರೂ ತಮಾಷೆಯಾಗಿ, ನಾಟಕೀಯವಾಗಿ.

> ಸಾವು ಸದಾ ಸಂಗಾತಿಯಾದ ಹನೀಫ್ ಸಾಹೇಬರು,
> ತಮ್ಮ ಬಲಿಗಳ ತಬ್ಬಲಿಗೊಳಿಸಿ ಮೊನ್ನೆ ಶುಕ್ರವಾರ ಸತ್ತರಂತೆ.
> ಮುದಿ ಎಮ್ಮೆ ಕಟ್ಟಲುಹೋಗಿ, ಅದು ಒದರಿ, ಏರಿನಿಂದ ಬಿದ್ದು
> ಅವರ ಭವಿಷ್ಯದ್ವಾಚನ ನಿಜವಾಯ್ತಲ್ಲ!

'ಪರಮ ದಯಾಳುವಾದ ಅಲ್ಲಾ, ಆ ಸಾಹಸಿಯ ಆತ್ಮಕ್ಕೆ ಶಾಂತಿ ನೀಡಲಿ, ಆಮೀನ್'

ಉರ್ದು ಶಬ್ದಗಳನ್ನು ಹಾಗೂ ಕುರಾನಿನ ಮಂತ್ರ ವಾಕ್ಯವನ್ನು ಬಳಸುವ ಮೂಲಕ ಕವಿತೆ ಇಡೀ ಚಿತ್ರಕ್ಕೆ ಧಾರ್ಮಿಕ ಹಿನ್ನೆಲೆ ಒದಗಿಸಿಕೊಳ್ಳುತ್ತದೆ. ನಂತರ ಮಾನವ ಮತ್ತು ಪ್ರಾಣಿಗಳ ನಡುವೆ ಇರುವ ಬೇಟೆ, ಶೌರ್ಯ ಸಾವುಗಳ ಅಂತರ್‌ಸಂಬಂಧವನ್ನು ಪರಿಶೀಲಿಸುತ್ತದೆ. 'ಹಬ್ಬಕ್ಕೆ ತಂದ ಹರಕೆಯ ಕುರಿ' ವಚನದಲ್ಲಿ ಬಸವಣ್ಣನು 'ಕೊಂದವರುಳಿದರೆ?' ಎಂಬ ಪ್ರಶ್ನೆಯ ಮೂಲಕ ಬಲಿ ಸಾವುಗಳಿಗೆ ದಾರ್ಶನಿಕ ಆಳವನ್ನು ಕೊಡುತ್ತಾನೆ. ಇಲ್ಲಿ ಅದನ್ನು 'ತಮ್ಮ ಬಲಿಗಳ ತಬ್ಬಲಿಗೊಳಿಸಿ ಮೊನ್ನೆ ಸತ್ತರಂತೆ' ಎಂಬ ಸುದ್ದಿರೂಪದ ಹೇಳಿಕೆ ಕೊಡುತ್ತದೆ. ವ್ಯಂಗ್ಯವೆಂದರೆ, ಶಿಕಾರಿಯ ಮೂಲಕ ಪ್ರಾಣಿಗಳನ್ನು ತಬ್ಬಲಿಗೊಳಿಸಿದ್ದ ಸಾಹೇಬರು, ತಾವೂ ಸಾಯುವ ಮೂಲಕ ಮತ್ತೊಮ್ಮೆ ಅವುಗಳ ಅವಶೇಷಗಳನ್ನು ತಬ್ಬಲಿಗೊಳಿಸುವುದು. ಸಾವಿನ ಮುಂದೆ ಅವರೂ ತಬ್ಬಲಿಯೆ. 'ಮೃಗಾಯಣ' ಎಂಬ ಹೆಸರು 'ರಾಮಾಯಣ' ಎಂಬ ಪದರಚನೆಗೆ ಸಮೀಪವಾಗಿದೆ. ಬೇಟೆಗಾರ ಸಮುದಾಯದಿಂದ ಬಂದ ಕವಿ ಬರೆದ ರಾಮಾಯಣದ ಪ್ರೇರಣೆ ಕೂಡ ಪಕ್ಷಿಯ ವಧೆಯ ಪ್ರಸಂಗವೆ. ಮುಂದೆ ಸಂಭವಿಸುವ ಯುದ್ಧಕ್ಕೆ ಮಾಯಾಜಿಂಕೆಯ ಪ್ರಕರಣವನ್ನು ಕಂಡರೆ, 'ರಾಮಾಯಣ'ವೂ 'ಮೃಗಾಯಣ'ವೆ. 'ಮೃಗಾಯಣ' ಶಬ್ದ ಸಂಸ್ಕೃತದ್ದು. ಇದಕ್ಕೆ ಬೆಂಬಲವಾಗಿ ಕವಿತೆಯಲ್ಲಿ ಸ್ವಯಾರ್ಜಿತ ಭವಿಷ್ಯದ್ವಾಚನ ಮುಂತಾದ ಸಂಸ್ಕೃತ ಶಬ್ದಗಳು ಬರುತ್ತವೆ; ಕುವೆಂಪು, ಪುತಿನ, ಅಡಿಗರು ಬಿಟ್ಟರೆ ಅತಿ ಹೆಚ್ಚು ಸಂಸ್ಕೃತ ಬಳಸುವ ಕವಿಗಳಲ್ಲಿ ನಿಸಾರರು ಒಬ್ಬರು. ಅವರ ಕೊನೆಯ ಘಟ್ಟದ ಕವಿತೆಗಳಲ್ಲಿ ಸಂಸ್ಕೃತವು ಕಾಡುಜಿಗ್ಗಿನಂತೆ ಆವರಿಸಿಕೊಳ್ಳುತ್ತದೆ. ನಿಸಾರ್ ಯಾಕಿಷ್ಟು ಸಂಸ್ಕೃತ ಬಳಸುತ್ತಾರೆ ? ತಮ್ಮ ಕಾವ್ಯವನ್ನು ಮತಾತೀತಗೊಳಿಸುವ ಒತ್ತಾಸೆಯಿಂದಲೇ ? ನಿರ್ದಿಷ್ಟ ಸಾಮಾಜಿಕ ಪರಿಸರದಲ್ಲಿ ತಮ್ಮನ್ನು ಸಲ್ಲಿಸಿಕೊಳ್ಳುವ ಒತ್ತಡದಲ್ಲಿಯೆ ? ಆದರೆ ಕಠಿಣ ಸಂಸ್ಕೃತದ ಜತೆಯಲ್ಲೆ ನಿಸಾರ್ ಕಾವ್ಯ ಬೇರೆಬೇರೆ ಭಾಷೆಯ ಆಡುಮಾತಿನ ಶಬ್ದಗಳನ್ನು ಮಿಲಾಯಿಸಿ ಅದ್ಭುತ ಸಮಾಸಗಳನ್ನು ಮಾಡುತ್ತದೆ. 'ಮೃಗಾಯಣ' ಕವಿತೆಯಲ್ಲೇ ಬರುವ 'ಕೊತ್ತಿಗಣ್ಣಿನ ಪಠಾಣದೈತ್ಯ' ಎಂಬ ವರ್ಣನೆ ಗಮನಿಸಿ. ಕೊತ್ತಿ, ಕಣ್ಣು ಕನ್ನಡದವು; ಪಠಾಣ ಪಾರಸಿಯದು. ದೈತ್ಯ ಸಂಸ್ಕೃತದ್ದು. ಈ ಬೆರಕೆಯು ಬಹುಭಾಷಿಕ ಸಂಸ್ಕೃತಿಗಳ ಒಳಗಿಂದ ಬರೆಯುವಲ್ಲಿ ಒದಗುವ ಸಹಜ ಸೌಲಭ್ಯ ಇರಬಹುದು. ಆದರೆ, ಸಂಸ್ಕೃತ ಶೀರ್ಷಿಕೆಯುಳ್ಳ 'ಮೃಗಾಯಣ' ಕವಿತೆಯಲ್ಲಿ– ಮೊಖಾಬಿಲೆ, ಮೊಕಾಂ, ಫಲಾನೆ, ಹುಶಾರಿ, ಬಯಾನು ಮುಂತಾದ ಇಂಡೋ-ಪರ್ಶಿಯನ್ ಶಬ್ದಗಳು ತುಂಬಿಹೋಗಿವೆ. ಕವಿತೆಯ ಕೊನೆಯ ವಾಕ್ಯವು ಕುರಾನಿನ ಮಂತ್ರ ಪಠಣದ ನ್ಯಾಸವನ್ನು ಒಳಗೊಂಡಿದೆ. ಇದು ಇಸ್ಲಾಂ ಧರ್ಮದ ಅಥವಾ ಮುಸ್ಲಿಂ ಸಂಸ್ಕೃತಿಯ ಸೊಗಡನ್ನು ಕವಿತೆಗೆ ಹಾಯಿಸುವ ಯತ್ನದಂತೆ, ಅಥವಾ 'ಎರಡು' ಸಂಸ್ಕೃತಿಗಳ ನಡುವೆ ನಿಂತು ಅನುಭವ ಸಂವೇದನೆಗಳನ್ನು ಅನುಸಂಧಾನ ಮಾಡುತ್ತಿರುವ ಉಪಾಯದಂತೆ ತೋರುತ್ತದೆ. ನಿಸಾರ್ ಕಾವ್ಯದಲ್ಲಿ ಉರ್ದು ಶಬ್ದಗಳು, ಮುಸ್ಲಿಂ ಸಾಮಾಜಿಕ ಅನುಭವಗಳು ಹಾಗೂ ಇಸ್ಲಾಂ ಧರ್ಮದ ಸಂವೇದನೆಗಳು ನಿರ್ದಿಷ್ಟ ಘಟ್ಟದಿಂದ ಆರಂಭವಾಗುತ್ತವೆ. ಉರ್ದು ಶಬ್ದಗಳ ಬೆರಕೆಯು 'ಕುರಿಗಳು ಸಾರ್ ಕುರಿಗಳು' ಕವಿತೆಯಿಂದ (೧೯೬೪) ಶುರುವಾಗುತ್ತದೆ. ಇಲ್ಲಿ ಬರುವ 'ಮಾತಿನ ಗೈರತ್ತಿನಲ್ಲೆ ಕರಾಮತ್ತು ನಡೆಸುವವರು' ಎಂಬಲ್ಲಿ ಧಾರ್ಮಿಕ ನೆಲೆಯೇನಿಲ್ಲವಾದರೂ, ಮುಂದೆ ಉರ್ದು ಶಬ್ದಗಳು, ಮುಸ್ಲಿಂ ಧಾರ್ಮಿಕ ಸಂಸ್ಕೃತಿಯನ್ನು ಕಾವ್ಯದಲ್ಲಿ ಪ್ರವೇಶಕ್ಕೆ ಒಂದು ನೆಲೆಯನ್ನು ಒದಗಿಸುವ ಕೆಲಸ ಮಾಡುತ್ತವೆ.

ಗುಡಿಮಸೀದುಗಳ ಜತೆ ಗುರುತಿಸಿಕೊಳ್ಳಲಾರೆ ಎಂಬ ಆದರ್ಶವಾದಿ ನಿಲುವಿದ್ದ ಕವಿಗೆ, ತನ್ನ ಮನೆಮಾತನ್ನು ಹಾಗೂ ಧಾರ್ಮಿಕ ಸಮುದಾಯದ ಅನುಭವವನ್ನು ಕಾವ್ಯದೊಳಕ್ಕೆ ತರಬೇಕು ಎಂದು ಯಾಕನಿಸಿತು? ತನ್ನನ್ನು ಅನುಮಾನಿಸುವವರು ಒಪ್ಪುವಂತಹ 'ಸ್ವಧರ್ಮ' ವಿಮುಖಿಯ ಮಾರ್ಗ ಹಿಡಿದು, ತನ್ನ ಬೇರುಗಳಿರುವ ಸಂಸ್ಕೃತಿ ಮತ್ತು ಸಮುದಾಯಗಳಿಂದ ಬೇರ್ಪಡುತ್ತಿರುವ ಆತಂಕವೇ ? ಧಾರ್ಮಿಕ ಸಮುದಾಯದ ಅನುಭವವನ್ನು ಮತಾತೀತವಾಗಿ ಅನುಸಂಧಾನ ಮಾಡಬಹುದು ಎಂಬ ಆತ್ಮವಿಶ್ವಾಸವೇ ? ಕಾವ್ಯದೊಳಗೆ ಧಾರ್ಮಿಕ ಹಾಗೂ ಸಾರ್ವಜನಿಕ ಪರಿಸರದ ಅನುಭವ ಲೋಕಗಳ ಬೆರೆಸುವಿಕೆಯು ಕಾವ್ಯವನ್ನು ಸಮೃದ್ಧಗೊಳಿಸಬಹುದು ಅನಿಸಿತೆ ? ಮತೀಯ ಸಂಘರ್ಷಕ್ಕೆ ಈಡಾಗುವ ಧಾರ್ಮಿಕ ಸಮುದಾಯಗಳ ನಡುವೆ ಸಾಮರಸ್ಯ ಮೂಡಿಸಬಹುದು ಎಂಬ ದೂರದಾಶೆಯೆ ? ತಿಳಿಯದು. ಆದರೆ ಉರ್ದು ಶಬ್ದಗಳನ್ನು ಕಾವ್ಯದೊಳಗೆ ಬಳಸುವ ಪ್ರಕ್ರಿಯೆಗೆ ಅಸ್ಮಿತೆಯನ್ನು ಕಂಡುಕೊಳ್ಳುವ ಆಶಯವಿದೆ.

- ೯ -

ಹೀಗೆ ನಿಸಾರ್ ಕಾವ್ಯವು ಗುಡಿಮಸೀದಿಗಳಲ್ಲಿ ಬದುಕನ್ನು ಬೆತ್ತಲಾಗಿಸುವ ಭಯದಿಂದ ಶುರುವಾಗಿ, ಕವಿತೆಗೆ 'ಧರ್ಮಗಿರ್ಮಗಳ ಗಡಿಗೆರೆ'ಯಿಲ್ಲ ಎನ್ನುವವರೆಗೆ, ಅನೇಕ ಹೊರಳಿಕೆ ತೊಳಲಾಟಗಳಲ್ಲಿ ಹಾದುಬಂದಿದೆ. ಇದು ನಿಸಾರ್ ಕಾವ್ಯದ ಕಥನ ಮಾತ್ರವಲ್ಲ, ಅವರ ಮನೋಭೂಮಿಕೆಯನ್ನು ರೂಪಿಸಿದ ಅರ್ಧಶತಮಾನದ ನಮ್ಮ ಸಮಾಜದ ಕಥನ ಕೂಡ. ಯಾಕೆಂದರೆ ಸಾಂಸ್ಕೃತಿಕ ಬಿಕ್ಕಟ್ಟುಗಳ ಮುಖಾಮುಖಿಯು ಒಬ್ಬ ಕವಿಯ ವೈಯಕ್ತಿಕ ಸೃಜನಶೀಲ ಕಷ್ಟಸುಖಗಳ ಮಾತಲ್ಲ; ಬಹು ಸಾಂಸ್ಕೃತಿಕ ಸಮಾಜದಲ್ಲಿ ಸಮುದಾಯಗಳು ಎದುರಿಸು ತ್ತಿರುವ ಸವಾಲು ಹಾಗೂ ಅರಸುತ್ತಿರುವ ಪರ್ಯಾಯಗಳ ವಿಧಾನವೂ ಹೌದು. ನಿಸಾರ್ ಒಂದು ಸಂದರ್ಶನದಲ್ಲಿ ''ಎರಡು ಸಂಸ್ಕೃತಿಗಳ ನಡುವೆ ನಿಂತು ಕಾವ್ಯ ಕಟ್ಟುವ ಕೆಲಸ ಕಷ್ಟದ್ದು'' ಎಂದು ಹೇಳುವುದುಂಟು; ಹಾಗೆ ಎರಡು ಸಂಸ್ಕೃತಿಗಳು ಹಾಗೆ ಇವೆಯೇ ? ಈ ಭೇದ ಇದೆಯೋ ಅಥವಾ ಅದನ್ನು ಹುಟ್ಟಿಸಿಕೊಳ್ಳಲಾಗಿದೆಯೋ ? ಎಂಬ ಪ್ರಶ್ನೆಯು ಬಹಳ ಗಹನವಾದ ಚರ್ಚೆಯನ್ನು ಬೇಡುವಂತಹದು. ಆದರೆ ಮತೀಯ ಸಂಘರ್ಷ ಮತ್ತು ಸಾಮರಸ್ಯ ದೃಷ್ಟಿಕೋನದ ಮೂಲ ಮಾತ್ರ ಕವಿ ಬದುಕಿ ಬರೆದ ನಗರಗಳಲ್ಲಿದೆ ಅನಿಸುತ್ತದೆ.

ನಿಸಾರರು ಧಾರ್ಮಿಕ ಅನುಭವಗಳನ್ನು ವೈಚಾರಿಕವಾಗಿ ನಿರಾಕರಿಸಿ ಬರೆಯುವಾಗ ವ್ಯಕ್ತಿನಿಷ್ಠವಾದಿ ಕವಿತೆಗಳನ್ನು ರಚಿಸುತ್ತಾರೆ; ಧಾರ್ಮಿಕ ಲೋಕದ ಜತೆ ಭಾವುಕವಾಗಿ ಒಡನಾಡುವಾಗ 'ಬೆಣ್ಣೆಗಳ್ಳ ಕೃಷ್ಣ'ದಂತಹ ಸ್ತುತಿಗೀತಗಳನ್ನು ರಚಿಸುತ್ತಾರೆ; ಸಂಸ್ಕೃತಿಗಳಲ್ಲಿರುವ ಭೇದ ಹಾಗೂ ವೈರುಧ್ಯಗಳನ್ನು ಧ್ಯಾನಿಸುವಾಗ ಜಿಜ್ಞಾಸೆಯ ಕಾವ್ಯ ಸೃಷ್ಟಿಸುತ್ತಾರೆ. ಆದರೆ ಭೇದವೂ ಸಂಘರ್ಷವೂ ಇದೆ. ಆಕರ್ಷಣೆಯೂ ವಿಕರ್ಷಣೆಯೂ ಇದೆ ಎಂಬ ದ್ವಂದ್ವಾತ್ಮಕ ಮನೋಭಾವದಲ್ಲಿ ಧಾರ್ಮಿಕ ಅನುಭವವನ್ನು ಅನುಸಂಧಾನ ಮಾಡುವಾಗ, ಪ್ರಾಮಾಣಿಕವಾದ, ಸಾಂಸ್ಕೃತಿಕವಾಗಿ ಸಂಕೀರ್ಣವಾದ, ದಾರ್ಶನಿಕವಾಗಿ ಆಳದ ಕಾವ್ಯ ಸೃಷ್ಟಿಸುತ್ತಾರೆ. ಆದ್ದರಿಂದ ನಿಸಾರ್ ಕಾವ್ಯದ ಶಕ್ತಿಯಿರುವುದು 'ಎರಡು ಸಂಸ್ಕೃತಿ'ಗಳ ಆಚೆಹೋಗಿ ಬರೆಯುವುದರಲ್ಲಿ ಅಲ್ಲ, ಅವುಗಳ ನಡುವೆ ನಿಂತು ಅದರ ಬಿಗುವನ್ನು ಮುಖಾಮುಖಿ ಮಾಡುವಲ್ಲಿ; ಆಕರ್ಷಣೆ ಹಾಗೂ ಘರ್ಷಣೆಗಳು ಒಟ್ಟಿಗೆ ಇರುವ ಸನ್ನಿವೇಶದಲ್ಲಿಯೇ ಸೃಜನಶೀಲ ಜೀವಂತಿಕೆ ಮೈದಳೆಯುತ್ತದೆ. ಭಾರತದ ಸಂಸ್ಕೃತಿಗಳಲ್ಲಿ ಬಹಳಷ್ಟು ಸೃಜನಶೀಲವಾದ ಗಳಿಗೆಗಳು ಹುಟ್ಟಿರುವುದು ಇಂತಹ ನೋ ಮ್ಯಾನ್ಸ್ ಲ್ಯಾಂಡುಗಳಲ್ಲಿ ಅಥವಾ ಎರಡು ದಡಗಳ ಪಯಣದಲ್ಲಿ; ನಿಸಾರ್ ಯಾವುದನ್ನು ''ಕಷ್ಟದ ಕೆಲಸ'' ಎನ್ನುತ್ತಾರೋ ಅದರಲ್ಲಿ, ಮತಾತೀತವಾದ ಪರ್ಯಾಯಗಳನ್ನು ಹುಡುಕುವ ಯಾರಿಗೂ ಈ ಕಷ್ಟದಿಂದ ಬಹುಶಃ ಬಿಡುಗಡೆ ಇದ್ದಂತಿಲ್ಲ.

ಡಾ|| ರಹಮತ್ ತರೀಕೆರೆ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬

# ಪರದೇಶಿ ವಸ್ತುಗಳ ಬಹಿಷ್ಕಾರ — ಒಂದು ನೆನಪು

**ಎಚ್. ಎಸ್. ದೊರೆಸ್ವಾಮಿ**

೧೯೩೦ರಲ್ಲಿ ಗಾಂಧೀಜಿ ಸ್ವದೇಶೀ ಚಳುವಳಿಯನ್ನು ಆರಂಭಿಸಿದರು. ದೇಶದಾದ್ಯಂತ ಜನತೆ ಈ ಚಳುವಳಿಯಲ್ಲಿ ಪಾಲುಗೊಂಡರು. ಆಗಿನ ದಿನಗಳಲ್ಲಿ ಉತ್ತರಕನ್ನಡ ಜಿಲ್ಲೆಯ ಶಿರಸಿಯಿಂದ ಅಚ್ಚೊತ್ತಿನ ಯಂತ್ರದ ಸಹಾಯದಿಂದ ಪ್ರತಿವಾರವೂ ಹೊರ ತರಲಾಗುತ್ತಿದ್ದ 'ಸತ್ಯಾಗ್ರಹ ಕರಪತ್ರ'ಗಳಿಂದ ಆಯ್ದುಕೊಂಡ ಮಾಹಿತಿ ಇದು. ಈ ಕರಪತ್ರವನ್ನು ಹೊರ ತರುವ ಉದ್ದೇಶ ಜನಜಾಗೃತಿ ಉಂಟುಮಾಡುವುದು. ಚಳುವಳಿಯ ತೀವ್ರತೆ ಕಡಿಮೆಯಾಗದಂತೆ ಕಾಯ್ದುಕೊಳ್ಳುವುದು. ಅಪಪ್ರಚಾರಗಳಿಗೆ ತಡೆ ಹಾಕುವುದು. ಪ್ರಾಮಾಣಿಕವಾದ ವರದಿಯನ್ನು ಚಳುವಳಿಕಾರರಿಗೆ, ಚಳುವಳಿಯ ಮುಂದಾಳುಗಳಿಗೆ ಮುಟ್ಟಿಸುವುದು, ಜನರನ್ನು ಚಳುವಳಿಯಲ್ಲಿ ಕೂಡಿಕೊಳ್ಳುವಂತೆ ಪ್ರೇರೇಪಿಸುವುದು ಇವೇ ಆಗಿತ್ತು. ಈ ಕರಪತ್ರಗಳನ್ನು ಗುಟ್ಟಾಗಿ ಪ್ರಕಟಿಸಲಾಗುತ್ತಿತ್ತು.

ಆ ಕಾಲದಲ್ಲಿ ಬೆರಳೆಣಿಕೆಯಷ್ಟು ಪತ್ರಿಕೆಗಳು ಪ್ರಸಾರದಲ್ಲಿ ಇದ್ದದ್ದರಿಂದ ಸತ್ಯಾಗ್ರಹದ ಸುದ್ದಿ ಸಂಗ್ರಹಿಸುವುದೂ ಕಷ್ಟಸಾಧ್ಯವಾಗಿತ್ತು. ಅಂತಹ



ಸನ್ನಿವೇಶದಲ್ಲೂ ದೇಶಾದ್ಯಂತ ನಡೆದ ಸ್ವದೇಶಿ ಚಳುವಳಿ, ಕರ ನಿರಾಕರಣ ಚಳುವಳಿ, ಉಪ್ಪಿನ ಚಳುವಳಿ ಮುಂತಾದ ಸುದ್ದಿಯನ್ನು ಸಂಗ್ರಹಿಸಿ, ಪ್ರಕಟಿಸಿ, ಅದನ್ನು ಜನತೆಗೆ ಮುಟ್ಟಿಸಲು ಪ್ರತಿಪ್ರಾಂತದಲ್ಲೂ ಒಂದು ಸತ್ಯಾಗ್ರಹ ಸಮಿತಿ ಅಸ್ತಿತ್ವದಲ್ಲಿತ್ತು. ಅವು ಸ್ವಯಂ ಸೇವಕರ ಒಂದೊಂದು ಜಾಲವನ್ನು ನಿರ್ಮಿಸಿಕೊಂಡು ಅವರ ಮುಖಾಂತರ ಹಳ್ಳಿಹಳ್ಳಿಗೂ, ಪಟ್ಟಣಗಳಿಗೂ ಸತ್ಯಾಗ್ರಹದ ತಾಜಾಸುದ್ದಿಯನ್ನು ತಲುಪಿಸಿದ್ದು ಒಂದು ಪವಾಡವೇ ಸರಿ. ಇಲ್ಲಿ ಬರೆಯಲಾದ ವಿಷಯಗಳು ಸತ್ಯಾಗ್ರಹದ ಸಮಗ್ರ ಚಿತ್ರವನ್ನು ನೀಡುವುದಿಲ್ಲ ನಿಜ. ಆದರೆ ಇಲ್ಲಿ ಸಂಗ್ರಹಿಸಲಾದ ಸುದ್ದಿಯೇ ನಮ್ಮ ಜನರ ನಿಷ್ಠೆ, ಸ್ವಾರ್ಥತ್ಯಾಗ, ಕಷ್ಟಸಹಿಷ್ಣುತೆ, ಇವುಗಳಿಗೆ ಕನ್ನಡಿ ಹಿಡಿದಂತಿವೆ. ಇಲ್ಲಿ ನೀಡಲಾದ ವಿವರಗಳೇ ನಮ್ಮನ್ನು ದಿಗ್ಭ್ರಮೆಗೊಳಿಸುವಾಗ, ಅದರ ಪೂರ್ಣ ಚಿತ್ರ ನಮಗೆ ದೊರಕಿದರೆ ಅದೆಂತಹ ಪವಾಡವನ್ನು ಗಾಂಧಿಭಕ್ತರು ಆ ಕಾಲದಲ್ಲಿ ಸಾಧಿಸಿದರು ಎಂಬುದು ಮನವರಿಕೆಯಾಗುವುದು.

ಶಿರಸಿಯಿಂದ ಹೊರಬಿದ್ದ ಕರಪತ್ರಗಳಿಂದ ಈ ಅಂಶಗಳನ್ನು ಸಂಗ್ರಹಿಸಲಾಗಿದೆ :

ಪರದೇಶಿ ಸಕ್ಕರೆಯನ್ನು ಕೊಂಡು ನಾವು ಪ್ರತಿವರ್ಷ ೧೯ ಕೋಟಿ ರೂಪಾಯಿಗಳನ್ನು ಪರದೇಶಕ್ಕೆ ಕಳುಹಿಸುತ್ತಿದ್ದೇವೆ.

ಸ್ವದೇಶಿ ಸಾಬೂನನ್ನು ಉಪಯೋಗಿಸುವುದರಿಂದ, ನಾವು ಪರದೇಶಿ ಸಾಬೂನು ಕೊಳ್ಳಲು ಬಳಸುವ ೨ ಕೋಟಿ ರೂಪಾಯಿಗಳನ್ನು ನಮ್ಮ ದೇಶಬಾಂಧವರಲ್ಲಿಯೇ ಹಂಚಿಹೋಗುವಂತೆ ಮಾಡಬಹುದು.

ಪರದೇಶಿ ಬಿಸ್ಕತ್ತು, ಪೆಪ್ಪರ್‌ಮಿಂಟು, ಚಾಕೊಲೇಟ್ ಮುಂತಾದ ಖಾದ್ಯ ಪದಾರ್ಥಗಳನ್ನು ಕೊಳ್ಳುವ ಮೂಲಕ ನಾವು ೨ ಕೋಟಿ ರೂಪಾಯಿಗಳನ್ನು ಕೊಳ್ಳೆಹೊಡೆಯಲು ಅವಕಾಶ ಕಲ್ಪಿಸಿದ್ದೇವೆ.

ಸುಟ್ಟು ಬೂದಿಮಾಡುವ ಸಿಗರೇಟನ್ನು ಕೊಂಡು ಪ್ರತಿವರ್ಷ ೨ ಕೋಟಿ ರೂಪಾಯಿ ವ್ಯರ್ಥ ಮಾಡುತ್ತಿದ್ದೇವೆ.

ಇದನ್ನು ತಡೆಗಟ್ಟುವುದಕ್ಕಾಗಿ ಈ ಬಹಿಷ್ಕಾರ ಚಳುವಳಿ. ಈ ಬಹಿಷ್ಕಾರ ಚಳುವಳಿಯ ಪರಿಣಾಮವೇನು ?

ಗಾಂಧಿಯವರು ಕೈಗೊಂಡ ಪರದೇಶಿ ವಸ್ತುಗಳ ಬಹಿಷ್ಕಾರದ ಮೂಲಕ ಲ್ಯಾಂಕಾಷೈರಿನಲ್ಲಿ ೨೩,೬೦೦ ಮಗ್ಗಗಳು ಕೆಲಸ ನಿಲ್ಲಿಸಿವೆ. ೧,೫೦,೦೦೦ ಕಾರ್ಮಿಕರು ಕೆಲಸ ಕಳೆದುಕೊಂಡಿದ್ದಾರೆ. ಅದರಂತೆಯೇ ಬ್ರಿಟನ್ನಿನ ಇತರ ನೂಲು ಮತ್ತು ನೇಯ್ಗೆ ಮಿಲ್ಲುಗಳೂ, ತಾವು ತಯಾರಿಸಿದ ಮಾಲಿಗೆ ಗಿರಾಕಿ ಇಲ್ಲವಾದ್ದರಿಂದ, ತಮ್ಮ ಉತ್ಪನ್ನಗಳನ್ನು ಕಡಿಮೆ ಮಾಡಿವೆ.

೨೩-೧೦-೩೦ರಂದು ಮುಂಬಯಿನ ಜವಳಿ ವ್ಯಾಪಾರಿಗಳು ಸಭೆಸೇರಿ, ಜನತೆಯ ಹಿತದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ವ್ಯಾಪಾರ ಮಾಡುವುದು ವ್ಯಾಪಾರ ಧರ್ಮ. ವ್ಯಾಪಾರಿಗಳ ಹಿತವೂ ಸ್ವರಾಜ್ಯದಲ್ಲಿ ಅಡಕವಾಗಿದೆ. ಪಾರತಂತ್ರ್ಯದಲ್ಲಿರುವವರೆಗೆ ದೇಶದ ಅಭಿವೃದ್ಧಿ ಸಾಧ್ಯವಿಲ್ಲ! ಎಂದು ತೀರ್ಮಾನ ಕೈಗೊಂಡರು.

೨೪ರಂದು ಮುಂಬಯಿನ ವ್ಯಾಪಾರಿಗಳೆಲ್ಲರೂ ಕೂಡಿಕೊಂಡು ಇಂಗ್ಲೆಂಡಿನಿಂದ ಯಾವ ಸರಕನ್ನೂ ತರಿಸಕೂಡದೆಂದೂ, ಹಿಂದೆ ಕೊಡಲಾಗಿರುವ ಆರ್ಡರ್‌ಗಳನ್ನೂ ಕ್ಯಾನ್ಸಲ್ ಮಾಡಬೇಕೆಂದೂ ತೀರ್ಮಾನಿಸಿದರು.

ಪೂನಾ ಕಂಟೋನ್ಮೆಂಟಿನಲ್ಲಿ ಜವಳಿ ದುಕಾನುದಾರರು ಹರತಾಳ ಆಚರಿಸಿದ್ದಕ್ಕಾಗಿ, ಲಷ್ಕರೀ ಅಧಿಕಾರಿಗಳು ಅವರಿಗೆ ೩೬ ಗಂಟೆಗಳಲ್ಲಿ ಲಷ್ಕರ್ ಪ್ರದೇಶ ಬಿಟ್ಟು ಹೋಗಬೇಕೆಂದು ಆಜ್ಞೆಮಾಡಿದರು.

ಮುಂಬಯಿಯಲ್ಲಿ ಸ್ಪಿನ್ನರ್ ಕಂಪನಿಯ ಮುಂದೆ ಮಾಲನ್ನು ಗಾಡಿಯ ಮೇಲೆ ಹೇರಲಾದಾಗ ೫ ಮಹಿಳೆಯರು ಅಡ್ಡಗಟ್ಟಿದರು. ಪೊಲೀಸರು ಸ್ತ್ರೀ ಸತ್ಯಾಗ್ರಹಿಗಳ ಮೇಲೆ ಗಾಡಿಯನ್ನು ಬಿಡುವಂತೆ ಆಜ್ಞಾಪಿಸಿದರು. ಗಾಡಿಯವನು ಅದಕ್ಕೆ ಒಪ್ಪದೆ ಓಡಿಹೋದಾಗ ಅವನನ್ನು ಹಿಡಿದು ತಂದು ಗಾಡಿಯನ್ನು ಸತ್ಯಾಗ್ರಹಿಗಳ ಮೇಲೆ ಬಿಡಲು ಒತ್ತಾಯ ಮಾಡಲಾಯಿತು. ಎತ್ತುಗಳು ಮುನ್ನುಗ್ಗಿದ್ದರಿಂದ ಆ ಹೆಣ್ಣುಮಕ್ಕಳು ನೆಲಕ್ಕೆ ಬಿದ್ದರು. ಅವರಿಗೆಲ್ಲ ಗಾಯಗಳಾದವು.

ಅಹಮದಾಬಾದಿನ ಪ್ರಮುಖ ಗಿರಣಿಗಳ ಏಜೆಂಟರಿಂದ ಕೂಡಿದ ಅಹಮದಾಬಾದ್ ಸ್ವದೇಶಿ ಸಭೆಯ ಸದಸ್ಯರು, ಪಿಕೆಟಿಂಗ್ ಕಾಲದಲ್ಲಿ, ಪರದೇಶಿ ಬಟ್ಟೆಯನ್ನು ಗಡಿಪಾರು ಮಾಡಲು ನಿರ್ಧರಿಸಿ ಪರದೇಶೀ ವಸ್ತ್ರದ ಮೂಟೆಗಳನ್ನು ರೈಲಲ್ಲಿ ಮುಂಬಯಿಗೆ ಕಳಿಸಿ ಅಲ್ಲಿಂದ ಇಂಗ್ಲೆಂಡಿಗೆ ಕಳಿಸುವ ವ್ಯವಸ್ಥೆ ಮಾಡಿದರು.

೧೯೩೦ರ ಸೆಪ್ಟೆಂಬರ್ ತಿಂಗಳಲ್ಲಿ ಕಲ್ಕತ್ತ ಬಂದರಿಗೆ ಬಂದ ಪರದೇಶೀ ಬಟ್ಟೆ ಹಿಂದಿನ ವರ್ಷಕ್ಕಿಂತ ೧.೩೫ ಕೋಟಿ ರೂಪಾಯಿನಷ್ಟು ಕಡಿಮೆ ಇತ್ತು. ೧೯೨೯ರಲ್ಲಿ ಈ ತಿಂಗಳಲ್ಲಿ ಭಾರತಕ್ಕೆ ೭ ಕೋಟಿ ಗಜ ಬಟ್ಟೆ ಬಂದಿದ್ದರೆ ಈ ವರ್ಷ ೨.೧೦ ಕೋಟಿ ಗಜಗಳಿಗೆ ಅದು ಇಳಿದುಹೋಯಿತು.

ಮುಂಬಯಿಯಲ್ಲಿ ಪರದೇಶೀ ಬಟ್ಟೆ ತರಿಸುತ್ತಿದ್ದವರು ಭಾರತೀಯ ವರ್ತಕರಾದರೆ ಬಂಗಾಳದಲ್ಲಿ ಬಟ್ಟೆ ತರಿಸುತ್ತಿದ್ದವರೆಲ್ಲ ಇಂಗ್ಲಿಷ್ ಕಂಪನಿಯವರು. ಮುಂಬಯಿಯಂತೆಯೇ ಬಂಗಾಳದಲ್ಲಿಯೂ ಬಹಿಷ್ಕಾರ ಚಳವಳಿ ಯಶಸ್ವಿಯಾಗಿ ನಡೆಯಿತು ಎಂಬುದು ಒಂದು ವಿಶೇಷ.

ನಾಗಪುರದ ದೊಡ್ಡ ಜವಳಿ ವ್ಯಾಪಾರಿಗಳು ಪರದೇಶಿ ಬಟ್ಟೆಗಳನ್ನು ತರಿಸಿ ಮಾರುತ್ತಿದ್ದರು. ಸತ್ಯಾಗ್ರಹಿಗಳು ಇವರ ಮಳಿಗೆಗಳ ಮುಂದೆ ಸತ್ಯಾಗ್ರಹ ಹೂಡಿ ವ್ಯಾಪಾರ ಸ್ಥಗಿತಗೊಳಿಸಿದರು.

ಸತ್ಯಾಗ್ರಹಿಗಳನ್ನು ದಸ್ತಗಿರಿ ಮಾಡಿದಾಗ, ಈ ಶ್ರೀಮಂತ ಅಂಗಡಿಯವರೂ ಹರತಾಳದಲ್ಲಿ ಭಾಗವಹಿಸಿದರು.

ಕರಾಚಿ ವ್ಯಾಪಾರಿ ಸಂಘದವರೂ ಕಾಂಗ್ರೆಸ್ ಬಹಿಷ್ಕರಿಸಿರುವ ಗಿರಣಿಗಳಿಂದ ಯಾವ ಬಟ್ಟೆಯನ್ನೂ ತರಿಸಕೂಡದೆಂದು ನಿಶ್ಚಯಿಸಿದರು.

ಸೂರತ್ ಜಿಲ್ಲೆಯ ಕಿರಾಣಿ ಸ್ಟೇಷನರಿ ವ್ಯಾಪಾರಿ ಸಂಘ ಈ ಕೆಳಕಂಡ ವಸ್ತುಗಳನ್ನು ಇನ್ನು ಮುಂದೆ ಪರದೇಶಗಳಿಂದ ತರಿಸಬಾರದೆಂದು ಠರಾವು ಮಾಡಿತು. ಎಲ್ಲ ತರಹದ ಚಹಾಪುಡಿ, ಜಾನ್ಸನ್, ಮಾರಿಷಸ್

ಮುಂದಿನ ಪುಟಕ್ಕೆ

*೯ನೇ ಪುಟದಿಂದ.. (ಈ ತಿಂಗಳು)*

ಆಪಾದಿಸಿ ಅವಿಶ್ವಾಸ ನಿರ್ಣಯ ಸಹ ಮಂಡಿಸಲಾಗಿತ್ತು. ಹವಾನಾ ಅಲಿಪ್ತ ಸಭೆಯ ಸಂದರ್ಭದಲ್ಲಿ ಪಾಕಿಸ್ತಾನದ ಅಧ್ಯಕ್ಷರನ್ನು ಸಂಧಿಸಿ ಭಾರತದ ಪ್ರಧಾನಿ ಕೆಲವು ಷರತ್ತುಗಳ ಆಧಾರದ ಮೇಲೆ ಒಂದು ಒಡಂಬಡಿಕೆಗೆ ಬರುವ ಶ್ಲಾಘನೀಯ ಯತ್ನ ನಡೆಸಿದ್ದಾರೆ. ಪರಸ್ಪರ ದೂಷಣೆಯಲ್ಲಿ ಮೈತ್ರಿ ಅಂಕುರಿಸುವುದಿಲ್ಲವೆಂದು ಮನಗಂಡ ಇಬ್ಬರೂ ನಾಯಕರು ಎರಡೂ ದೇಶಗಳಿಗೆ ಒಪ್ಪಿಗೆಯಾಗುವಂತಹ ಮಾರ್ಗದಲ್ಲಿ ನಡೆದು ಶಾಂತಿಯ ಹರಿಕಾರರಾಗಬೇಕೆಂಬ ಅಪೇಕ್ಷೆ ನಮ್ಮ ದೇಶದಲ್ಲಿದೆ. ಆದರೆ ಅಷ್ಟೇ ಆಳವಾದ ಅನುಮಾನಗಳೂ ಇವೆ. ಹವಾನಾ ಹೆಜ್ಜೆ ಹಿತಕರವಾಗಲೆಂದಷ್ಟೇ ಈಗ ಆಶಿಸಬಹುದಾದ್ದು.

* * *

ಜಾಗತೀಕರಣದ ಜಾಗಟೆ ಬಾರಿಸುವ ಚಿದಂಬರಂ-ಮನಮೋಹನ ಸಿಂಗ್-ಅಹ್ಲುವಾಲಿಯ ಒಂದು ಮುಖ್ಯವಾದ ಅಂತರರಾಷ್ಟ್ರೀಯ ವರದಿಯ ಬಗ್ಗೆ ಬಾಯಿಬಿಟ್ಟಿಲ್ಲದಿರುವುದು ಗಮನಾರ್ಹ. ವಿಶ್ವಸಂಸ್ಥೆಯು ತನ್ನ ಈ ವರ್ಷದ 'ವ್ಯಾಪಾರ ಮತ್ತು ಅಭಿವೃದ್ಧಿ' ವರದಿಯನ್ನು ಇತ್ತೀಚೆಗಷ್ಟೇ ಪ್ರಕಟಿಸಿದೆ. ಅದನ್ನು ಅಂಕ್ಟಾಡ್ ವರದಿ ಎನ್ನುತ್ತಾರೆ. ಅಭಿವೃದ್ಧಿಯತ್ತ ಹೆಜ್ಜೆಹಾಕುತ್ತಿರುವ ರಾಷ್ಟ್ರಗಳು ಅಂತರರಾಷ್ಟ್ರೀಯ ವ್ಯಾಪಾರದ ವ್ಯಾಮೋಹದಿಂದ ಹೊರಬಂದು ಆಂತರಿಕ ವ್ಯಾಪಾರಕ್ಕೆ ಒತ್ತು ಕೊಡಬೇಕು ಮತ್ತು ಅಂತರರಾಷ್ಟ್ರೀಯ ಬಂಡವಾಳಗಾರರ ಸಲಹೆಗಳಿಗೆ ಮಾರುಹೋಗಬಾರದು ಎಂದು ವರದಿಯಲ್ಲಿ ತಿಳಿಸಲಾಗಿದೆ. ಜಾಗತೀಕರಣದ ಸೂತ್ರಗಳು ಈ ದೇಶಗಳಿಗೆ ಒಳಿತನ್ನು ತರುವ ಬದಲು ಬಡತನವನ್ನು ಹೆಚ್ಚಿಸಿವೆಯೆಂದೂ ಅಲ್ಲಿ ಹೇಳಲಾಗಿದೆ. ಸ್ಥಳೀಯ ಉದ್ಯಮಗಳನ್ನು ಉಳಿಸಿ ಬೆಳೆಸಲು ವಿದೇಶಿ ಸರಕುಗಳ ಮೇಲೆ ತೆರಿಗೆ ವಿಧಿಸುವುದು ಅನಿವಾರ್ಯವಾಗಬಹುದೆಂದು ಸಹ ವರದಿಯು ಹೇಳುತ್ತದೆ. ಈ ವರದಿಯ ಬಗ್ಗೆ ನಮ್ಮ ಮಾಧ್ಯಮಗಳು ತುಟಿಬಿಚ್ಚಿಲ್ಲದಿರುವುದರ ಮರ್ಮವೇನೆಂದು 'ಹೊಸತು' ಓದುಗರಿಗೆ ವಿಶೇಷವಾಗಿ ಹೇಳುವ ಅಗತ್ಯವಿಲ್ಲ.

* * *

ಅಮೆರಿಕಾದಲ್ಲಿ 'ಅಕ್ಕ' ಸಮ್ಮೇಳನಕ್ಕೆ ಸಾರ್ವಜನಿಕರ ಖರ್ಚಿನಲ್ಲಿ ತೆರಳಿದ್ದ ತಂಡವು ಹಿಂದಿರುಗಿದೆ. ಆ ಇಡೀ ತಂಡವು ಶಿವಮೊಗ್ಗದಲ್ಲೂ ಕಾಣಿಸಿಕೊಳ್ಳುತ್ತದೆಂಬ ಆಶಯ ನಮ್ಮದು. ಬಾಲ್ಟಿಮೋರಿನ ಸಮಾವೇಶವು ಈ ಸಂದೇಶವನ್ನು ನಮ್ಮ ಸಾಂಸ್ಕೃತಿಕ ರಾಯಭಾರಿಗಳಿಗೆ ನೀಡಿಲ್ಲದಿದ್ದರೆ ಅವರೆಲ್ಲಾ ಅಲ್ಲಿಗೆ ತೆರಳಿದ್ದು ನಿಷ್ಪ್ರಯೋಜಕವೆನಿಸಿಬಿಡುತ್ತದೆ. ವಿದೇಶದಿಂದ ಸ್ಫೂರ್ತಿ ಪಡೆಯುವುದು ಜಾಗತೀಕರಣದ ಶಕೆಯ ವೈಶಿಷ್ಟ್ಯವಿರಬಹುದು. ನಮ್ಮ ಕ್ರಿಕೆಟ್ ದಾಂಡಿಗರಿಗೆ ವಿದೇಶಿ ತರಬೇತುದಾರನಿಂದ ಲಾಭವೇನಾದರೂ ದೊರೆತಿದ್ದರೆ ಅದು ಪಂದ್ಯಗಳಲ್ಲಿ ಪ್ರತಿಫಲಿತವಾಗಿಲ್ಲ. ಹಾಕಿಯಲ್ಲಿ ಮೊಟ್ಟಮೊದಲ ಬಾರಿಗೆ ನಮ್ಮ ದೇಶ ಹನ್ನೆರಡರಲ್ಲಿ ಹನ್ನೊಂದನೆಯ ಸ್ಥಾನ ಪಡೆದಿದ್ದರಿಂದ ಭಾಸ್ಕರನ್ ಅವರನ್ನು ಸಮುದ್ರಕ್ಕೆ ತಳ್ಳಿ ಜರ್ಮನಿಯಿಂದ ಒಬ್ಬ ಪ್ರತಿಭಾವಂತ ತರಬೇತುದಾರನನ್ನು ಕರೆಸಿಕೊಳ್ಳಬೇಕೆಂದು ಮುಸುಮುಸು ಮಾತು ಕೇಳಿಬರುತ್ತಿದೆ. ಬಹುಶಃ ಗ್ರೆಗ್ ಚಾಪೆಲ್ ಅದು ಅನಗತ್ಯವೆಂದು ತನ್ನ ಸ್ವಂತ ಅನುಭವದಿಂದ ತಿಳಿಯಹೇಳುತ್ತಾನೆಂದು ಆಶಿಸಬೇಕಾಗಿದೆ. ''ಫೋರಿನ್ ಕೋಚ್ - ಜಿಂದಾಬಾದ್.'' ಕೋಚ್ ಎಂದರೆ 'ಡಬ್ಬ' ಎಂಬ ಒಂದರ್ಥವೂ ಇರಬಹುದಲ್ಲವೇ? ಡಬ್ಬಿಯನ್ನು ಡಬ್ಬ ಎನ್ನಬಹುದಾದರೆ ಅದು ಸರಿ.



*ಹಿಂದಿನ ಪುಟದಿಂದ*

ಮತ್ತು ಜಾವಾ ಸಕ್ಕರೆ, ಬಟ್ಟೆಯ ಸೋಪು, ಮೈಸೋಪುಗಳು, ಸಿಗರೇಟ್, ಬಿಸ್ಕತ್, ಪೆಪ್ಪರ್‌ಮಿಂಟ್ ಮತ್ತು ಚಾಕೊಲೇಟ್ ಹಾಗೂ ವಿಲಾಯ್ತಿ ಔಡ್ಲೆಣ್ಣೆ ಹಾಗೂ ಔಷಧಿಗಳು.

ಸಕ್ಕರೆಯ ವ್ಯಾಪಾರವೂ ೧.೬ ಕೋಟಿ ರೂ.ಗಳಷ್ಟು ಕಡಿಮೆ ಆಯಿತು. ಅದರಂತೆಯೇ ಸಿಗರೇಟ್ ವ್ಯಾಪಾರವೂ ೧೨ ಲಕ್ಷ ರೂ.ಗಳಷ್ಟು ಖೋತಾ ಆಯಿತು.

ಖಾದಿ ಉತ್ಪನ್ನ ಕಾರ್ಯದಲ್ಲಿ ತೊಡಗಿದ್ದ ಕಾರ್ಯಕರ್ತರನ್ನೆಲ್ಲ ಬಂಧಿಸಿ, ಖಾದಿ ಸಂಸ್ಥೆಗಳನ್ನು ನ್ಯಾಯಬಾಹಿರ ಸಂಸ್ಥೆಗಳೆಂದು ಸರ್ಕಾರ ಘೋಷಿಸಿತು. ಹತ್ತಾರು ಸಾವಿರ ಜನ ಈ ಚಳುವಳಿಯಲ್ಲಿ ಭಾಗವಹಿಸಿ ಸೆರೆಮನೆ ಸೇರಿದರು.

ಪರದೇಶದಿಂದ ಬರುವ ಚಹಾ, ಸಿಗರೇಟು, ಪಟಾಕಿ, ಧಡಾಕಿ, ಸಕ್ಕರೆ, ಆಟದ ಸಾಮಾನು, ಖಾದ್ಯ ಪದಾರ್ಥಗಳು, ಕಾಗದ, ಪೆನ್ಸಿಲ್ ಇವುಗಳ ಮಾರಾಟವನ್ನೂ ನಿಷೇಧಿಸುವ ಕಾರ್ಯಕ್ರಮ ಉತ್ತರ ಕನ್ನಡ ಜಿಲ್ಲೆಯ ಎಲ್ಲ ತಾಲೂಕಿನಲ್ಲೂ ಬಿರುಸಾಗಿ ನಡೆಯಿತು. ಈ ಚಳುವಳಿಯನ್ನು ಉಗ್ರವಾಗಿ ನಡೆಸುವ ದೃಷ್ಟಿಯಿಂದ ಕಾರವಾರ ಜಿಲ್ಲಾ ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿಗಳಾಗಿದ್ದ ಹರಿ ಅನಂತ ಪೈ ಅವರು ತಮ್ಮ ಕಾರ್ಯದರ್ಶಿ ಸ್ಥಾನಕ್ಕೆ ರಾಜೀನಾಮೆ ನೀಡಿ ಎಸ್. ಎಸ್. ಶಾಸ್ತ್ರಿಯವರನ್ನು ಆ ಸ್ಥಾನದಲ್ಲಿ ಕೂಡಿಸಿ ತಾವು ಈ ಪರದೇಶಿ ವಸ್ತುಗಳ ಬಹಿಷ್ಕಾರ ಚಳುವಳಿಯ ಪೂರ್ಣಕಾಲದ ನಾಯಕತ್ವವನ್ನು ವಹಿಸಿಕೊಂಡರು.

ಪರದೇಶಿ ಪದಾರ್ಥಗಳ ಬಹಿಷ್ಕಾರ ಚಳುವಳಿಯ ಝಳ ಬ್ರಿಟನ್ನನ್ನು ಕಂಗಾಲು ಮಾಡಿತು. ಮ್ಯಾಂಚೆಸ್ಟರ್ ಗಾರ್ಡಿಯನ್ ಪತ್ರಿಕೆ ಹೀಗೆ ಬರೆಯಿತು: 'ಇನ್ನು ಮುಂದೆ ನಾವು ಇಂಗ್ಲಿಷರು ಹಿಂದುಸ್ತಾನವನ್ನು ತೋಪು, ತುಪಾಕಿಗಳ ಮೂಲಕ ಹೆದರಿಸಿ ಆಳುವುದು ಆಗದ ಮಾತು. ಬೇಗನೆ ಸಾಮೋಪಾಯಗಳಿಂದ ಹಿಂದುಸ್ಥಾನಕ್ಕೆ ಸವಲತ್ತುಗಳನ್ನು ನೀಡಿದರೆ ಮಾತ್ರ ನಾವು ಈ ಪೇಚಿನಿಂದ ಪಾರಾಗಲು ಸಾಧ್ಯ. ಏಕೆಂದರೆ, ಮುಂಬಯಿ ವ್ಯಾಪಾರಿಗಳು ನಮ್ಮ ವ್ಯಾಪಾರವನ್ನು ಪೂರ್ಣಸ್ಥಗಿತಗೊಳಿಸಿದ್ದಾರೆ. ಕಲ್ಕತ್ತೆಯಲ್ಲೂ ಅದೇ ಸ್ಥಿತಿ ಇದೆ. ಕಲ್ಕತ್ತದಲ್ಲಿ ಬಟ್ಟೆ ವ್ಯಾಪಾರ ಮಾಡುತ್ತಿರುವ ಇಂಗ್ಲಿಷ್ ಕಂಪನಿಗಳವರೂ ಇದೇ ರೀತಿ ಅಭಿಪ್ರಾಯ ವ್ಯಕ್ತಪಡಿಸಿರುತ್ತಾರೆ.'

ಈ ಎಲ್ಲ ಅಂಶಗಳನ್ನು ಒಳಗೊಂಡ ಒಂದು ಪುಸ್ತಕ ಪ್ರಕಟವಾಗಿದೆ. ಪುಸ್ತಕದ ಶೀರ್ಷಿಕೆ 'ಸ್ವಾತಂತ್ರ್ಯ ಚಳುವಳಿಯ ಕರಪತ್ರಗಳು', ಈ ಕರಪತ್ರಗಳನ್ನು ಸಂಪಾದನೆ ಮಾಡಿ ಪ್ರಕಟಿಸಿರುವವರು ಶ್ರೀ ವಿ. ಎಸ್. ಹೆಗ್ಡೆ.


ಎಚ್. ಎಸ್. ದೊರೆಸ್ವಾಮಿ

ನಂ. ೧೫೬೩, ೩೯ನೇ 'ಎಫ್' ಕ್ರಾಸ್, 'ಟಿ' ಬ್ಲಾಕ್

ಜಯನಗರ, ಬೆಂಗಳೂರು - ೫೬೦ ೦೪೧

# ಕಳೆದುಹೋದ ಸಮಯ, ಕೈ ಜಾರಿದ ಮುತ್ತು

■ ಎಸ್. ಗೋಪಾಲಕೃಷ್ಣ

**ಸಮಯವು ಅತ್ಯಮೂಲ್ಯ. ಕಳೆದುಹೋದ ಸಮಯ ಇನ್ನೆಂದೂ ದೊರೆಯುವುದಿಲ್ಲ. ಸಮಯದ ಸದುಪಯೋಗವನ್ನು ಎಲ್ಲರೂ ಮಾಡಿಕೊಳ್ಳಬೇಕು. ಗಂಟೆಗಿಷ್ಟು ಕೂಲಿ, ದಿನಕ್ಕೆ ಇಷ್ಟು, ಗಂಟೆಗಳಿಗೆ ಇಂತಿಷ್ಟು ವೇತನ ಎಂದೆಲ್ಲ ಸಮಯಕ್ಕೂ, ಉತ್ಪಾದನೆಗೂ, ಹಣ ಸಂಪಾದನೆಗೂ ಲೆಕ್ಕ ಹಾಕುತ್ತಾರೆ. ಕಬ್ಬಿಣ ಕಾದು ಕೆಂಪಾಗಿರುವ ಸಮಯ ಸ್ವಲ್ಪ ವೇಳೆ ಮಾತ್ರ. ಆ ಅಲ್ಪ ಅವಧಿಯಲ್ಲಿ ಮಾತ್ರ ಅದಕ್ಕೆ ಸೂಕ್ತ ರೂಪುಕೊಡಲು ಸಾಧ್ಯ. ನಿಧಾನ ಮಾಡಿದರೆ ಅದರ ಕಾವು ಇಲ್ಲವಾಗಿ ಕಬ್ಬಿಣವನ್ನು ಬಗ್ಗಿಸಲು ಅಸಾಧ್ಯವಾಗುತ್ತದೆ. ಆದ್ದರಿಂದ ನಮ್ಮ ಯಾವ ಕೆಲಸಗಳನ್ನಾದರೂ ನಿಗದಿತ ಅವಧಿಯಲ್ಲಿ, ಸೂಕ್ತವಾದ ಸಕಾಲದಲ್ಲಿ, ಸಮಯವನ್ನು ವ್ಯರ್ಥ ಮಾಡದೆ, ಮಾಡಿ ಪೂರೈಸಿಕೊಳ್ಳಬೇಕಾದುದು ಅಗತ್ಯ.**

"**ಕಾ**ಲವೂ, ಸಮುದ್ರದ ಅಲೆಗಳೂ ಯಾರಿಗೂ ಕಾಯುವುದಿಲ್ಲ" ಎಂದು ಹೇಳಲಾಗುತ್ತದೆ. ಈಗ ಯಾರನ್ನು ಕೇಳಿದರೂ "ಟೈಮ್" ಇಲ್ಲ ಎನ್ನುತ್ತಾರೆ. ಯಾವ ಕೆಲಸ ಮಾಡಲೂ ಟೈಮೇ ಸಾಲದೆನ್ನುತ್ತಾರೆ. "ಎಲ್ಲದಕ್ಕೂ ಟೈಮ್ ಬರಬೇಕು. ಕಾಲವೇ ಎಲ್ಲಕ್ಕೂ ಪರಿಹಾರ ದೊರಕಿಸಿಕೊಡುತ್ತದೆ," 'ಟೈಮ್ ಈಸ್ ಮನಿ' – ಇತ್ಯಾದಿಯಾಗಿ ಟೈಮ್ ಅಥವಾ ಕಾಲವನ್ನು ವಿವರಿಸಲು ಅನೇಕ ವ್ಯಾಖ್ಯಾನಗಳನ್ನು ಮುಂದಿಡಲಾಗುತ್ತದೆ.

'ಟೈಮ್' ಅಥವಾ ಕಾಲವನ್ನು ವೈಜ್ಞಾನಿಕವಾಗಿ ವಿವರಿಸುತ್ತಾರೆ. ನ್ಯೂಟನ್ ಮತ್ತು ಐನ್‌ಸ್ಟೀನ್ 'ಕಾಲ'ವನ್ನು ಚಲಿಸುತ್ತಿರುವ ವಸ್ತು – ಶರೀರಕ್ಕೆ ಚಲನೆಯಿಲ್ಲದ ವಸ್ತುವಿನ ಸಂಬಂಧ ಎಂಬುದಾಗಿ ವಿಶ್ಲೇಷಿಸುತ್ತಾರೆ.

ಕಾಲವನ್ನು ಅಳೆಯುವುದು ಹೇಗೆ? ದಿನಕ್ಕೆ ೨೪ ಗಂಟೆಗಳ ಅವಧಿ. ವರ್ಷಕ್ಕೆ ೩೬೫ ದಿನಗಳು. ಹೀಗೆಂದರೆ ಏನು? ಭೂಮಿಯು ಸೂರ್ಯನನ್ನು ಒಂದು ಸುತ್ತು ಸುತ್ತಲು ತೆಗೆದುಕೊಳ್ಳುವ ಅವಧಿ. ಚಂದ್ರನು ಭೂಮಿಯನ್ನು ಒಂದು ಸುತ್ತು ಸುತ್ತಲು ಇರುವ ಅವಧಿಯಲ್ಲಿ, ಭೂಮಿಯು ೩೦ ಬಾರಿ ತಿರುಗುತ್ತದೆ.

ಪ್ರತಿದಿನ ವ್ಯಾಪಾರವಾಗುವ ಕೈಗಡಿಯಾರಗಳು ಅವೆಷ್ಟು! ಅದೆಷ್ಟು ಜನರ ಕೈಯಲ್ಲಿ ವಾಚುಗಳು. ದಿನದ ಯಾವ ಸಮಯದಲ್ಲಾದರೂ ಈ ಟೈಮ್‌ನ ಗೊಡವೆ ನನಗೆ ಬೇಡ ಎಂದು ನೀವು ಯಾವಾಗಲಾದರೂ ಅಂದುಕೊಂಡಿದ್ದೀರಾ? ಟೈಮ್‌ನ ಪ್ರಾರಂಭ ಯಾವಾಗ, ನೋಡಿರಿ. ಜಗತ್ತಿಗೆ ಬಂದು ನಾವು ಕಣ್ಣು ಬಿಡುವ ಹೊತ್ತಿಗಾಗಲೇ ನಮ್ಮ ಸಮಯ ಪ್ರಾರಂಭವಾಗುತ್ತದೆ. ಅಷ್ಟೇಕೆ, ತಾಯಿಯ ಗರ್ಭದೊಳಗೂ ಪ್ರಕೃತಿ ನಿಗದಿ ಮಾಡಿದಷ್ಟು ಅವಧಿ ಇದ್ದೇ ಹೊರಬರಬೇಕು. ಹುಟ್ಟಿದಂದಿನಿಂದ ಕೊನೆಯ ಉಸಿರಿರುವ ತನಕ ಸಮಯ ಪ್ರತಿಯೊಬ್ಬರಿಗೂ ಓಡುತ್ತಿರುತ್ತದೆ. ಅವರವರಿಗೆ ಅವರವರದೇ ಆದ ವೇಗ. ನಾವು ಯಾರಾದರೂ ಎಂದಾದರೂ ಸಮಯದ ಪರಿವೆ ಇಲ್ಲದೆ ಇರಲು ಸಾಧ್ಯವೇ? ಸಮಯವನ್ನು ಎಚ್ಚರಿಸಲು ನಮಗಿರುವ ಸಾಧನಗಳನ್ನು ನೋಡಿ: ಗಡಿಯಾರ, ಸೂರ್ಯೋದಯ, ಕತ್ತಲಾಗುವುದು, ಶಾಲಾ ಕಾಲೇಜುಗಳಲ್ಲಿ ಗಂಟೆ ಬಾರಿಸುವುದು, ಚರ್ಚು, ದೇವಾಲಯ, ಮಸೀದಿಗಳಲ್ಲಿ ನಿಗದಿತ ಸಮಯಕ್ಕೆ ಉಂಟಾಗುವ ಶಬ್ದ; ಬಸ್ಸು, ರೈಲು, ವಿಮಾನಗಳು ಹೊರಡುವ ಬಂದಿಳಿಯುವ ಸಮಯ; ಮನೆಯಲ್ಲಿ ವಯೋವೃದ್ಧರು ಸಮಯಕ್ಕೆ ಸರಿಯಾಗಿ ಬೆಳಿಗ್ಗೆ ಏಳುವ ಪರಿಪಾಠ; ಪಕ್ಷಿಗಳ ಕಲರವ; ಕಾಲಕಾಲಕ್ಕೆ ಸರಿಯಾಗಿ ಹಸಿವಾಗುವುದು, ಆಗ ಗಡಿಯಾರ ನೋಡಿದರೆ ನಾವು ಪ್ರತಿದಿನ ತಿಂಡಿ, ಊಟ ಮಾಡುವ ಸಮಯವಾಗಿರುವುದು; ಸಂಜೆ ದನಕರುಗಳು ಮನೆಗಳಿಗೆ ಹಿಂತಿರುಗುವ ಕರಾರುವಾಕ್ಕಾದ ಗೋಧೂಳಿ (ಮುಸ್ಸಂಜೆ); ಹೀಗೆ ಈಗ ಸುಮಾರಾಗಿ ಇಂತಿಷ್ಟೇ ಗಂಟೆ ಎಂದು ಹೇಳಿಬಿಡಬಹುದಾದಷ್ಟು ಘಟನೆಗಳು ದಿನಂಪ್ರತಿ ನಡೆಯುತ್ತಿರುತ್ತವೆ.

ಯಾರನ್ನೇ ಕೇಳಿ, 'ಅಯ್ಯೋ ಟೈಮೇ ಇಲ್ಲ', 'ನೂರೆಂಟು ಕೆಲಸ' ಎನ್ನುತ್ತಾರೆ. ಹೇಗಾದರೂ ಸಮಯ ಹೊಂದಿಸಿಕೊಂಡು ಬರುತ್ತೇನೆ ಎನ್ನುವವರಿದ್ದಾರೆ. ರ್‍ಯಾಂಡಾಲ್ಫ್ ಹಾಬ್ಲರ್ ಎಂಬಾತ ಟೈಮ್ ಬಗ್ಗೆ ಬರೆಯುತ್ತಾರೆ: ಹೇಗಾದರೂ squeeze ಮಾಡಿಕೊಂಡು ಬರುತ್ತೇನೆ ಎನ್ನುತ್ತಾರೆ. ಟೈಮ್ ಎನ್ನುವುದೇನು ಕಿತ್ತಲೆ ಹಣ್ಣೇ? ಈ ಓಡಾಟಕ್ಕೆ ಟೈಮ್ ಎಲ್ಲಾ 'eat-up' ಆಗಲು ಅದೇನು ತಿನ್ನುವ ಪದಾರ್ಥವೇ? 'ಎಲ್ಲವನ್ನೂ ಕಾಲವೇ ಗುಣಮಾಡುತ್ತದೆ' ಎನ್ನಲು ಕಾಲವೇ ಔಷಧಿಯೇ ಅಥವಾ ವೈದ್ಯನೇ? ನಾನು 'ಸಮಯ ಮಾಡಿಕೊಳ್ಳುತ್ತೇನೆ', 'ಸಮಯ ಉಳಿಸಿದ್ದೇನೆ', 'ಸಮಯ ಕಳೆದುಹೋಯಿತು', 'ಸಮಯ ದೊರಕಿತು', 'ಸಮಯ ದಂಡವಾಯಿತು', 'ಸಮಯ ಕಳೆದಿದ್ದೇನೆ', 'ಸಮಯ ಹಾರಿಹೋಯಿತು' – ಹೀಗೆಲ್ಲಾ ಹೇಳುತ್ತಾರೆ. ನೊಬೆಲ್ ಬಹುಮಾನ ವಿಜೇತರಿಗೂ ಇರುವ ಸಮಯ ೨೪ ಗಂಟೆಗಳೇ. ಬೇರೆಲ್ಲರಿಗೂ ಇರುವ ಸಮಯ ೨೪ ಗಂಟೆಗಳೇ. ಆದರೆ, ಸಾಧನೆ ಮಾತ್ರ ಅಜಗಜಾಂತರ. ನಮ್ಮ ಕಾಲದಲ್ಲಿ ಸಮಯ ಹೋಗುವುದೇ ಗೊತ್ತಾಗುತ್ತಿರಲಿಲ್ಲ. ಈಗ ಸಮಯ ಕಳೆಯುವುದೇ ಕಷ್ಟ ಎಂದು ಅನೇಕ ನಿವೃತ್ತರು ಹೇಳುತ್ತಾರೆ. ಕೆಲವರು ಸಮಯವನ್ನು 'ಕೊಲ್ಲು'ವುದನ್ನೂ ನೋಡಿದ್ದೇವೆ.

ಸಮಯ, ಕಾಲ ಬೇಗ ಬೇಗ ಮುಗಿಯಬಾರದೆಂಬುವವರು ಬಹಳ ಜನ. ಕಾಲ ಹೋದಂತೆ ವಯಸ್ಸು ಮಾಗುತ್ತ ಬರುತ್ತದೆ. ಸರಕಾರೀ ನೌಕರರು ನಿವೃತ್ತಿಯಾಗಿಬಿಡುತ್ತೇವೆಂದು ಚಿಂತನೆಗೆ ಈಡಾಗುತ್ತಾರೆ. ಹೆಂಗಳೆಯರಿಗೆ ವಯಸ್ಸಿನದೇ ಚಿಂತೆ. ನಟ-ನಟಿ



ಯರಿಗಂತೂ ವಯಸ್ಸು ಮೀರಲೇಬಾರದು. ಅವರ ವಯಸ್ಸನ್ನೂ ಕೇಳಬಾರದು.

ಯಾವ ಯಾವ ಕಾಲಕ್ಕೆ ಏನೇನು ಆಗಬೇಕೋ ಅದು ಆಗುತ್ತದೆ. ಇದು ನಿಸರ್ಗ ನಿಯಮ. ಉದಾಹರಣೆಗೆ, ಬಿತ್ತಿದ ಬೀಜ ಮೊಳಕೆಯೊಡೆಯುವ, ಪೈರಾಗುವ, ಹೂವು ಬಿಟ್ಟು, ಕಾಯಿಕಚ್ಚುವುದೆಲ್ಲದಕ್ಕೂ ನಿಗದಿತ ಸಮಯ ಇರುತ್ತದೆ. ನಮಗೆ ಆತುರ. ಅನೇಕ ವೇಳೆ ಎಲ್ಲಾ ಬೇಗ ಆಗಿಬಿಡಬೇಕು. ಅದಕ್ಕಾಗಿ ನಾವು ಕೃತಕ ವಿಧಾನಗಳನ್ನೂ ಅನುಸರಿಸುತ್ತೇವೆ. 'ಕಾಯಿ ಗುದ್ದಿ ಹಣ್ಣು ಮಾಡುತ್ತೇವೆ', ಈ ಆತುರವೇ ಒತ್ತಡ ವಾಗುತ್ತಿರುವುದು. ಸಮಯಾಧಾರಿತ ಒತ್ತಡದಿಂದ ರಕ್ತದ ಅತಿ ಒತ್ತಡ, ಲಕ್ವ, ಹೃದಯಾಘಾತ, ಅಲ್ಸರ್, ಆತ್ಮಹತ್ಯೆಯಂಥ ಅನಾಹುತಗಳು ಜರುಗುತ್ತವೆ. ಕೊಲೆ, ಸುಲಿಗೆಗಳೂ ಆಗುತ್ತವೆ.




ಇದನ್ನು ತಪ್ಪಿಸುವುದಕ್ಕಾಗಿಯೇ ಈಗ ಟೈಮ್ ಮ್ಯಾನೇಜ್‌ಮೆಂಟ್ ಅಥವಾ ಸಮಯ ನಿರ್ವಹಣೆಯ ಬಗ್ಗೆ ತಜ್ಞರು ತಿಳಿಸಿಕೊಡುತ್ತಾರೆ. ಸರಿಯಾಗಿ, ಯೋಜಿತ ವಾಗಿ ಕೆಲಸ ಮಾಡಲು ಸಮಯದ ನಿರ್ವಹಣೆ ಅತ್ಯಗತ್ಯ. ಇದರಿಂದ ಒತ್ತಡ ಉಂಟಾಗುವುದಿಲ್ಲ, ವ್ಯಕ್ತಿಯ ಆರೋಗ್ಯದ ಮೇಲೆ ದಾರುಣ ಪರಿಣಾಮ ಬೀರುವುದಿಲ್ಲ. ಸಮಯ ಪಾಲನೆ ಇನ್ನೊಂದು ಮುಖ್ಯ ಅಂಶ. ಕಚೇರಿಗೆ ಶಾಲೆಗೆ, ಕಾಲೇಜಿಗೆ, ಕಾರ್ಖಾನೆಗೆ ಸಮಯಕ್ಕೆ ಸರಿಯಾಗಿ ಹೋಗುವುದು, ಸೂಕ್ತ ಸಮಯದಲ್ಲಿ ಮನೆಗೆ ವಾಪಸು ಬರುವುದು; ಒಪ್ಪಿ ಕೊಂಡ ಕೆಲಸವನ್ನು ನಿಗದಿತ ಅವಧಿಯಲ್ಲಿ ಮುಗಿಸುವುದು; ಬ್ಯಾಂಕಿನಲ್ಲಿ ತೆಗೆದುಕೊಂಡ ಸಾಲದ ಹಣವನ್ನು ನಿಗದಿತ ಕಾಲದಲ್ಲಿ ಹಿಂದಿರುಗಿಸುವುದು; ವಿಶ್ವಾಸದಲ್ಲಿ ಸ್ನೇಹಿತರು, ಬಂಧು-ಬಳಗದವರಿಂದ ಹಣ ತೆಗೆದುಕೊಂಡಿದ್ದರೆ ಒಪ್ಪಿಕೊಂಡ ಅವಧಿಯಲ್ಲಿ ಹಿಂತಿರುಗಿಸುವುದು; ಪ್ರಯಾಣ ಬೆಳೆಸುವುದಿದ್ದರೆ ಸಾಕಷ್ಟು ಸಮಯ ಮುಂಚಿತವಾಗಿ ಹೊರಟು ನಿಗದಿತ ಸಮಯದಲ್ಲಿ ತಲುಪಬೇಕಾದ ಸ್ಥಳವನ್ನು ತಲುಪುವುದು; ಸಭೆ-ಸಮಾರಂಭಗಳಿಗೆ ಹೋಗುವು ದಾಗಿದ್ದರೆ ಸಮಯ ಪರಿಪಾಲನೆ, ಅಂತೆಯೇ ಸಭೆಯಲ್ಲಿ ಭಾಷಣ ಮಾಡುವ, ಮುಖ್ಯ ಅತಿಥಿಯಾಗಿ ಕರೆದಿದ್ದರೆ ನಿಗದಿತ ಸಮಯಕ್ಕೆ ಸಮಾರಂಭದ ಸ್ಥಳವನ್ನು ತಲಪುವುದು; ಯಾರ ಮನೆಗಾದರೂ ಊಟಕ್ಕೆ, ಭೇಟಿಗೆ ಸಮಯ ನಿಗದಿಯಾಗಿದ್ದ ಪಕ್ಷದಲ್ಲಿ ಸಮಯಪಾಲನೆ ಮಾಡುವುದು; ಎಲ್ಲವೂ ನಮ್ಮ ವ್ಯಕ್ತಿತ್ವಕ್ಕೆ ಮೆರಗು ನೀಡುತ್ತವೆ.

ಸಮಯವು ಅತ್ಯಮೂಲ್ಯ. ಕಳೆದುಹೋದ ಸಮಯ ಇನ್ನೆಂದೂ ದೊರೆಯುವುದಿಲ್ಲ. ಸಮಯದ ಸದುಪಯೋಗವನ್ನು ಎಲ್ಲರೂ ಮಾಡಿಕೊಳ್ಳಬೇಕು. ಗಂಟೆಗಿಷ್ಟು ಕೂಲಿ, ದಿನಕ್ಕೆ ಇಷ್ಟು, ಗಂಟೆಗಳಿಗೆ ಇಂತಿಷ್ಟು ವೇತನ ಎಂದೆಲ್ಲ ಸಮಯಕ್ಕೂ, ಉತ್ಪಾದನೆಗೂ, ಹಣ ಸಂಪಾದನೆಗೂ ಲೆಕ್ಕ ಹಾಕುತ್ತಾರೆ. ಕಬ್ಬಿಣ ಕಾದು ಕೆಂಪಾಗಿರುವ ಸಮಯ ಸ್ವಲ್ಪ ವೇಳೆ ಮಾತ್ರ. ಆ ಅಲ್ಪ ಅವಧಿಯಲ್ಲಿ ಮಾತ್ರ ಅದಕ್ಕೆ ಸೂಕ್ತ ರೂಪುಕೊಡಲು ಸಾಧ್ಯ. ನಿಧಾನ ಮಾಡಿದರೆ ಅದರ ಕಾವು ಇಲ್ಲವಾಗಿ ಕಬ್ಬಿಣವನ್ನು ಬಗ್ಗಿಸಲು ಅಸಾಧ್ಯವಾಗುತ್ತದೆ. ಆದ್ದರಿಂದ ನಮ್ಮ ಯಾವ ಕೆಲಸಗಳನ್ನಾದರೂ ನಿಗದಿತ ಅವಧಿಯಲ್ಲಿ, ಸೂಕ್ತವಾದ ಸಕಾಲದಲ್ಲಿ, ಸಮಯವನ್ನೂ ವ್ಯರ್ಥ ಮಾಡದೆ ಮಾಡಿ ಪೂರೈಸಿಕೊಳ್ಳಬೇಕಾದುದು ಅಗತ್ಯ.

**ಎನ್. ಗೋಪಾಲಕೃಷ್ಣ**
೧೧೧, ೫ನೇ ಕ್ರಾಸ್, ರಂಗನಾಥ ಲೇಔಟ್, ಮೈಸೂರು ರಸ್ತೆ
ಬೆಂಗಳೂರು - ೫೬೦ ೦೨೬

# ಓ ಮರವೇ



ಕತ್ತೆತ್ತಿ ನೋಡಿದರೆ ಹಸಿರೆಲೆಯ ಚಿತ್ತಾರ
ಭಲೆ ಭಲೆ ಸೃಷ್ಟಿಯ ಕಲೆ !
ಸೊಗಸು ನೋಟ, ಹಸಿರಿನೂಟ !
ಋಣ ತೀರಿಸಲಾರೆ ಓ ಮರವೇ.

ಬೀಸಿದರೆ ಗಾಳಿ ಹಸಿರು ಚಾಮರ
ಹೂ ಬಿಟ್ಟು ಕಣ್ಣಿಗೆ ಹಬ್ಬ !
ಹಣ್ಣಾಗಿ ರಸ ರಸ !
ಋಣ ತೀರಿಸಲಾರೆ ಓ ಮರವೇ.

ಬೇರಿಳಿಸಿ ನೆಲದಾಳ ಹೀರಿ ನೀರ
ಚಾಚಿ ನೀರಿಗೆ ರೆಂಬೆ, ಕೊಂಬೆ
ಬಿಸಿಲ ತಾಪಕ್ಕೆ ನೆಳಲು, ಬೆಂದ ಜೀವಕ್ಕೆ ತಂಪು !
ಋಣ ತೀರಿಸಲಾರೆ ಓ ಮರವೇ.

ಒಣಗಿದರೆ ಕಟ್ಟಿಗೆ, ಕೊಯ್ದರೆ ನಾಟ, ಕೆತ್ತಿದರೆ ಪೀಠ !
ಧಾನ್ಯಗಳ ಬೇಸು, ಚಳಿಗೆ ಮೈ ಕಾಸು !
ಬರಿ ಕೂತು ! ಒದೊರಗಿ ! ಗೋರಿ ಮಲಗಿ !
ಋಣ ತೀರಿಸಲಾರೆ ಓ ಮರವೇ

ಹಸಿರಾಗಿ ನಗೆಯಾಡಿ, ಉಸಿರಾಗಿ ನಾಡಿಗೇ
ಬೀಡಾಗಿ ಕ್ರಿಮಿ ಕೀಟ ಹಕ್ಕಿಗೇ
ನಿಂತಲ್ಲೇ ನಿಂತು ಸದಾ ಧ್ಯಾನಿಸುವೆ
ಋಣ ತೀರಿಸಲಾರೆ ಓ ಮರವೇ.

ಬಂದಗದ್ದೆ ರಾಧಾಕೃಷ್ಣ
'ಪುಸ್ತಕ ಹೊಂಬಾಳೆ', ಕೆಳದಿ - ೫೭೭ ೪೦೧
ಸಾಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ.

# ಕನ್ನಡ ಕನ್ನಡಿಗ ಕರ್ನಾಟಕ

**ಕ**ನ್ನಡ ಶಕ್ತಿ ಕೇಂದ್ರವು ೧೯೯೦ರ ನವೆಂಬರಿನಿಂದ ೧೯೯೧ರ ಅಕ್ಟೋಬರ್‌ವರೆಗಿನ ವರ್ಷವನ್ನು 'ಕನ್ನಡ ಉಳಿಸಿ' ವರ್ಷವನ್ನಾಗಿ ಆಚರಿಸಲು ಕರೆಕೊಟ್ಟು, ಅದಕ್ಕೆ ಪೂರಕವಾಗಿ ಪ್ರಕಟಿಸಿದ ಮಾಹಿತಿ ಪೂರ್ಣ ಪುಸ್ತಕವೇ 'ಕನ್ನಡ - ಕನ್ನಡಿಗ - ಕರ್ನಾಟಕ' ಎಂದು ಡಾ|| ಚಿದಾನಂದ ಮೂರ್ತಿಯವರು ಮೊದಲ ಮುದ್ರಣದ ಮುನ್ನುಡಿಯಲ್ಲಿ ತಿಳಿಸಿದ್ದಾರೆ. ಅಂತೆಯೇ ಇದು ಕರ್ನಾಟಕದ ಬಹುತೇಕ ಸ್ಥೂಲ ವಿವರಗಳನ್ನು, ಅಂಕಿ - ಅಂಶಗಳನ್ನು ಸಂಗ್ರಹಿಸಿ ನೀಡಿದೆ. ಡಾ|| ಎಸ್. ಎಲ್. ಭೈರಪ್ಪನವರಂತೂ 'ಇದು ಕನ್ನಡಿಗರ ಅನಧಿಕೃತ ಸಂವಿಧಾನ' ಎಂದು ಕರೆದು ಗೌರವಿಸಿದ್ದಾರೆ.

ಈ ಪುಸ್ತಕದಲ್ಲಿ ಮೂರು (?) ಭಾಗಗಳಿದ್ದು ಕನ್ನಡ ಪರಗೀತೆಗಳು, ಕರ್ನಾಟಕದ ಇತಿಹಾಸ ಮತ್ತು ಅಂಕಿ - ಅಂಶಗಳ ನೋಟವನ್ನು ನೀಡುತ್ತದೆ.

ಪ್ರೊ|| ಎಲ್. ಎಸ್. ಶೇಷಗಿರಿ ರಾವ್ ಸಂಪಾದಿಸಿರುವ ಕನ್ನಡಪರ ಗೀತೆಗಳ ವಿಭಾಗದಲ್ಲಿ ಒಟ್ಟು ೨೧ ಗೀತೆಗಳಿದ್ದು, ಯಾವುದೇ ಕನ್ನಡ ಸಮಾರಂಭದಲ್ಲಿ ಹಾಡಲು ಉಪಯುಕ್ತವಾಗಿವೆ. ಇವೆಲ್ಲವನ್ನೂ ಒಂದೆಡೆಯೇ ಸಂಗ್ರಹಿಸಿ ನೀಡಿರುವುದು ಒಂದು ಅನುಕೂಲ. ನಾಡಗೀತೆಯಾದ 'ಜೈ ಭಾರತ ಜನನಿಯ ತನುಜಾತೆ'ಯಿಂದ ಪ್ರಾರಂಭವಾಗಿ, ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು, ತಾಯೆ ಬಾರ ಮೊಗವ ತೋರ, ನೀ ಮೆಟ್ಟುವ ನೆಲ ಅದೆ ಕರ್ನಾಟಕ, ಹಚ್ಚೇವು ಕನ್ನಡದ ದೀಪ, ಹೊತ್ತಿತೋ ಹೊತ್ತಿತು, ನಿತ್ಯೋತ್ಸವ, ಬಾರಿಸು ಕನ್ನಡ ಡಿಂಡಿಮವ ಇತ್ಯಾದಿ ಜನಪ್ರಿಯ ಗೀತೆಗಳನ್ನೊಳಗೊಂಡಿರುವ ಈ ಭಾಗವು ಭಾವನಾತ್ಮಕ ನೆಲೆಯಲ್ಲಿ ಕನ್ನಡ ಪ್ರೀತಿಯನ್ನು ಉದ್ದೀಪನಗೊಳಿಸುತ್ತದೆ. ಬಹುತೇಕ ಏಕೀಕರಣದ ಕಾಲದ ಗೀತೆಗಳೇ ಇರುವ ಇದರಲ್ಲಿ ಇತ್ತೀಚೆಗಿನ ಕವಿಗಳ ಗೀತೆಗಳನ್ನೂ ಸೇರಿಸಬಹುದಾಗಿತ್ತೆನಿಸುತ್ತದೆ.

ಎರಡನೆಯ ಭಾಗದಲ್ಲಿ ಕರ್ನಾಟಕದ ಸಂಕ್ಷಿಪ್ತ ಚರಿತ್ರೆಯೊಡನೆ ಪ್ರಾರಂಭವಾಗಿ, ಕರ್ನಾಟಕದ ಸಮಸ್ಯೆಗಳು, ಗೋಕಾಕ್ ಚಳವಳಿ, ಮಹಿಷಿ ವರದಿ, ವಲಸೆ ಇತ್ಯಾದಿ ವಿಚಾರ ಪ್ರಚೋದಕ ಲೇಖನಗಳ ಕಣಜವೇ ತುಂಬಿದೆ. ಕರ್ನಾಟಕದ ನದಿನೀರಿನ ಬಗ್ಗೆ ಏಳು ಲೇಖನಗಳಿರುವುದು ಕರ್ನಾಟಕಕ್ಕೆ ನದಿನೀರಿನ ವಿಚಾರದಲ್ಲಿ ಆಗಿರುವ ಅನ್ಯಾಯಗಳ ಮಟ್ಟದ ಸೂಚಿಯೂ ಆಗಿದೆ. ಕೃಷ್ಣಾ ಕಣಿವೆಯ ನೀರಿನ ಬಳಕೆಗಾಗಿ ಕೈಗೊಳ್ಳಬೇಕಾದ ತುರ್ತು ಕ್ರಮಗಳ ಬಗ್ಗೆ ಮಾಜಿ ಸಚಿವ ಶ್ರೀ ಎಚ್. ಕೆ. ಪಾಟೀಲರು ಬರೆದಿರುವ 'ಕೇಳಿ ಕೃಷ್ಣೆಯ ಕೂಗು' ಹೊತ್ತಿಗೆಯಿಂದ ಸಂಗ್ರಹಿಸಿ ಕೊಡಲಾಗಿದೆ. ಹೈದರಾಬಾದ್ ಕರ್ನಾಟಕಕ್ಕೆ ಸೇರಿದವರನ್ನೇ ಅಧಿಕವಾಗಿ ನೇಮಕ ಮಾಡುವುದು, ಕಣಿವೆ ಪ್ರದೇಶದಲ್ಲಿಯೇ ಸಭೆಗಳನ್ನು ನಡೆಸುವುದು, ವಿದ್ಯುತ್ ಉತ್ಪಾದನಾ ಗುತ್ತಿಗೆಯನ್ನು ಕರ್ನಾಟಕ ವಿದ್ಯುತ್ ನಿಗಮಕ್ಕೆ ನೀಡುವುದು, ಸಮಸ್ಯೆಗಳ ತ್ವರಿತ ಪರಿಹಾರಕ್ಕಾಗಿ ಸಂಪುಟ ಉಪಸಮಿತಿ ರಚಿಸುವುದು, ಕಣಿವೆ ಪ್ರದೇಶದ ಎಲ್ಲ ಏತ ನೀರಾವರಿ ಯೋಜನೆಗಳಿಗೆ ಹಣ ಒದಗಿಸುವುದು, ಜನಪ್ರಿಯತೆಗಾಗಿ ರೂಪಿಸಿರುವ ಎಲ್ಲ ಅನಗತ್ಯ ಯೋಜನೆಗಳನ್ನು ಸ್ಥಗಿತಗೊಳಿಸಿ ಉಳಿಸಿದ ಹಣವನ್ನು ಕೃಷ್ಣಾ ಯೋಜನೆಗೆ ಒದಗಿಸುವುದು ಇತ್ಯಾದಿ ಸಲಹೆಗಳನ್ನು ಓದಿದಾಗ ಹುಟ್ಟುವ ಪ್ರಶ್ನೆ 'ಪಾಟೀಲರೇ ಸರ್ಕಾರದ ಸಚಿವರಾಗಿದ್ದಾಗ ಈ ಸಲಹೆಗಳನ್ನು ಏಕೆ ಅನುಷ್ಠಾನಗೊಳಿಸಲಿಲ್ಲ?' ಸತ್ಯ ಬಲು ಕಠಿಣ – ರಾಜಕೀಯ ಇಚ್ಛಾಶಕ್ತಿಯ ಕೊರತೆ. ಕಾವೇರಿಗೆ ತೋರುವ ಆಸಕ್ತಿಯನ್ನು ಕೃಷ್ಣೆಗೆ ತೋರದಿರುವುದರಿಂದ ಕರ್ನಾಟಕ ಒಡೆಯುವ ಭಿನ್ನಧ್ವನಿ ಕೇಳಿಬಂದರೂ ಗಣನೀಯ ಬದಲಾವಣೆಗಳಾಗದಿರುವುದರಿಂದ, ಅನರ್ಹ ರಾಜಕಾರಣಿಗಳು ಆಯಕಟ್ಟಿನ ಸ್ಥಳಗಳಲ್ಲಿ ಕುಳಿತು ಕೇವಲ ಸ್ಥಾನ ಭದ್ರತೆಗಾಗಿಯೇ ಇಡೀ ಐದು ವರ್ಷ ಕಾಲ ಸರ್ಕಸ್ ಮಾಡುವುದರಿಂದ ರಾಜ್ಯದ ಯಾವುದೇ ಅಭಿವೃದ್ಧಿ ಕಾರ್ಯಗಳೂ ಮುಂದುವರಿಯದಂತಾಗಿ ನಮ್ಮ ರಾಜಕಾರಣಿಗಳು ಸತ್ವಹೀನರೆಂಬುದು ಸಾಬೀತಾಗಿದೆ. ಗಡಿ ವಿಚಾರದಲ್ಲಿ ರಾಷ್ಟ್ರಮಟ್ಟದಲ್ಲಿ ಭಾರತವು ಮೆರೆಯುವ ಪರಾಕ್ರಮವನ್ನೇ ರಾಜ್ಯಮಟ್ಟದಲ್ಲಿ ಕರ್ನಾಟಕವು ಪ್ರದರ್ಶಿಸುತ್ತಿದೆ. ಇದೆಲ್ಲವೂ ಪುಸ್ತಕವನ್ನೋದಿದರಿಂದಾದ ಪರಿಣಾಮ. ಈಚಿನ ಗಡಿ ಪ್ರಕರಣವೇ ಇದಕ್ಕೆ ಸಾಕ್ಷಿ.

ಹಾಗೆಯೇ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ರೂಪುರೇಷೆಗಳು ಎಂಬ ಲೇಖನದಲ್ಲಿ ಸರಕಾರವು ಈವರೆಗೆ ಹೊರಡಿಸಿರುವ ಆದೇಶಗಳು ಸರಿಯಾಗಿ ಕೆಲಸ ಮಾಡಿದ್ದರೆ ಕನ್ನಡದ ಅನುಷ್ಠಾನ ಎಂದೋ ಮುಗಿದಿರಬೇಕಾಗಿತ್ತು. ವಸ್ತುಸ್ಥಿತಿ ಗಮನಿಸಿದರೆ ಕಿಂಚಿತ್ತೂ ಪ್ರಗತಿಯಿಲ್ಲ. ಆದರೆ ಮಹಾರಾಷ್ಟ್ರ, ಆಂಧ್ರ, ತಮಿಳುನಾಡು, ಕೇರಳಗಳು ಇಂತಹ ಯಾವುದೇ ಆದೇಶಗಳ ನೆರವಿಲ್ಲದೇ ಸಾಕಷ್ಟು ಪ್ರಗತಿ ಸಾಧಿಸಿವೆ. ಕನ್ನಡಿಗರು ಸಜ್ಜನರಾಗಿರುವುದೇ ಅವರ ದೌರ್ಬಲ್ಯ. ಪಕ್ಷದ ವಿಚಾರಗಳಿಗಾಗಿ ನಮ್ಮ ರಾಜಕಾರಣಿಗಳು ತೋರುವ ಶೌರ್ಯ, ಪರಾಕ್ರಮಗಳು ಕನ್ನಡದ, ಕರ್ನಾಟಕದ ವಿಚಾರ ಬಂದಾಗ, ಅದೆಲ್ಲಿ ಮಾಯವಾಗುತ್ತವೆಯೋ ? ಕಡೇ ಪಕ್ಷ ಈ 'ಕನ್ನಡ-ಕನ್ನಡಿಗ-ಕರ್ನಾಟಕ' ಪುಸ್ತಕ ಹಿಡಿದುಕೊಂಡಾದರೂ ಸಂಸತ್ತಿನಲ್ಲಿ ಸ್ವಲ್ಪ ಬಾಯಿತೆರೆದರೆ ಏನನ್ನಾದರೂ ಸಾಧಿಸಬಹುದು.



ಎರಡನೇ ಭಾಗದ ಕೊನೆ ಲೇಖನ 'ವಲಸೆ'ಯು ತನ್ನ ವಿವರವಾದ ಅಂಕಿ - ಅಂಶಗಳಿಂದಾಗಿ ನಾವು ಮೂರನೇ ಭಾಗಕ್ಕೆ ಹೋಗುವುದು ನಮ್ಮ ಗಮನಕ್ಕೇ ಬಾರದ ಹಾಗೆ ಮಾಡಿದೆ. ಮೊದಲ ಮುದ್ರಣದ ಪ್ರಸ್ತಾವನೆಯಲ್ಲಿ ಎರಡು ಭಾಗಗಳಿವೆಯೆಂದು ಹೇಳಿದರೂ ನನಗಂತೂ ಮೂರು ಭಾಗಗಳು ಕಾಣುತ್ತವೆ – ಪದ್ಯ, ಗದ್ಯ ಮತ್ತು ಅಂಕಿ. ಈ ಅಂಕಿ ಅಂಶಗಳ ವಿಭಾಗವು ಕರ್ನಾಟಕಕ್ಕಾಗಿರುವ ಅನ್ಯಾಯಗಳ ಬಗ್ಗೆ ನಮ್ಮ ಜ್ಞಾನವನ್ನು ಹೆಚ್ಚಿಸಿದರೂ, ಮನಸ್ಸಿನಲ್ಲಿ ರೊಚ್ಚು ಮೂಡಿಸಿ, ರಕ್ತದೊತ್ತಡ ಹೆಚ್ಚಿಸಿ ಅನಾರೋಗ್ಯವನ್ನೂ ತರುತ್ತದೆ! ರೈಲ್ವೆ ಅನ್ಯಾಯಗಳ ಬಗೆಗಿನ ವಿವರಗಳನ್ನು ನೋಡಿದರೆ, ನೈರುತ್ಯ ರೈಲ್ವೆ ಪ್ರಾರಂಭವಾದಾಗ ಮೂಡಿದ್ದ ಭರವಸೆಗಳು ಈಗಲೂ ಈಡೇರದೇ ಉಳಿದಿರುವುದನ್ನು ಕಂಡರೆ, ಈ ವೈಫಲ್ಯಕ್ಕೆ ಕೇವಲ ನಮ್ಮ ರಾಜಕಾರಣಿಗಳನ್ನಷ್ಟೇ ದೂರುವುದು ತಪ್ಪೇನೋ ಎನಿಸುತ್ತದೆ. ಇದಕ್ಕೆ ಜನಸಾಮಾನ್ಯರಾದ ನಾವೂ ಅಷ್ಟೇ ಕಾರಣರೆಂಬ ಭಾವನೆಯನ್ನು ಈ ಭಾಗವು ಮೂಡಿಸುತ್ತದೆ. ಕೆಳಗಿನ ಸ್ವಾರಸ್ಯಕರ ಅಂಕಿ - ಅಂಶಗಳನ್ನು ಗಮನಿಸಿ :

| | |
|---|---|
| ಕರ್ನಾಟಕದಲ್ಲಿ ಕನ್ನಡ ಭಾಷಿಕರ ಸಂಖ್ಯೆ | ಶೇ. ೬೬.೨೨ |
| ಬೆಳಗಾವಿ ಜಿಲ್ಲೆಯಲ್ಲಿ ಕನ್ನಡ ಭಾಷಿಕರ ಸಂಖ್ಯೆ | ಶೇ. ೬೭.೦೪ |
| ಬೆಂಗಳೂರು ಜಿಲ್ಲೆಯಲ್ಲಿ ಕನ್ನಡ ಭಾಷಿಕರ ಸಂಖ್ಯೆ | ಶೇ. ೪೮.೨೨ |
| ಮಂಡ್ಯ ಜಿಲ್ಲೆಯಲ್ಲಿ ಕನ್ನಡ ಭಾಷಿಕರ ಸಂಖ್ಯೆ | ಶೇ. ೯೧.೩೪ |
| ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕನ್ನಡ ಭಾಷಿಕರ ಸಂಖ್ಯೆ | ಶೇ. ೨೨.೯೨ |

ಇದರೊಂದಿಗೆ ಬೆಳಗಾವಿ ಹಾಗೂ ಬೆಂಗಳೂರು ನಗರಗಳಲ್ಲಿನ ಕನ್ನಡ ಭಾಷಿಕರ ಶೇಕಡವಾರು ಸಂಖ್ಯೆಯನ್ನು ನೀಡಿದ್ದರೆ ನಿದ್ರಿಸುತ್ತಿರುವ ಕನ್ನಡಿಗರಿಗೆ ಚುರುಕು ಮುಟ್ಟಿಸಿದಂತಾಗುತ್ತಿತ್ತು.

| | |
|---|---|
| ವಿಸ್ತೀರ್ಣದಲ್ಲಿ ಕರ್ನಾಟಕವು ಭಾರತದ | ಶೇ. ೫.೮ರಷ್ಟಿದೆ |
| ಜನಸಂಖ್ಯೆಯಲ್ಲಿ ಕರ್ನಾಟಕವು ಭಾರತದ | ಶೇ. ೫.೩ರಷ್ಟಿದೆ |
| ಯೋಜನಾ ವೆಚ್ಚದಲ್ಲಿ ಕರ್ನಾಟಕದ್ದು ಭಾರತದ | ಶೇ. ೨.೮ರಷ್ಟಿದೆ |
| ಸಾರಿಗೆ/ಸಂಪರ್ಕ ವೆಚ್ಚದಲ್ಲಿ ಕರ್ನಾಟಕದ್ದು ಭಾರತದ | ಶೇ. ೦.೬ ರಷ್ಟಿದೆ |

ಭಾರತ ಸರ್ಕಾರದಿಂದ ಕರ್ನಾಟಕಕ್ಕೆ ಆಗುತ್ತಿರುವ ಅನ್ಯಾದ ಪ್ರಮಾಣವು ಗೋಚರಿಸುತ್ತಿದೆಯೆ ? ಇಂತಹ ಅನ್ಯಾಯಗಳನ್ನು ಸಹಿಸಿಕೊಂಡು ಕರ್ನಾಟಕವು ಭಾರತ ಗಣರಾಜ್ಯದಲ್ಲಿ ಉಳಿಯಬೇಕೆ ? ಇತ್ತೀಚಿನ ಪ್ರವಾಹ ಪರಿಹಾರ ಹಂಚಿಕೆ, ಗಡಿ ವಿಚಾರದಲ್ಲಿ ತಾರತಮ್ಯ ಇವೆಲ್ಲದರಲ್ಲಿ ಕರ್ನಾಟಕಕ್ಕೇ ಪ್ರತಿಸಲವೂ ಏಕೆ ಅನ್ಯಾಯವಾಗುತ್ತಿದೆ ? ಎಂಬ ಯಕ್ಷಪ್ರಶ್ನೆಗಳನ್ನು ಈ ಮೂರನೇ ಭಾಗವು ಧುತ್ತೆಂದು ಎದುರು ನಿಲ್ಲಿಸುತ್ತದೆ.

ಇಷ್ಟಾದರೂ ಈ ಪುಸ್ತಕದಲ್ಲಿ ಇನ್ನಷ್ಟು ವಿವರಗಳಿರಬೇಕಿತ್ತೆನ್ನಿಸುತ್ತದೆ. ಕೆಳಗಿನ ಪ್ರಶ್ನೆಗಳನ್ನು ಗಮನಿಸಿ :

– ಕೇಂದ್ರ ಲೋಕಸೇವಾ ಆಯೋಗ ಮತ್ತು ಕರ್ನಾಟಕ ಲೋಕಸೇವಾ ಆಯೋಗದ ವಿಳಾಸವೇನು ?

– ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಿಗೆ ಜನಸಾಮಾನ್ಯರು ದೂರು ನೀಡುವುದು ಹೇಗೆ ?

– ಕನ್ನಡ ಚಿತ್ರರಂಗದ ಬಗ್ಗೆ ಏಕೆ ವಿವರಗಳಿಲ್ಲ?

ಪುಸ್ತಕದ ನಾಲ್ಕನೆಯ ಮುದ್ರಣದಲ್ಲಿ ಈ ನ್ಯೂನತೆಗಳು ಸರಿಹೋಗಲಿ ಎಂದು ಹಾರೈಸೋಣವೆ ?

ಬಾ.ಹ. ಉಪೇಂದ್ರ
ಎಫ್. ಬಿ. ೨೭, ಎಚ್. ಎ. ಎಲ್. [illegible] ವಿಮಾನಪುರ
ಬೆಂಗಳೂರು - ೫೬೦ ೦೧೭

ಕೈಯಲ್ಲಿ ಒಂದು ಭಾರೀ ಗಾತ್ರದ ಫೈಲನ್ನು ಹಿಡಿದು ಕೊಂಡು ಹೊಸದಾಗಿ ಕೊಟ್ಟ ಸಮವಸ್ತ್ರ ಧರಿಸಿದ ಇನ್‌ಸ್ಪೆಕ್ಟರ್ ಕಾರ್ತಿಕ್ ಪೇಟೆಯ ಮಧ್ಯಭಾಗದಲ್ಲಿ ಗಾಂಭೀರ್ಯದಿಂದ ಚಲಿಸುತ್ತಿದ್ದ. ಅವನ ಹಿಂಭಾಗದಲ್ಲಿ ತಲೆಯ ಮೇಲೆ ಸೇಬುಹಣ್ಣಿನ ಬುಟ್ಟಿಯನ್ನು ಹೊತ್ತು ಕೊಂಡು ಪೇದೆ ರಂಗನಾಥ ತುಂಬಾ ವಿಧೇಯನಾಗಿ ಅವನನ್ನು ಹಿಂಬಾಲಿಸುತ್ತಿದ್ದ.

ಪ್ರಶಾಂತವಾದ ವಾತಾವರಣ. ಪೇಟೆಯಲ್ಲೆಲ್ಲೂ ಒಬ್ಬ ವ್ಯಕ್ತಿಯ ಸುಳಿವೂ ಕಾಣಸಿಗುವಂತಿರಲಿಲ್ಲ. ಅಲ್ಲೊಂದು ಇಲ್ಲೊಂದು ಹೋಟೆಲುಗಳ ಹಾಗೂ ಅಂಗಡಿಗಳ ತೆರೆದ ಬಾಗಿಲುಗಳು ಒಂದು ತೆರನಾದ ಭಯಾನಕ ವಾತಾವರಣವನ್ನು ಸೃಷ್ಟಿಸುತ್ತಿದ್ದವು. ಅಲ್ಲಿ ಭಿಕ್ಷುಕರ ಸುಳಿವು ಕೂಡ ಕಾಣುವಂತಿರಲಿಲ್ಲ. ಇದ್ದಕ್ಕಿದ್ದಂತೆ ಕಾರ್ತಿಕನ ಕಿವಿಗೆ ಎಲ್ಲಿಂದಲೋ ಒಬ್ಬ ವ್ಯಕ್ತಿಯು ಕೂಗಿಕೊಳ್ಳುತ್ತಿರುವ ಶಬ್ದವು ಬಂದು ಅಪ್ಪಳಿಸಿತು.

''ಏನು ? ಕಚ್ಚುತ್ತೀಯಾ ? ಎಲ್ಲಿ ಇನ್ನೊಮ್ಮೆ ಕಚ್ಚು ನೋಡುವ, ಏ! ನಾಯಿ! ಮಕ್ಕಳೇ, ಅದನ್ನು ಓಡಲು ಬಿಡಬೇಡಿ ಹಿಡಿದುಕೊಳ್ಳಿ. ಈ ರೀತಿ ನಾಯಿ ಕಂಡ ಕಂಡವರನ್ನೆಲ್ಲಾ ಕಚ್ಚುವುದಕ್ಕೆ ಕಾನೂನಿನಲ್ಲಿ ಅವಕಾಶವಿಲ್ಲ.''

ಅದರ ಜೊತೆಯಲ್ಲಿಯೇ ಒಂದು ನಾಯಿಯ ಬೊಗಳುವಿಕೆಯೂ ಕೇಳಿಬಂತು. ಕಾರ್ತಿಕ ಆ ದಿಕ್ಕಿನತ್ತ ತಿರುಗಿನೋಡಿದ.

ಅಮೀರನ ಕಟ್ಟಿಗೆ ಅಂಗಡಿಯಿಂದ ಒಂದು ನಾಯಿ ಓಡಿಬರುತ್ತಿದೆ. ಬಣ್ಣಬಣ್ಣದ ಅಂಗಿಯನ್ನು ತೊಟ್ಟ ಓರ್ವ ವ್ಯಕ್ತಿ ಅದನ್ನು ಬೆನ್ನಟ್ಟಿಕೊಂಡು ಬರುತ್ತಿದ್ದಾನೆ. ಅವನು ಗಡಗಡ ನಡುಗುತ್ತಿದ್ದಾನೆ. ಓಡಿ ಬಂದವನೇ ಮುಂದಕ್ಕೆ ಹಾರಿ ನಾಯಿಮರಿಯ ಹಿಂದಿನ ಕಾಲುಗಳನ್ನು ಹಿಡಿಯುತ್ತಾನೆ. ಅದರ ಜೊತೆಯಲ್ಲಿ ಅವನೂ ಕೂಡ ಮುಗ್ಗರಿಸಿ ಬೀಳುತ್ತಾನೆ. ನಾಯಿಮರಿ ಮತ್ತೊಮ್ಮೆ ಕಿರುಚುತ್ತದೆ. ಅವನು ಮತ್ತೆ ಕೂಗುತ್ತಾನೆ.

''ಅದನ್ನು ತಪ್ಪಿಸಿಕೊಳ್ಳಲು ಬಿಡಬೇಡಿ.''

ಇಷ್ಟು ಹೊತ್ತಿಗೆ ನಿದ್ದೆಯ ಮಂಪಿನಲ್ಲಿದ್ದ ಬೀದಿಯ ಮನೆಗಳಲ್ಲಿನ ಮಂದಿಯೆಲ್ಲಾ ಒಬ್ಬೊಬ್ಬರಾಗಿ ಹೊರಕ್ಕೆ ಬರುತ್ತಾರೆ. ಕೆಲವೇ ಕ್ಷಣಗಳಲ್ಲಿ ಭೂಗರ್ಭದಿಂದ ಹೊರಕ್ಕೆ ಚಿಮ್ಮಿತೋ ಎಂಬಂತೆ ಕಟ್ಟಿಗೆ ಅಂಗಡಿಯ ಮುಂಭಾಗದಲ್ಲಿ ಒಂದು ದೊಡ್ಡ ಗುಂಪೇ ಸೇರಿತು.

''ಸಾರ್ವಜನಿಕ ಹಿತಕ್ಕೆ ಭಂಗವಾಗುತ್ತಿದೆ, ಸ್ವಾಮಿ'' ಪೇದೆ ರಂಗನಾಥ ಇನ್‌ಸ್ಪೆಕ್ಟರ್ ಕಾರ್ತಿಕ್‌ಗೆ ಜ್ಞಾಪಿಸಿದ.

ಕಾರ್ತಿಕನ ದೃಷ್ಟಿ ನೆರೆದಿದ್ದ ಮಂದಿಯತ್ತ ತಿರುಗಿತು. ಕಟ್ಟಿಗೆ ಅಂಗಡಿಯ ಎದುರು ಭಾಗದಲ್ಲಿ ಓರ್ವ ವ್ಯಕ್ತಿ ರಂಗುರಂಗಾದ ಬಟ್ಟೆ ತೊಟ್ಟು ತನ್ನೆರಡು ಕೈಗಳನ್ನು ಮೇಲಕ್ಕೆತ್ತಿ ರಕ್ತ ಸುರಿಯುತ್ತಿರುವ ಬೆರಳುಗಳನ್ನು ಜನರಿಗೆ ತೋರಿಸುತ್ತಿದ್ದ. ಅವನ ಮುಖದ ಮೇಲೆ ''ನಿನಗೆ ಸರಿಯಾದ ಶಾಸ್ತಿ ಮಾಡುತ್ತೇನೆ'' ಎಂದು ಬರೆದಂತೆ ಕಾಣಿಸುತ್ತಿತ್ತು. ಅವನ ಬೆರಳುಗಳು ಜಯದ ಸಂಕೇತದ ಬಾವುಟದಂತೆ ಗೋಚರಿಸುತ್ತಿದ್ದವು. ಆತನು ಆ ಊರಿನ ಹೆಸರಾಂತ ಸೊನೆಗಾರ ಮಂಜು ಎಂಬುದನ್ನು ನೋಡಿದ ತಕ್ಷಣವೇ ಕಾರ್ತಿಕ್ ಗುರುತಿಸಿದ. ಇವರೆಲ್ಲರ ಮಧ್ಯೆ ಒಂದು ಪುಟ್ಟ ನಾಯಿಮರಿ ತನ್ನೆರಡು ಹಿಂದಿನ ಕಾಲುಗಳಲ್ಲಿ ನಿಂತುಕೊಂಡು ಗಡಗಡ ನಡುಗುತ್ತಿತ್ತು. ಅದರ ಬಿಳಿದಾದ



# ಗೋಸುಂಬೆ

ವಿ. ಗಣೇಶ್

ಹಣೆಯಲ್ಲಿ ಒಂದು ಕಪ್ಪು ಚುಕ್ಕಿ ಮತ್ತು ಬೆನ್ನಿನಲ್ಲಿ ಒಂದು ಹಳದಿಯ ಪಟ್ಟಿ ಕಾಣಿಸುತ್ತಿತ್ತು. ಆ ಪುಟ್ಟ ನಾಯಿಮರಿ ಕಣ್ಣಲ್ಲಿ ನೀರು ಸುರಿಸುತ್ತಾ ಭಯ ಮತ್ತು ನೋವಿನಿಂದ ನಡುಗುತ್ತಿತ್ತು.

''ಏನದು ಗದ್ದಲ ?''

ಇನ್‌ಸ್ಪೆಕ್ಟರ್ ಕಾರ್ತಿಕ್ ತನ್ನ ಸಹಜವಾದ ದರ್ಪದಿಂದ ಘರ್ಜಿಸಿದ.

''ಏಯ್ ನೀನೇನು ಮಾಡುತ್ತಿರುವಿ ? ನಿನ್ನ ಕೈ ಬೆರಳುಗಳನ್ನೇಕೆ ಎತ್ತಿ ಹಿಡಿದಿರುವಿ ? ಈಗ ಇಲ್ಲಿ ಕೂಗಿದವರಾರು ?''

ಪರಿಸ್ಥಿತಿ ಬಿಗಡಾಯಿಸುತ್ತಿರುವುದನ್ನು ಅರಿತ ಮಂಜು ಮೃದುವಾದ ಧ್ವನಿಯಲ್ಲಿ, ''ಸ್ವಾಮೀ, ಈ ಹಾದಿಯಲ್ಲಿ ನನ್ನಷ್ಟಕ್ಕೆ ನಾನು ನಡೆದುಕೊಂಡು ಬರುತ್ತಿದ್ದೆ. ಈ ಕಟ್ಟಿಗೆ ಅಂಗಡಿಯಲ್ಲಿ ನನ್ನದು ಸ್ವಲ್ಪ ವ್ಯವಹಾರವಿತ್ತು. ಈ ನಾಯಿಮರಿ ಎಲ್ಲಿತ್ತೊ ಏನೋ ಇದ್ದಕ್ಕಿದ್ದಂತೆ ಹಾರಿ ನನ್ನ ಕೈ ಬೆರಳುಗಳನ್ನು ಕಡಿಯಿತು. ನಾನು ಪ್ರತಿದಿನ ದುಡಿದು ತಿನ್ನುವ ಶ್ರಮಜೀವಿ, ನನ್ನದು ಅತ್ಯಂತ ಕ್ಲಿಷ್ಟಕರವಾದ ಉದ್ಯೋಗ. ಅಂತಹುದರಲ್ಲಿ ಈ ನಾಯಿಮರಿ ನನ್ನನ್ನು ಕಚ್ಚಿ ಕೆಲಸ ಮಾಡದಿರುವಂತೆ ಮಾಡಿದೆ. ನಾನು ಬಹುಶಃ ಇನ್ನೂ ಒಂದು ವಾರದ ಕಾಲ ಕೆಲಸ ಮಾಡುವಂತಿಲ್ಲ. ಆದುದರಿಂದ ಇದರ ಯಜಮಾನನಿಂದ ನನಗೆ ಸೂಕ್ತ ಪರಿಹಾರವನ್ನು ಕೊಡಿಸಿ. ನಿಯಮದ ಪ್ರಕಾರ ಇಂತಹ ಪ್ರಾಣಿಗಳನ್ನು ಸಾರ್ವಜನಿಕ ಸ್ಥಳಗಳಲ್ಲಿ ಬಿಡಬಾರದು. ಪ್ರತಿಯೊಂದು ಪ್ರಾಣಿಯೂ ಹೀಗೆ ಕಡಿಯುತ್ತಾಹೋದರೆ ನಮ್ಮಂಥವರು ಬದುಕುವುದಾದರೂ ಹೇಗೆ ?...''

ಕಣ್ಣಾಲಿಗಳನ್ನು ಅತ್ತಿಂದಿತ್ತ ತಿರುಗಿಸುತ್ತಾ ಈ ಸಮಸ್ಯೆಗೊಂದು ಪರಿಹಾರವನ್ನು ಸೂಚಿಸುವವನಂತೆ ಕಾರ್ತಿಕ್ ನುಡಿದ, ''ಯಾರಲ್ಲಿ, ಈ ನಾಯಿ ಯಾರಿಗೆ ಸೇರಿದೆ ? ಏಕೆ ಹೀಗೆ ಬೀದಿಯಲ್ಲಿ ಬಿಟ್ಟಿರುವುದು ? ನಾನು ಈ ವಿಷಯವನ್ನು ಇಲ್ಲಿಗೇ ಬಿಡುವುದಿಲ್ಲ. ಕಾನೂನನ್ನು ಪಾಲಿಸದೇ ಇರುವವರಿಗೆ ಸರಿಯಾಗಿ ಪಾಠ ಕಲಿಸುತ್ತೇನೆ. ಆ ಸ್ಕೌಂಡ್ರಲ್‌ನನ್ನು ಎಳೆದುಕೊಂಡು ಬನ್ನಿ. ಈ ರೀತಿ ನಾಯಿಗಳನ್ನು ಬೀದಿಗೆ ಬಿಡುವುದು ಎಂತಹ ಅಪರಾಧ ಎಂಬುದನ್ನು ತೋರಿಸುತ್ತೇನೆ.''

ಪೇದೆ ರಂಗನಾಥ್ ಕಡೆಗೆ ದೃಷ್ಟಿ ಹಾಯಿಸುತ್ತಾ ಕಾರ್ತಿಕ್ ಅಬ್ಬರಿಸಿದ, ''ಈ ನಾಯಿಮರಿ ಯಾರದೆಂದು ವಿಚಾರಿಸಿ ತಿಳಿ. ಅವನ ಬಗ್ಗೆ ತಕ್ಷಣವೇ ಒಂದು ದೂರನ್ನು ದಾಖಲಿಸು. ಈ ನಾಯಿಮರಿಯನ್ನು ಕೊಲ್ಲುವ ವ್ಯವಸ್ಥೆ ಮಾಡು. ಸ್ವಲ್ಪವೂ ತಡಮಾಡಬೇಡ. ಬಹುಶಃ ಇದು ಹುಚ್ಚುನಾಯಿ ಇರಬೇಕು. ನಿಮ್ಮಲ್ಲಿ ಯಾರಿಗಾದರೂ

ಗೊತ್ತಿದ್ದರೆ ತಿಳಿಸಿ. ಇದು ಯಾರ ನಾಯಿಮರಿ ?''

ಗುಂಪಿನ ಮಧ್ಯದಿಂದ ಒಬ್ಬ ವ್ಯಕ್ತಿ ನುಡಿದ, ''ಸ್ವಾಮೀ, ಅದು ಜನರಲ್ ದಿಲೀಪ್ ಸಿಂಗ್‌ರವರ ನಾಯಿ.''

''ಏನಂದಿರಿ ! ಇದು ದಿಲೀಪ್ ಸಿಂಗ್‌ರವರ ನಾಯಿಯೋ ? ಅಬ್ಬಾ ! ಅಬ್ಬಾ ! ಎಂತಹ ಸೆಖೆಯಪ್ಪ. ರಂಗನಾಥ್ ಎಲ್ಲಿ ಈ ಕೋಟನ್ನು ಸ್ವಲ್ಪ ಬಿಚ್ಚು. ತುಂಬಾ ಬೆವರುತ್ತಿದೆ. ಬಹುಶಃ ಈ ದಿನ ಮಳೆ ಬರಬಹುದು.''

ಹೀಗೆ ಹೇಳುತ್ತಾ ಅವನು ಮಂಜುವಿನ ಕಡೆಗೆ ತಿರುಗಿ, ''ಏನು ಬೊಗಳಿದಿ ? ಈ ನಾಯಿ ನಿನ್ನ ಬೆರಳನ್ನು ಕಚ್ಚಿತ್ತೇ ? ಅದು ಹೇಗೆ ಸಾಧ್ಯ ? ನಿನ್ನ ಬೆರಳು ಈ ಪುಟ್ಟ ಮರಿಗೆ ಎಟಕುವುದಾದರೂ ಹೇಗೆ ? ಅದು ಪುಟಾಣಿ ಮರಿ. ನೀನಾದರೋ ಒಂಟೆಯ ಹಾಗೆ ಎತ್ತರವಾಗಿ ಬೆಳೆದಿದ್ದೀಯಾ. ನೀನೇ ಮೊಳೆಯಿಂದಲೋ, ಮುಳ್ಳಿನಿಂದಲೋ ನಿನ್ನ ಬೆರಳನ್ನು ಗೀರಿಕೊಂಡು ಈಗ ಈ ನಾಯಿಯ ಯಜಮಾನ ದಂಡ ತೆರಬೇಕೆಂದು ಕೇಳುತ್ತಿದ್ದೀಯಾ ? ಎಂತಹಾ ಜನಗಳಯ್ಯಾ ನೀವು ?''

''ಕುಚೇಷ್ಟೆಗಾಗಿ ಅವನು ತನ್ನ ಸಿಗರೇಟಿನ ತುದಿಯಿಂದ ಅದರ ಮೂಗಿನ ತುದಿಯನ್ನು ಸುಟ್ಟಿದ್ದಾನೆ, ಸ್ವಾಮಿ. ಸಹಜವಾಗಿ ಆ ಪುಟ್ಟ ಮರಿ ಅವನ ಬೆರಳನ್ನು ಕಚ್ಚಿದೆ ಅಷ್ಟೆ. ಇಲ್ಲದಿದ್ದರೆ ಅದು ಯಾಕೆ ತಾನೇ ಇವನನ್ನು ಕಚ್ಚುತ್ತಿತ್ತು ? ಈ ಮಂಜುವಿನ ಸ್ವಭಾವವೇ ಹಾಗೆ. ಏನಾದರೂ ತರಲೆ ಮಾಡುತ್ತಿರುತ್ತಾನೆ.'' ಜನಗಳ ಮಧ್ಯದಿಂದ ಮತ್ತೊಬ್ಬ ವ್ಯಕ್ತಿ ನುಡಿದ.

''ಸುಳ್ಳು ಸುಳ್ಳು ಬೊಗಳೆ ಬಿಡಬೇಡ ಒಕ್ಕಣ್ಣ. ಸುಡುತ್ತಿರುವುದನ್ನು ನೀನೇನಾದರೂ ನೋಡಿರುವೆಯಾ ? ಯಾರು ಸುಳ್ಳು ಹೇಳುತ್ತಾರೆ, ಯಾರು ನಿಜ ಹೇಳುತ್ತಾರೆ ಎಂಬ ವಿಷಯ ಸಾಹೇಬರಿಗೆ ಗೊತ್ತಿದೆ. ನಾನೇನಾದರೂ ಸುಳ್ಳು ಹೇಳುತ್ತಿದ್ದರೆ ಆ ಭಗವಂತನು ನನಗೆ ಶಿಕ್ಷೆಯನ್ನು ಕೊಡಲಿ. ಕಾನೂನಿನ ದೃಷ್ಟಿಯಲ್ಲಿ ಎಲ್ಲರೂ ಸಮಾನರು. ನನ್ನ ಸೋದರನೊಬ್ಬನೂ ಪೊಲೀಸ್ ಇಲಾಖೆಯಲ್ಲಿದ್ದಾನೆ. ಬೇಕಾದರೆ ಅವನ ಹೆಸರನ್ನು...''

''ಸುಮ್ಮನೇ ವಾದಿಸಬೇಡ.''

''ಅದು ಜನರಲ್ ದಿಲೀಪ್ ಸಿಂಗ್‌ರವರ ನಾಯಿಯಲ್ಲ'' ಪೇದೆ ರಂಗನಾಥ ಖಡಾಖಂಡಿತವಾಗಿ ನುಡಿದ. ''ಜನರಲ್‌ರವರ ಹತ್ತಿರ ಇಂತಹ ನಾಯಿಗಳೇ ಇಲ್ಲ. ಅವರ ಹತ್ತಿರವಿರುವ ನಾಯಿಗಳೆಲ್ಲಾ ಕೇವಲ ಪಾಯಿಂಟರ್‌ಗಳು.''

''ನಿನಗೆ ಖಾತ್ರಿಯಾಗಿ ಗೊತ್ತಿದೆಯಲ್ಲವೇ ?''

''ಖಂಡಿತವಾಗಿಯೂ ಗೊತ್ತಿದೆ.''

''ನೀನು ಹೇಳುವುದು ಸರಿ. ಜನರಲ್‌ರವರ ಹತ್ತಿರವಿರುವ ಎಲ್ಲಾ ನಾಯಿಗಳೂ ತುಂಬಾ ಬೆಲೆಬಾಳುವ ಜಾತಿ ನಾಯಿಗಳು. ಈ ನಾಯಿಯನ್ನು ನೋಡು ಥೂ ! ಎಷ್ಟೊಂದು ಕೊಳಕಾಗಿದೆ. ಹೊಲಸು ನಾಯಿ. ಇಂತಹ ನಾಯಿಗಳನ್ನು ಯಾಕೆ ಸಾಕಬೇಕು. ಕೇವಲ ಹುಚ್ಚುತನ ಅಷ್ಟೆ. ಫ್ರಾನ್ಸ್, ಇಂಗ್ಲೆಂಡ್ ಮುಂತಾದ ಕಡೆಗಳಲ್ಲಿ ಇಂತಹ ನಾಯಿಗಳೇನಾದರೂ ಬೀದಿಯಲ್ಲಿ ಕಾಣಿಸಿದರೆ ಮುಗಿಯಿತು. ಅವುಗಳನ್ನು ಅಲ್ಲೇ ಹೊಡೆದು ಸಾಯಿಸುತ್ತಾರೆ. ಯಾರೂ ನಿಯಮಗಳ ಉಲ್ಲಂಘನೆ ಎಂದು ಭಾವಿಸುವುದಿಲ್ಲ. ಮಂಜು ಅವರೆ, ನಿಮಗೆ ನಿಜವಾಗಿಯೂ ತೊಂದರೆಯಾಗಿದೆ. ನಮಗೆ ಅರ್ಥವಾಗುತ್ತದೆ. ಯೋಚಿಸಬೇಡಿ. ನಾವು ಇದನ್ನು ಇಲ್ಲಿಗೇ ಬಿಡುವುದಿಲ್ಲ. ಇದರ ಯಜಮಾನ ಯಾರೇ ಇರಲಿ. ಅವನಿಗೆ ಸರಿಯಾಗಿ ಬುದ್ಧಿ ಕಲಿಸೋಣ.''

''ಇದು ಜನರಲ್ ದಿಲೀಪ್ ಸಿಂಗ್‌ರವರ ನಾಯಿಯೆಂದೇ ಕಾಣಿಸುತ್ತದೆ. ನಾನು ಒಮ್ಮೆ ಅವರ ಮನೆಗೆ ಹೋದಾಗ ಅವರ ಮನೆಯ ಜಗಲಿಯ ಮೂಲೆಯಲ್ಲಿ ಇಂತಹುದೇ ಒಂದು ನಾಯಿಮರಿಯನ್ನು ನೋಡಿದ್ದೆ. ಇದು ಅವರದೇ ನಾಯಿ. ಅನುಮಾನವೇ ಇಲ್ಲ'' ಪೇದೆ ರಂಗನಾಥ ತನ್ನ ನೆನಪಿನಾಳವನ್ನು ಕೆದಕುತ್ತಾ ಹೇಳಿದ.

''ಹೌದು. ಇದು ಅವರದೇ ನಾಯಿ. ನನಗೆ ಚೆನ್ನಾಗಿ ಪರಿಚಯವಿದೆ.'' ಜನಗಳ ಮಧ್ಯದಿಂದ ಮತ್ತೊಂದು ವ್ಯಕ್ತಿ ಧ್ವನಿಗೂಡಿಸಿತು.

''ಸೆಖೆ ತುಂಬಾ ಜಾಸ್ತಿಯಾಗುತ್ತಿದೆ. ರಂಗನಾಥ ಎಲ್ಲಿ ಈ ಕೋಟನ್ನು ಸ್ವಲ್ಪ ತೆಗೆಯುವಿಯಾ ? ತುಂಬಾ ಗಾಳಿ ಬೀಸುತ್ತಿದೆ. ನಾನಂತೂ ನಡುಗುತ್ತಿದ್ದೇನೆ'' ಎನ್ನುತ್ತಾ ಕಾರ್ತಿಕ್ ತನ್ನ ಕೋಟನ್ನು ಬಿಚ್ಚಿ ರಂಗನಾಥನ ಕಡೆ ಕೊಡುತ್ತಾನೆ.

''ಈ ನಾಯಿಮರಿಯನ್ನು ಎತ್ತಿಕೊಂಡು ಹೋಗಿ ಜನರಲ್ ದಿಲೀಪ್ ಸಿಂಗ್‌ರವರಿಗೆ ತಲುಪಿಸು. ಅವರ ಹತ್ತಿರ ನಾನೇ ಕಳುಹಿಸಿರುವುದಾಗಿ ತಿಳಿಸು. ಇಂತಹ ಮುದ್ದುಮರಿಗಳನ್ನು ಹೀಗೆ ಬೀದಿಗೆ ಬಿಡುವುದು ಒಳ್ಳೆಯದಲ್ಲ ಎಂದು ತಿಳಿಸು. ಬಹುಶಃ ಇದು ತುಂಬಾ ಬೆಲೆಬಾಳುವ ಮರಿ ಇರಬೇಕು. ಇಂತಹ ಕಿಡಿಗೇಡಿಗಳ ಕೈಗೆ ಸಿಕ್ಕಿದರೆ ನಾಶವಾಗಿ ಬಿಡುತ್ತವೆ. ನಾಯಿಗಳು ತುಂಬಾ ಸೂಕ್ಷ್ಮವಾದ ಪ್ರಾಣಿಗಳು.''

''ಏಯ್ ತಲೆಹರಟೆ, ನಿನ್ನ ಕೈಗಳನ್ನು ಕೆಳಕ್ಕೆ ಇಳಿಸಯ್ಯಾ ! ಏನು ನನ್ನ ಹತ್ತಿರ ಆಟವಾಡುತ್ತಿರುವೆಯಾ ? ತಪ್ಪು ನಿನ್ನದೇ ಆಗಿರುವಾಗ ಆ ನಾಯಿಮರಿಯ ಮೇಲೆ ತಪ್ಪು ಹೊರಿಸುವೆಯಾ ? ರಾಸ್ಕಲ್, ಒದ್ದುಬಿಡುತ್ತೇನೆ ನೋಡು.''

ಇಷ್ಟು ಹೊತ್ತಿಗೆ ಜನರಲ್ ಮನೆಯ ಅಡಿಗೆಯವನು ಅತ್ತ ಕಡೆ ಬರುತ್ತಾನೆ. ಗುಂಪಿನಲ್ಲಿ ಒಬ್ಬ ವ್ಯಕ್ತಿ, ''ಸ್ವಾಮೀ, ಇದು ನಿಮ್ಮ ಮನೆಯ ನಾಯಿಮರಿಯೇ ? ಸ್ವಲ್ಪ ಬಂದು ನೋಡಿ.''

''ನೋಡುವ ಪ್ರಶ್ನೆಯೇ ಇಲ್ಲ. ನಮ್ಮ ಮನೆಯಲ್ಲಿ ಈ ಜಾತಿಯ ನಾಯಿಮರಿಗಳನ್ನು ಸಾಕುವುದೇ ಇಲ್ಲ...''

ಅವನು ಇನ್ನೂ ಮಾತನ್ನೇ ಮುಗಿಸಿರಲಿಲ್ಲ. ಅಷ್ಟರಲ್ಲೇ ಇನ್‌ಸ್ಪೆಕ್ಟರ್ ಕಾರ್ತಿಕ್, ''ಇನ್ನು ವಿಚಾರಿಸುವ ಅಗತ್ಯವೇ ಇಲ್ಲ. ಇದೊಂದು ಬೀದಿ ನಾಯಿ. ಈ ಬಗ್ಗೆ ನಾವೇಕೆ ಇಷ್ಟೊಂದು ದೀರ್ಘವಾಗಿ ಚರ್ಚಿಸಬೇಕು. ನಾನಾಗಲೇ ತೀರ್ಮಾನಿಸಿದ್ದೇನೆ. ಇದೊಂದು ಬೀದಿನಾಯಿ ಎಂದಮೇಲೆ ಮುಗಿಯಿತು. ತಕ್ಷಣವೇ ಅದನ್ನು ಮುಗಿಸಿಬಿಡು.''

''ಅದು ನಮ್ಮ ನಾಯಿಯಲ್ಲ'', ಅಡುಗೆಯವ ಮುಂದುವರಿಸಿದ, ''ಆದರೆ ಅದು ನಮ್ಮ ಜನರಲ್‌ರವರ ತಮ್ಮನ ನಾಯಿ. ಅವರು ಎರಡು ದಿನಗಳ ಹಿಂದೆ ನಮ್ಮ ಮನೆಗೆ ಬಂದಿದ್ದರು. ಬರುವಾಗ ಈ ನಾಯಿಮರಿಯನ್ನು ಕರೆತಂದಿದ್ದರು. ನಮ್ಮ ಯಜಮಾನರಿಗೆ ಬೂರ್ಜ್ವಾ ನಾಯಿಗಳ ಬಗ್ಗೆ ಆಸಕ್ತಿ ಇಲ್ಲ. ಆದರೆ ಅವರ ತಮ್ಮನಿಗೆ ತುಂಬಾ ಇಷ್ಟ.''

''ಹೌದಾ ! ಬಲವೀರ್ ಸಿಂಗ್‌ರವರು ಬಂದಿದ್ದಾರೆಯೇ ? ತುಂಬಾ ಸಂತೋಷ ತುಂಬಾ ಸಂತೋಷ !'' ಕಾರ್ತಿಕನ ಮುಖದ ಮೇಲೆ ನಗುವಿನ ಅಲೆ ತೇಲಿಬಂತು. ''ಯಾವಾಗ ಬಂದರು ? ಅಣ್ಣನ ಜೊತೆಯಲ್ಲಿ ಎರಡು ದಿನ ಕಾಲ ಕಳೆಯೋಣ ಎಂದು ಬಂದಿರುವರೇ ?''

''ನಿಜ ನಿಜ !''

''ಅಣ್ಣನನ್ನು ನೋಡಲು ಬಂದಿದ್ದಾರೆ. ಹಾಗಾದರೆ ಇದು ಅವರ ನಾಯಿಮರಿ. ತೆಗೆದುಕೊಳ್ಳಿ. ಎಷ್ಟೊಂದು ಮುದ್ದಾದ ಮರಿ. ಅರೇ ! ಬೆರಳನ್ನು ಕಚ್ಚಿದೆಯಾ ? ...ಹ ! ಹ ! ಹ ! ನಡುಗ ಬೇಡವಪ್ಪ ! ನೋಡು ನೋಡು ಹೇಗೆ ಗುರುಗುಟ್ಟುತ್ತಿದೆ. ಅದರ ಕೋಪ ನೋಡು. ಆಹಾ ! ಆ ಕೋಪದಲ್ಲೂ ಎಷ್ಟೊಂದು ಮುದ್ದಾಗಿ ಕಾಣುತ್ತಿದೆ !''

ಅಡಿಗೆಯವನು ನಾಯಿಮರಿಯನ್ನು ''ಬಾ ! ಬಾ !'' ಎಂದು ಕರೆದ ತಕ್ಷಣ ಅವರ ಹಿಂದೆಯೇ ಹೊರಟಿತು. ನೆರೆದಿದ್ದ ಮಂದಿಯೆಲ್ಲಾ ತಲೆತಗ್ಗಿಸಿ ನಿಂತಿದ್ದ ಮಂಜುವನ್ನು ನೋಡಿ ಮುಸಿ ಮುಸಿ ನಕ್ಕರು.

''ನಿನ್ನನ್ನು ಎಳೆದುಕೊಂಡು ಹೋಗಿ ಒಳಕ್ಕೆ ಹಾಕಿಬಿಡುತ್ತೇನೆ. ಹುಷಾರ್ !'' ಕಾರ್ತಿಕ್ ಮಂಜುವಿನತ್ತ ನೋಡುತ್ತಾ ಘರ್ಜಿಸಿದ. ಪೇದೆ ರಂಗನಾಥನಿಂದ ತನ್ನ ಕೋಟನ್ನು ಎಳೆದುಕೊಂಡು ಇನ್‌ಸ್ಪೆಕ್ಟರ್ ಕಾರ್ತಿಕ್ ಬಿರಿ ಬಿರಿ ಹೆಜ್ಜೆ ಹಾಕಿದ.

---

ಮೂಲ : ಆ್ಯಂಟನ್ ಚೆಕಾವ್ ಅವರ 'ಕೆಮಿಲಿಯನ್'

ಕನ್ನಡಕ್ಕೆ : **ವಿ. ಗಣೇಶ್**
ಪ್ರಾಂಶುಪಾಲರು, ವನಶ್ರೀ ಪಿ.ಯು. ಕಾಲೇಜ್, ಸಾಗರ

## ನಮನ



**ಶಹನಾಯ್ ಮಾಂತ್ರಿಕ ಬಿಸ್ಮಿಲ್ಲಾ ಖಾನ್**
(೧೯೧೬ - ೨೦೦೬)

ಮದುವೆ ದೇವಾಲಯಗಳಿಗೆ ಮಾತ್ರ ಸೀಮಿತಗೊಂಡಿದ್ದ ಶಹನಾಯ್ ವಾದ್ಯವನ್ನು ಉನ್ನತಮಟ್ಟದ ಶಾಸ್ತ್ರೀಯ ಸಂಗೀತಕ್ಕೆ ಅಳವಡಿಸಿ, ಹಿಂದೂಸ್ತಾನಿ ಸಂಗೀತ ಕ್ಷೇತ್ರದಲ್ಲಿ ಅದಕ್ಕೊಂದು ಶಾಶ್ವತವಾದ ಸ್ಥಾನ ಕಲ್ಪಿಸಿಕೊಟ್ಟ ಕೀರ್ತಿ ಬಿಸ್ಮಿಲ್ಲಾ ಖಾನ್ ಅವರದು. ಅವರ ಬದುಕಿನಲ್ಲಿ ಸಂಗೀತ ಕಲೆ ಮತ್ತು ವೈಯಕ್ತಿಕ ಮೌಲ್ಯಗಳು ಸುಲಲಿತವಾಗಿ ಮೇಳೈಸಿಕೊಂಡಿದ್ದವು. ಅತ್ಯಂತ ಸರಳ ಶೈಲಿಯಲ್ಲಿ ಬದುಕಿಹೋದ ಈ ಅದ್ವಿತೀಯ ಕಲಾವಿದನಿಗೆ ಭಾರತರತ್ನದಂತಹ ಅನೇಕ ಸನ್ಮಾನಗಳನ್ನು ನೀಡಿ ರಾಷ್ಟ್ರ ಗೌರವಿಸಿದೆ. ದೇಶವಿದೇಶಗಳಲ್ಲಿ ತನ್ನ ಅದ್ವಿತೀಯ ಕಲಾಕೌಶಲ್ಯದಿಂದ ಹಿಂದೂಸ್ತಾನಿ ಸಂಗೀತದ ಒಂದು ವಿಶಿಷ್ಟ ಪರಂಪರೆಯನ್ನೇ ಸೃಷ್ಟಿಸಿದ ಬಿಸ್ಮಿಲ್ಲಾ ಖಾನ್ ನಮ್ಮನ್ನಗಲಿದ್ದಾರೆ.

ದಿವಂಗತರಿಗೆ '**ಹೊಸತು**' ಗೌರವ ಸೂಚಿಸುತ್ತದೆ.

# ಮಾಧ್ಯಮಗಳೇ, ನೀವಿತ್ತ ನೋಡಬಾರದೇ ?



ವಿದರ್ಭ ವಲಯದಲ್ಲಿ ಕೃಷಿಕರ ಆತ್ಮಹತ್ಯೆ ಪ್ರಕರಣಗಳ ಸಂಖ್ಯೆ ಕಳೆದ ವಾರದ ವೇಳೆಗೆ ನಾನೂರರ ಗಡಿ ದಾಟಿದೆ. ಈ ಆತ್ಮಹತ್ಯೆಗಳೆಲ್ಲವೂ ಕಳೆದ ಜೂನ್ ತಿಂಗಳಿಂದೀಚೆಗಷ್ಟೇ ನಡೆದಿವೆ. ೨೦೦೧ರಿಂದಾದ ಅಂಕಿ-ಅಂಶಗಳನ್ನು ತೆಗೆದುಕೊಂಡರೆ ಇದು ಸಾವಿರ ಸಂಖ್ಯೆಯನ್ನು ಮೀರುತ್ತದೆ. 'ವಿದರ್ಭ ಜನ ಆಂದೋಲನ ಸಮಿತಿ' ಹೇಳುವಂತೆ ಈ ವಲಯದಲ್ಲಿ ಆತ್ಮಹತ್ಯೆಗೆ ಶರಣಾಗುತ್ತಿರುವ ರೈತರ ಸಂಖ್ಯೆ ದಿನವೊಂದಕ್ಕೆ ಸರಾಸರಿ ಮೂರರಷ್ಟಿದೆ. ಈ ಪ್ರಮಾಣ ಹೆಚ್ಚುತ್ತಲೇ ಸಾಗಿದೆ. ಉದಾಹರಣೆಗೆ, ಆತ್ಮಹತ್ಯೆ ಸೂಚಿ ನಾನೂರನ್ನು ಮುಟ್ಟುವ ಮೊದಲಿನ ೧೩ ದಿನಗಳಲ್ಲಿ ೪೦ ಜನ ಕೃಷಿಕರು ಅಲ್ಲಿ ಜೀವ ಕಳೆದುಕೊಂಡಿದ್ದಾರೆ. ಇವರೆಲ್ಲರ ಈ ಸಾವಿಗೆ ನಿಸರ್ಗದತ್ತವೆನಿಸಿದ ಯಾವ ಗಂಭೀರ ಅಂಶಗಳಾಗಲೀ, ವ್ಯಕ್ತಿಗತ ಲೋಲುಪತೆಯ ಪರಿಣಾಮವಾಗಲೀ ಕಾರಣವಾಗಿಲ್ಲ. ಆದರೆ ಮಾನವ ನಿರ್ಮಿತ ಕರಾಳ ವ್ಯವಸ್ಥೆಯೊಂದು ಕೃಷಿಕರ ಬದುಕಿನ ಬಯಲಲ್ಲಿ ಕಾರ್ಗತ್ತಲನ್ನೇ ಸೃಷ್ಟಿಸಿ ಅವರಿಗೆ ಭವಿಷ್ಯದ ದಾರಿಯೇ ಕಾಣದಾದಾಗ ಆತ್ಮಹತ್ಯೆಗೆ ಶರಣಾಗಲು ಅನುವು ಮಾಡಿದ ಈ ವ್ಯವಸ್ಥೆ ನಡೆಸಿದ ಮತ್ತು ನಡೆಸುತ್ತಿರುವ ಮಾರಣಹೋಮವೇ ಇದಾಗಿದೆ. ಕೃಷಿಕರ ಬದುಕಿನಲ್ಲಿ ವ್ಯವಸ್ಥೆ ಬಿಂಬಿಸಿದ ಕಾರ್ಗತ್ತಲು ತೋರಿದ ರೂಪಗಳು ವಿಭಿನ್ನ. ಕೃಷಿಗಾಗಿ ಮಾಡಿದ ಸಾಲದ ಹೊಂಡಕ್ಕೆ ಬಿದ್ದು ಮೇಲೇಳಲಾರದ ರೈತರ ಅಸಹಾಯಕತೆ, ಕೃಷಿ ಆದಾನಗಳ ಗಗನಕ್ಕೇರುತ್ತಿರುವ ಬೆಲೆ, ಉತ್ಪಾದಿಸಿದ ಕೃಷಿ ಉತ್ಪನ್ನಗಳ ಕುಸಿದ ಪೇಟೆ, ಇದರಿಂದ ಉಂಟಾದ ಭ್ರಮನಿರಸನ, ಭವಿಷ್ಯದ ನಿರೀಕ್ಷೆಯೇ ಇಲ್ಲದ ದಾರುಣ ಸ್ಥಿತಿ. ಇವೆಲ್ಲಕ್ಕೂ ಕಾರಣವಾದ ವ್ಯವಸ್ಥೆಯ ಷಡ್ಯಂತ್ರ, ದಂತದರಮನೆಯಲ್ಲಿನ ದಿವಾನಖಾನೆಯಲ್ಲಿ ಕುಳಿತು ಸರ್ವ ತಿರಸ್ಕಾರದ ನೀತಿಗಳನ್ನು ರೂಪಿಸಿದ ನಿರೂಪಕರು, ಅವುಗಳನ್ನು ಅನುಷ್ಠಾನಕ್ಕೆ ತರಲು ತುದಿಗಾಲಲ್ಲಿ ನಿಂತ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು.

ಇದು ವಿದರ್ಭದ ಪ್ರದೇಶದಲ್ಲಿನ ಕೃಷಿಕರ ದಯನೀಯ ಪರಿಸ್ಥಿತಿ ಮಾತ್ರವಲ್ಲ, ದೇಶದ ಮೂಲೆ ಮೂಲೆಗಳಲ್ಲಿರುವ ಅನ್ನದಾತರ ಬೆನ್ನುಮೂಳೆಯನ್ನು ಸದ್ದಿಲ್ಲದೆ ಸಾಮೂಹಿಕವಾಗಿ ಮುರಿಯುತ್ತಿರುವ ವ್ಯವಸ್ಥೆಯ ವಿಕಟ ವಿಕೃತ ಪರಿಸ್ಥಿತಿ. ವರ್ಷಪೂರ್ತಿ ನಿರೀಕ್ಷೆಯಿಂದ ಕಾಯ್ದು ರಕ್ಷಿಸಿ ಸಿಟಿ ಮಾರುಕಟ್ಟೆಗೆ ತಂದ ರುಚಿಕಟ್ಟಾದ ಮಾವಿನಹಣ್ಣನ್ನು ಬೆಲೆ ಸಿಗದೆ, ಹಡಬೆ ದನಗಳಿಗೆ ಉಣಬಡಿಸಿದ ಶ್ರೀನಿವಾಸಪುರ ಕೃಷಿಕರ ಗೋಳು ಒಂದು ತೆರನಾದರೆ, ಆಲೂಗೆಡ್ಡೆಯನ್ನು ಬೆಳೆದ ಹಾಸನದ ಕೃಷಿಕರು ಬೆಲೆ ಸಿಗದೆ ಬೀದಿಗೆ ಚೆಲ್ಲಿದ ಅವರ ಸಂಕಟ ಮತ್ತೊಂದು ರೀತಿಯದು. ಮೂಟೆಗಟ್ಟಲೆ ಸೌತೇಕಾಯಿಯನ್ನು ಬೀದಿಯಲ್ಲಿ ಚೆಲ್ಲಿದ ಹೊಳೆನರಸೀಪುರದ ರೈತರ ಸಾತ್ವಿಕ ಆಕ್ರೋಶ ಒಂದೆಡೆಯಾದರೆ, ಬೆಳೆದ ಟೊಮಾಟೋವನ್ನು ಬುಟ್ಟಿಗಟ್ಟಲೆ ಉಚಿತವಾಗಿ ಹಂಚಿದ ಮಂಡ್ಯದ ಮಣ್ಣಿನ ಮಕ್ಕಳ ಗೋಳು ಮತ್ತೊಂದು ತೆರನದ್ದು. ಬೆಳೆದ ಬದನೇಕಾಯಿಯನ್ನು ಮಾರುಕಟ್ಟೆಗೆ ತಂದು ವೆಚ್ಚವನ್ನು ಸರಿದೂಗಿಸದ ಬೆಲೆಗೆ ಕೇಳಿದಾಗ ಬದನೇಕಾಯಿಯನ್ನೇ ಬೀದಿಗೆ ಚೆಲ್ಲಿದ ಚಿತ್ರದುರ್ಗ, ದಾವಣಗೆರೆ ಹಾಗೂ ಬಳ್ಳಾರಿ ರೈತರ ಒಡಲುರಿಯು ಅದಿನ್ನೆಂತಹದು ?!

ಈ ಕ್ರೂರ ಸಂಗತಿಗಳು ವ್ಯವಸ್ಥೆಯ ಯಾವೊಂದು ಸ್ತರದಲ್ಲೂ ನಿರೀಕ್ಷಿಸಿದ ಸಂವೇದನೆಯನ್ನು ಉಂಟುಮಾಡಲೇ ಇಲ್ಲವೆಂದರೆ ಅದೆಂತಹ ವ್ಯಂಗ್ಯ ! ಮಾಧ್ಯಮಗಳು ಈ ಬಗೆಗೆ ಪ್ರಾಸಂಗಿಕವಾಗಿಯಷ್ಟೇ ಹೇಳಿ ಸುಮ್ಮನಾದವಷ್ಟೇ ಹೊರತು, ಸಮಸ್ಯೆಯ ಆಳಕ್ಕಿಳಿದು ಪರಿಶೋಧಿಸಿ ಪರಿಹಾರದ ಬೆಳಕೊಂದನ್ನು ಅನ್ವೇಷಿಸಲಿಲ್ಲ. ದೃಶ್ಯ ಮಾಧ್ಯಮಗಳು ತಾವು ಅನೂಚಾನವಾಗಿ ಬಿತ್ತರಿಸುತ್ತಾ ಬಂದಿರುವ ನಂಗಾ ನಾಚ್‌ನಂತಹ ಧಾರಾವಾಹಿಗಳ ಸಂತೆಯೊಳಗೆ ತಮಾಷೆಗೆ ಎನ್ನುವಂತೆ ಈ ಸಂಗತಿಯನ್ನು ತೋರಿಸಿ ಕೈತೊಳೆದುಕೊಂಡವು. ಸರ್ಕಾರದ ನೇತಾರರು ಸಹ ಇವೆಲ್ಲವೂ ಸಹಜವೇನೋ ಎನ್ನುವಂತೆ ಮೊಸಳೆ ಕಣ್ಣೀರು ಸುರಿಸಿ ಬತ್ತಳಿಕೆಯಲ್ಲಿದ್ದ ಭರವಸೆಗಳ ಸುರಿಮಳೆಗೈದು ಮಗುಮ್ಮಾಗಿ ಉಳಿದರು. ಇವರೆಲ್ಲರ ಈ ವರ್ತನೆಗೆ ಇಲ್ಲೊಂದು ಉದಾಹರಣೆ. ಈಗಾಗಲೇ ಸಂಗತಿಗಳು ಜಗಜ್ಜಾಹೀರಾಗಿದ್ದರೂ, ಕಡತಗಳಲ್ಲಿ ದಾಖಲೆಗೊಂಡಿದ್ದರೂ ಅಧ್ಯಯನಕ್ಕೆಂದು ಕೇಂದ್ರ ಮತ್ತು ರಾಜ್ಯ ಸರ್ಕಾರಗಳೆರಡೂ ಪೈಪೋಟಿಯ ಮೇಲೆ ಆಯೋಗಗಳನ್ನು ರಚಿಸಿ ವಿದರ್ಭಕ್ಕೆ ಕಳುಹಿಸುತ್ತಿವೆ. ಕಳೆದ ಅಕ್ಟೋಬರ್‌ನಲ್ಲಿಯೇ 'ರಾಷ್ಟ್ರೀಯ ಕೃಷಿಕರ ಆಯೋಗ' ವಿದರ್ಭಕ್ಕೆ ತೆರಳಿ ಸಮಗ್ರ ಅಧ್ಯಯನ ನಡೆಸಿ ಗಂಭೀರ ವರದಿಯನ್ನು ಮತ್ತು ಪರಿಹಾರಾತ್ಮಕ ಶಿಫಾರಸ್ಸುಗಳನ್ನು ಮಾಡಿದೆ. ಈ ಶಿಫಾರಸ್ಸುಗಳನ್ನೇ ನಾಸಿಕ್‌ನಲ್ಲಿ ಕಳೆದ ಜನವರಿಯಲ್ಲಿ ನಡೆದ ೨೦ ದಶಲಕ್ಷ ಸದಸ್ಯತ್ವ ಹೊಂದಿದ 'ಅಖಿಲ ಭಾರತ ಕಿಸಾನ್ ಸಭಾ' ತನ್ನ ಸಮಾವೇಶದಲ್ಲಿ ಕೃಷಿಕರ ಬೇಡಿಕೆಗಳೆಂದು ಒತ್ತಾಯಿಸಿದ್ದರೂ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಇತ್ತ ಗಮನಹರಿಸುತ್ತಿಲ್ಲ. ಹೀಗೆ ವ್ಯವಸ್ಥೆಯ ಎಲ್ಲಾ ಸ್ತರದವರ ಉದಾಸೀನತೆಯಿಂದ ರೈತ ಸಮುದಾಯದ ಕರುಳು ಬಿರಿಯುವ ಸಂಕಷ್ಟದ ಸಂಗತಿಗಳು ಜನಮಾನಸದಿಂದ ದೂರವಾಗುತ್ತಿವೆ. ಆ ಜಾಗದಲ್ಲಿ ಬಂಡವಾಳಶಾಹಿತ್ವ ಸೃಷ್ಟಿಸುತ್ತಿರುವ ಭ್ರಮೆಗಳೇ ರಾರಾಜಿಸುತ್ತಿವೆ.

**ಹೀಗೇಕೆ ?**

ಕೃಷಿಕರ ಕುರಿತು ಭಾರತೀಯ ವ್ಯವಸ್ಥೆ ಹೀಗೇಕೆ ಉದಾಸೀನತೆ ತಳೆಯುತ್ತಿದೆ ? ಕೃಷಿಯು ದೇಶದ ಖಾಸಗಿ ವಲಯದ ಬೃಹತ್ ಆಸ್ತಿಯೆಂದೇ! ದೇಶದ ಕೃಷಿಯ ಪ್ರತಿಯೊಂದು ನೀತಿ ಮತ್ತು ಪ್ರತಿ ಮುಂಗಡ ಪತ್ರಗಳು ಕೃಷಿಯನ್ನು ಬೃಹತ್ ಉದ್ಯಮಪತಿಗಳ ಮಡಿಲಿಗೆ ತಳ್ಳುತ್ತಿರುವ ಹಿನ್ನೆಲೆಯಲ್ಲಿಯ ಸೋಗಲಾಡಿತನವೇ ? ಇತ್ತೀಚೆಗೆ ಸರ್ಕಾರ ವಿದರ್ಭದಲ್ಲಿ

ಕೃಷಿಕರ ಬದುಕಿನಲ್ಲಿ ವ್ಯವಸ್ಥೆ ಬಿಂಬಿಸಿದ ಕಾರ್ಗತ್ತಲು ತೋರಿದ ರೂಪಗಳು ವಿಭಿನ್ನ. ಕೃಷಿಗಾಗಿ ಮಾಡಿದ ಸಾಲದ ಹೊಂಡಕ್ಕೆ ಬಿದ್ದು ಮೇಲೇಳಲಾರದ ರೈತರ ಅಸಹಾಯಕತೆ, ಕೃಷಿ ಆದಾನಗಳ ಗಗನಕ್ಕೇರುತ್ತಿರುವ ಬೆಲೆ, ಉತ್ಪಾದಿಸಿದ ಕೃಷಿ ಉತ್ಪನ್ನಗಳ ಕುಸಿದ ಪೇಟೆ, ಇದರಿಂದುಂಟಾದ ಭ್ರಮ ನಿರಸನ, ಭವಿಷ್ಯದ ನಿರೀಕ್ಷೆಯೇ ಇಲ್ಲದ ದಾರುಣ ಸ್ಥಿತಿ : ಇವೆಲ್ಲಕ್ಕೂ ಕಾರಣವಾದ ವ್ಯವಸ್ಥೆಯ ಷಡ್ಯಂತ್ರ, ದಂತದರಮನೆಯಲ್ಲಿನ ದಿವಾನಖಾನೆಯಲ್ಲಿ ಕುಳಿತು ಸರ್ವ ತಿರಸ್ಕಾರದ ನೀತಿಗಳನ್ನು ರೂಪಿಸಿದ ನಿರೂಪಕರು, ಅವುಗಳನ್ನು ಅನುಷ್ಠಾನಕ್ಕೆ ತರಲು ತುದಿಗಾಲಲ್ಲಿ ನಿಂತ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು.

**ಪ್ರೊ|| ಕೆ. ಸಿ. ಬಸಪ್ಪ**




ಒಂದು ಕ್ವಿಂಟಾಲ್ ಹತ್ತಿಯ ಕನಿಷ್ಠ ಬೆಲೆಯನ್ನು ೨೭೦೦ರೂ.ಗಳೆಂದು ನಿರ್ಧರಿಸಿದ್ದರೂ ಕೃಷಿಕರು ಕನಿಷ್ಠ ಬೆಲೆಗಿಂತ ಸಾವಿರ ರೂ.ಗಳು ಕಡಿಮೆ ಅಂದರೆ ಕ್ವಿಂಟಾಲ್ ಒಂದಕ್ಕೆ ೧೭೦೦ ರೂ. ಗಳನ್ನು ಮಾತ್ರ ಪಡೆಯುತ್ತಿದ್ದಾರೆ. ಈ ಹಗಲು ದರೋಡೆಗೆ ಯಾರೂ ಚಕಾರವೆತ್ತುತ್ತಿಲ್ಲ. ಬೃಹತ್ ಉದ್ಯಮ ಪತಿಗಳು ಕೃಷಿಕರ ಈ ದಯನೀಯ ಮಾರಾಟದ ಗರಿಷ್ಠ ಲಾಭವನ್ನು ಮಡಿಲಿಗೆ ತುಂಬಿಕೊಳ್ಳುತ್ತಿದ್ದಾರೆ. ಸಣ್ಣ ಹಿಡುವಳಿದಾರರು ಬೃಹತ್ ಉದ್ಯಮಗಳ ಲಾಭಗಳಿಕೆಗಾಗಿಯೇ ತ್ಯಾಗ ಮಾಡಬೇಕೆಂಬುದು ಇಲ್ಲಿನ ಇಂದಿನ ನಿಯಮವೇ ಆಗಿದೆ. ಇದು ಒಂದು ರೀತಿಯಲ್ಲಿ ಆಂಧ್ರಪ್ರದೇಶದ ಮಾಜಿ ಮುಖ್ಯಮಂತ್ರಿ ಚಂದ್ರಬಾಬು ನಾಯ್ಡು ಅವರಿಗೆ ರಚಿಸಿ ಅನುಮೋದಿಸುವಂತೆ ಮಾಡಿದ ಮೆಕೆನ್ಸೆ ಅವರ 'ವಿಷನ್ ೨೦೨೦'ರ ಅಭಿಪ್ರಾಯವನ್ನು ಪುರಸ್ಕರಿಸುವುದೇ ಆಗಿದೆ. ದಶಲಕ್ಷಗಳ ಸಂಖ್ಯೆಯಲ್ಲಿರುವ ಕೃಷಿಕರನ್ನು ಕೃಷಿಯಿಂದ ಒಕ್ಕಲೆಬ್ಬಿಸುವುದೇ ಇದರ ಪ್ರಧಾನ ಉದ್ದೇಶ. ಹೀಗಿರುವಾಗ ಚಂದ್ರಬಾಬು ನಾಯ್ಡು ನೀತಿಯನ್ನು ಕೇಂದ್ರ ಮತ್ತು ರಾಜ್ಯ ಸರ್ಕಾರಗಳೆರಡೂ ಅತಿ ಉತ್ಸಾಹದಿಂದ ಮುಂದುವರೆಸುತ್ತಾ ಸಾಗಿರುವುದು ಅದೆಷ್ಟರ ಮಟ್ಟಿಗೆ ಸರಿಯಾದೀತು ?

ಹೀಗೆ ಒಕ್ಕಲೆದ್ದ ಕೃಷಿಕರು ಎಲ್ಲಿಗೆ ಹೋಗಬೇಕು ? ಹೇಗೆ ಬದುಕಬೇಕು ? ಉದ್ಯೋಗರಹಿತ ಅದ್ಭುತ ಬೆಳವಣಿಗೆಯನ್ನು ಸಾಧಿಸುತ್ತಿರುವ ಹೆಗ್ಗಳಿಕೆಗೆ ಪಾತ್ರವಾಗಿರುವ ಈ ದೇಶದ ನಗರಗಳಿಗೆ ಧಾವಿಸಬೇಕೆ ? ಈ ನಗರಗಳೂ ಕೂಡ ಗಿರಣಿಗಳು ಮುಚ್ಚಿದ, ಕಾರ್ಖಾನೆಗಳು ತಲೆಯೆತ್ತದ ಸ್ಥಿತಿಯಲ್ಲಿಯೇ ಮಲಗಿವೆ. ಕೇವಲ ಐ.ಟಿ., ಬಿ.ಟಿ.ಗಳ ಹೆಸರಿನಲ್ಲಿ ಪಿಸುಮಾತಿನ ಕುಶಲಿಗಳಿಗಷ್ಟೇ ಹಾಸುಗಂಬಳಿ ಹಾಸುತ್ತಿವೆ. ಹೀಗಾಗಿಯೇ ಅಲ್ಲವೆ, ಭಾರತದ ಲಂಕಾಷೈರ್ ಎನಿಸಿದ್ದ ಗುಜರಾತಿನ ಅಹಮದಾಬಾದ್‌ನಲ್ಲಿ ಮುಚ್ಚಿದ ಗಿರಣಿಗಳಿಂದ ಲಕ್ಷಾಂತರ ಮಂದಿ ಅಕುಶಲ ಹಾಗೂ ಅರೆಕುಶಲಿಗಳಾದ ಕಾರ್ಮಿಕರು ಉದ್ಯೋಗವಿಲ್ಲದೆ ಬೀದಿಪಾಲಾಗಿದ್ದು, ಬದುಕಿಗಾಗಿ ಬೀದಿ ಗೂಂಡಾಗಳಾಗಿದ್ದು, ಗೋದ್ರಾ ಗಲಭೆಯಲ್ಲಿ ಸರ್ಕಾರದ ಅಧಿಕೃತ ಗೂಂಡಾಗಳೆನಿಸಿ ಮಾರಣಹೋಮ ನಡೆಸಿದ್ದು, ಬದುಕಿಗಾಗಿ ಅವರ ಪತ್ನಿಯರು ವೇಶ್ಯೆಯರಾಗಿ ಮಾರ್ಪಟ್ಟಿದ್ದು, ಇಂದು ಅವರ ಸಂಖ್ಯೆ ಈ ನಗರವೊಂದರಲ್ಲೇ ಅಧಿಕೃತವಾಗಿ ೧.೫ ಲಕ್ಷಗಳೆನಿಸಿದೆ. ಅಹಮದಾಬಾದ್ ಇಂದು ಏಷ್ಯಾದ ಬೃಹತ್ ವೇಶ್ಯಾಗೃಹವೆಂದು ಪರಿಗಣಿತವಾಗಿದೆ.

ಇದು ಕೇವಲ ಅಹಮದಾಬಾದ್ ಕುರಿತ ಕಥೆಯಲ್ಲ, ಉದ್ಯೋಗ ಅರಸಿ ನಗರಕ್ಕೆ ಆಗಮಿಸುತ್ತಿರುವ ಭಾರತದ ಎಲ್ಲಾ ಗ್ರಾಮೀಣರ ದುರಂತದ ಕಥೆ ಇದೇ ಆಗಿದೆ. ಅರೆ ಹೊಟ್ಟೆಗಾಗಿ ಸಿದ್ಧ ಉಡುಪುಗಳ ಕಾರ್ಖಾನೆಗಳಲ್ಲಿ ದುಡಿಯುತ್ತಿರುವ ಲಕ್ಷಾಂತರ ಮಹಿಳೆಯರು ನಡೆದಾಡುವ ಶವಗಳಾಗಿದ್ದಾರೆ. ಮೀನುಗಾರಿಕೆಯಲ್ಲಿ ನಿರತರಾಗಿರುವ ಮಂಗಳೂರಿನ ಹೆಂಗಳೆಯರು ರೋಗಗ್ರಸ್ತರಾಗಿದ್ದಾರೆ. ಪಿರಿಯಾಪಟ್ಟಣದ ಹೊಗೆಸೊಪ್ಪಿನ ಉದ್ಯಮಗಳಲ್ಲಿನ ಹಳ್ಳಿಯ ಹೆಣ್ಣುಮಕ್ಕಳು ಕಡಿಮೆ ಕೂಲಿ ಮತ್ತು ಅನಾರೋಗ್ಯ ಪರಿಸ್ಥಿತಿಯಲ್ಲಿ ದುಡಿಯುತ್ತಿರುವಾಗಲೇ ಎಂ.ಎನ್.ಸಿ.ಗಳಿಗೆ ಬಸಿರಾಗುತ್ತಿರುವ ಅಸಹನೀಯ ಘಟನೆಗಳ ಸರಣಿ ದಿನನಿತ್ಯದ ಕತೆಯಾಗುತ್ತಿದೆ.

ಇನ್ನು ಛಲದಂಕಮಲ್ಲರಂತೆ ಬದುಕಿಗಾಗಿ ಗ್ರಾಮಗಳಲ್ಲೇ ಉಳಿದವರ ಪಾಡು ಮತ್ತೂ ಅಸಹನೀಯ. ಸುಮಾರು ೫ ಸಾವಿರ ವರ್ಷಗಳಿಂದಲೂ ಇಲ್ಲಿನ ಪರಿಸರದೊಡನೆ ಅನನ್ಯತೆಯನ್ನು ಕಾಯ್ದುಕೊಳ್ಳುತ್ತ ಪರಿಸರವನ್ನು ರಕ್ಷಿಸುತ್ತಾ ಬಂದಿದ್ದಾರೆ. ಸಂಸ್ಕೃತಿಯನ್ನು ಉಳಿಸಿ ಬೆಳೆಸಿದ್ದ, ದೇಶದ ಸಮಗ್ರತೆಗೆ ಹೆಸರಾಗಿ ಜಾಗತಿಕ ಮಟ್ಟದಲ್ಲಿ ದೇಶಕ್ಕೊಂದು ಮೌಲ್ಯಾತ್ಮಕ ಆಧ್ಯಾತ್ಮಿಕ ನೆಲೆಯನ್ನು ಕರುಣಿಸಿ ತಮ್ಮೆಲ್ಲ ಇತಿಮಿತಿಗಳ ನಡುವೆಯೂ ನೆಮ್ಮದಿಯ ಬದುಕನ್ನು ಸಾಗಿಸುತ್ತಾ ಬಂದಿದ್ದ ಗ್ರಾಮೀಣರ ಬದುಕು ಜಾಗತೀಕರಣದ ರೂಪದಲ್ಲಿ ಭುಗಿಲೆದ್ದ ಬಿರುಗಾಳಿಗೆ ಸಿಕ್ಕಿ ತರಗೆಲೆಯಾಗಿದೆ, ಅತಂತ್ರತೆಗೆ ಗುರಿಯಾಗಿದೆ. ತಮ್ಮದೆಂಬುದೆಲ್ಲವನ್ನೂ ಅರಿವಿಲ್ಲದೆಯೇ ಬಂಡವಾಳಶಾಹಿಗಳಿಗೆ, ಅವರುಗಳ ತಂತ್ರಜ್ಞಾನದ ಭೂತಕ್ಕೆ ಒತ್ತೆ ಇಟ್ಟು, ಬರಿಗೈ ದಾಸರಾಗಿದ್ದಾರೆ. ಭವಿಷ್ಯದ ನಿರೀಕ್ಷೆಯೇ ಇಲ್ಲದೆ ಸಾವನ್ನು ತಬ್ಬಿಕೊಳ್ಳುವ ಹವಣಿಕೆಯಲ್ಲಿದ್ದಾರೆ. ಇದಕ್ಕೊಂದು ಸಣ್ಣ ಉದಾಹರಣೆ ಕೊಡಬಹುದಾದರೆ ಮೊನ್ನೆ ಮೊನ್ನೆಯಷ್ಟೇ ಭಾರತ ಸರ್ಕಾರದ ಬಹುನಿರೀಕ್ಷಿತ ಯೋಜನೆಯಾಗಿ ಜಾರಿಗೆ ಬಂದ 'ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಕಾರ್ಯಕ್ರಮ' ಆರಂಭಿಸಿದ ಒಂದು ವಾರದಲ್ಲಷ್ಟೇ ಆಂಧ್ರಪ್ರದೇಶದ ೧೩ ಜಿಲ್ಲೆಗಳಿಂದ ೨.೭ ದಶಲಕ್ಷ ಕೃಷಿಕರು ಉದ್ಯೋಗಕ್ಕಾಗಿ ಹೆಸರು ನೋಂದಾಯಿಸಿದ್ದರೆ, ಮಹಾರಾಷ್ಟ್ರದ ೧೨ ಜಿಲ್ಲೆಗಳಲ್ಲಿನ ಉದ್ಯೋಗಾಕಾಂಕ್ಷಿಗಳ ಸಂಖ್ಯೆ ದಶಲಕ್ಷವನ್ನು ಮೀರಿದೆಯೆಂದರೆ ಗ್ರಾಮೀಣ ಬದುಕಿನ ಕರಾಳತೆಯನ್ನು ಯಾರಾದರೂ ಊಹಿಸಬಹುದಲ್ಲವೇ ?

ಇವರುಗಳಿಗೆ ಸಿಗುವ ದಿನಕೂಲಿಯಾದರೂ ರೂ. ೬೦ ಮಾತ್ರ. ಆದಾಗ್ಯೂ ಇದರಲ್ಲಿ ಹೆಸರು ನೋಂದಾಯಿಸಿದವರು ಕೃಷಿ ಕಾರ್ಮಿಕರು ಮಾತ್ರವೇ ಅಲ್ಲ, ಸಣ್ಣ ಹಿಡುವಳಿದಾರರಷ್ಟೇ ಅಲ್ಲ, ಐದರಿಂದ ಆರು ಎಕರೆ ಜಮೀನು ಹೊಂದಿದ್ದವರು, ಒಂದು ಕಾಲದಲ್ಲಿ ಸಿರಿವಂತ ರೈತರೆನಿಸಿಕೊಂಡವರು ಇದರಲ್ಲಿದ್ದಾರೆ. ಏಳು ಎಕರೆ ನೀರಾವರಿ ಜಮೀನು ಹೊಂದಿದ್ದು ೧೦ ವರ್ಷಗಳ ಹಿಂದೆ ರಾಜಮರ್ಯಾದೆಯಿಂದ ಬದುಕುತ್ತಿದ್ದ ವಾರಂಗಲ್‌ನ ರೈತನೊಬ್ಬ ಇಂದು ತನ್ನ ಕುಟುಂಬದ ಐದು ಜನರ ಹೊಟ್ಟೆಪಾಡಿಗಾಗಿ ಉದ್ಯೋಗ ಖಾತ್ರಿ ಯೋಜನೆಯಲ್ಲಿ ಹೆಸರು ನೋಂದಾಯಿಸಿದ್ದಾನೆ ಎಂದ ಮೇಲೆ ಉಳಿದವರ ಪಾಡೇನು ? ಊಹಿಸಲಾದೀತೆ ?

ಇಷ್ಟೆಲ್ಲ ಹೀನಸ್ಥಿತಿಯಲ್ಲಿ ಈ ದೇಶದ ಮಣ್ಣಿನ ಮಕ್ಕಳು ಬದುಕುತ್ತಿದ್ದರೂ ಗ್ರಾಮಗಳೆಲ್ಲವೂ ಸ್ಮಶಾನಸದೃಶವಾಗುತ್ತಿದ್ದರೂ ಇಲ್ಲಿನವರು ಆತ್ಮಹತ್ಯೆಗೆ ಶರಣಾಗುತ್ತಿದ್ದರೂ ಪತ್ರಿಕೆಗಳಿಗಾಗಲಿ, ಮಾಧ್ಯಮದವರಿಗಾಗಲಿ ಇದೊಂದು ಸಂವೇದನಾತ್ಮಕ ಗಂಭೀರ ಸುದ್ದಿ ಎನಿಸುತ್ತಿಲ್ಲವೇ ? ಇಡೀ ದೇಶದ ಜನಪದರ ಬದುಕು ಆರ್ಥಿಕ ದುರಂತಕ್ಕೆ ಸಿಕ್ಕಿ ಕುಸಿಯುತ್ತಲಿದ್ದರೂ ಆ ಕಡೆಗೆ ಇವರ ಗಮನಹರಿಯದೇ ಕೇವಲ ಶೇಕಡ ೨ಕ್ಕೂ ಕಡಿಮೆ ಸಂಖ್ಯೆಯ ಜನರ ಬದುಕನ್ನು ರೂಪಿಸುತ್ತಿರುವ ಸೆನ್‌ಸೆಕ್ಸ್ ೧೧,೦೦೦ದ ಗಡಿ ದಾಟಿದುದೇ ಇವರಿಗೆ ಮಹಾನ್ ಸುದ್ದಿಯಾಗಬೇಕೆ ? ಅಮೆರಿಕಾದ ವಾಲ್ ಸ್ಟ್ರೀಟ್‌ಗೆ ಗ್ರಹಣ ಹಿಡಿಸಿದ ಭಾರತದ ಸ್ಟಾಕ್ ಎಕ್ಸ್‌ಛೇಂಜ್ ಪೇಟೆ ಎಂದು ಬಣ್ಣಿಸಿ ಬರೆಯುವ ಪತ್ರಿಕೆಯವರು ನಮ್ಮಲ್ಲಿ ಬಹಳ ಮಂದಿ ಇದ್ದಾರೆ. ಈ ಸುದ್ದಿಯನ್ನು ಅತಿ ಸುಂದರವಾಗಿ ಬಿಂಬಿಸುವ ದೃಶ್ಯಮಾಧ್ಯಮದವರು ಸಮುದಾಯ ಸಂವೇದಿಗಳಾಗಬಾರದೇಕೆ ? ಉಳ್ಳವರೇ ಕೂಡಿ ನಡೆಸಿದ ಇತ್ತೀಚಿನ ಲಕ್ಮೇ ಫ್ಯಾಷನ್ ವೀಕ್ ಎನ್ನುವ ಸಂತೆಗೆ ೫೦೦ ಜನ ಮಾಧ್ಯಮದವರು ವರದಿಗಾಗಿ ಹೋಗಿ ಪೈಪೋಟಿ ನಡೆಸಿದರು. ಇವರಲ್ಲಿನ ೧೦ ಭಾಗದಷ್ಟೇ ಮಂದಿ ವಿದರ್ಭಕ್ಕೆ ತೆರಳಿದ್ದರೆ, ಆಂಧ್ರಪ್ರದೇಶಕ್ಕೆ ನಡೆದಿದ್ದರೆ, ಕರ್ನಾಟಕ ಗ್ರಾಮೀಣ ನೆಲೆಯಲ್ಲಿ ಸುತ್ತಾಡಿದ್ದರೆ ಇನ್ನೂ ಅದೆಷ್ಟೋ ಕ್ರೂರ ಸತ್ಯಗಳನ್ನು ಹೊರ ತರಬಹುದಾಗಿತ್ತು. ದಂತದರಮನೆಯ ದಿವಾನಖಾನೆಯಲ್ಲಿ ಕುಳಿತು ನೀತಿಗಳನ್ನು ಮಾಡುವ ನಿಯಾಮಕರುಗಳಿಗೆ ಒಂದಿಷ್ಟು ಪ್ರಾಯೋಗಿಕ ಸತ್ಯದ ಅರಿವು ಮೂಡಿಸಬಹುದಿತ್ತು. ಇನ್ನಾದರೂ ನಾವು, ನೀವು, ನೀತಿನಿಯಾಮಕರು, ಆಳುವವರು ಇತ್ತ ಕಡೆ ದೃಷ್ಟಿಹಾಯಿಸಿ ಸಮುದಾಯ ಸಂವೇದಿಗಳಾಗಿ ಅನ್ನದಾತನು ನಮಗಿಟ್ಟ ಅನ್ನದ ಋಣ ತೀರಿಸಲು ಮುಂದಾಗಬೇಕು. ಐ.ಟಿ., ಬಿ.ಟಿ.ಗಳಿಗೆ, ಎಂ.ಎನ್.ಸಿ.ಗಳಿಗೆ, ಕಾರ್ಪೊರೇಟ್ ಉದ್ಯಮಪತಿಗಳಿಗೆ ದುಂಬಾಲುಬೀಳುತ್ತಿರುವ ಈ ದೇಶದ ವ್ಯವಸ್ಥೆ, ಸಂಕಷ್ಟದಲ್ಲಿ ಸಿಲುಕಿದ್ದರೂ ಗರಿಕೆಯ ಕುಡಿಯಂತೆ ಜೀವ ಉಳಿಸಿಕೊಂಡಿರುವ ಈ ದೇಶದ ಅನ್ನದಾತರಾದ ರೈತರ ಕಣ್ಣೀರು ಒರೆಸಲು ಮುಂದಾಗಲಾರದೆ ? ಮಾಧ್ಯಮಗಳೇ, ಇದೆಲ್ಲವನ್ನೂ ಆಗುಮಾಡಲು ನೀವೊಮ್ಮೆ ಇತ್ತ ನೋಡಬಾರದೇಕೆ ?

**ಪ್ರೊ|| ಕೆ. ಪಿ. ಬಸಪ್ಪ**
ಪ್ರಾಂಶುಪಾಲರು, ನವೋದಯ ಕಾಲೇಜು, ಚಿಕ್ಕನಾಯಕನಹಳ್ಳಿ, ತುಮಕೂರು ಜಿಲ್ಲೆ

**ಮೊ**ದಲು ನಾವು ಎಂಟೋ ಹತ್ತೋ ಮಂದಿ ಮಾತ್ರ ಇದ್ದದ್ದು. ಆಕ್ಟೋಪಸ್‌ನ ತೋಳುಗಳು ನಿಮಿರುತ್ತಿದ್ದಂತೆಯೇ ನಾವು ಒಂದು ಜನಸಮೂಹವೇ ಆದೆವು. ಕಣ್ಣು ಕುಕ್ಕುವಂಥ ಆ ದೃಶ್ಯವನ್ನು ಕಂಡು ನಾವು ಮೊದಲೊಮ್ಮೆ ತಬ್ಬಿಬ್ಬಾದದ್ದು ನಿಜ. ಸರಕ್ಕನೆ ಹಿಗ್ಗಿದ ನಮ್ಮ ಮನಸ್ಸಿನ ಕಟ್ಟುಗಳು ಸದ್ದೆಬ್ಬಿಸುತ್ತ ಸಿಡಿದವು. ಕಟ್ಟು ಕಳಚಿ ಚದುರಿದ ನಮ್ಮ ವಿಕಾರೋದ್ರೇಕಗಳು ನಮ್ಮಲ್ಲಿ ಒಂದಿಷ್ಟೂ ನಾಚಿಕೆಗೆ ಅವಕಾಶ ಕೊಡಲಿಲ್ಲ. ಮಾತ್ರವಲ್ಲ ಅವು ನಮ್ಮ ಪರಸ್ಪರ ಸಾಮೀಪ್ಯವನ್ನು ಮತ್ತಷ್ಟು ಬಿಗಿಗೊಳಿಸಿದವು. ಅಲ್ಲದಿದ್ದರೂ ನಾವು ನಮಗೇ ಪೀಡೆಯಾಗುವುದು ಏಕಾಂತದಲ್ಲಷ್ಟೆ ತಾನೆ ?

ಅಂತಹ ಪೀಡಿತರಷ್ಟೇ ಅಲ್ಲ ನಿಂದಿತರೂ ಹೌದು ನಾವು. ಬೆಳಗ್ಗಿನಿಂದ ಸಂಜೆಯ ತನಕ ಯಾವುದಾದರೂ ಗೋದಾಮಿನಲ್ಲಿ ಲೆಕ್ಕ ಬರೆಯುವುದಾಗಲಿ ಜಾಹೀರು ಕಂಪನಿಗಳಿಗೆ ಬಣ್ಣ ತುಂಬುವುದಾಗಲಿ ಫಯಲುಗಳನ್ನು ಪುಸ್ತಕಕೀಟದ ಹಾಗೆ ಕೊರೆಯುವುದಾಗಲಿ ಇನ್ನಿತರ ಯಾವುದನ್ನೇ ಆಗಲಿ ಮಾಡುತ್ತ ಇದ್ದು ಬಳಲಿ ಬೆಂಡಾಗಿ ಕತ್ತಲೆಯ ಹೆಗಲಿನಲ್ಲಿ ಮುಖ ಹುದುಗಿಸುತ್ತ ಮನೆ ಸೇರುವವರು ನಾವು.

ಹಗಲು ಕನಸಿನ ಭಾರಕ್ಕೆ ಬಗ್ಗಿಹೋದ ಮನೆಯೊಳಗೆ ನಮಗಾಗಿ ಕಾದಿರುತ್ತವೆ ಬೇಕುಗಳ ಉದ್ದನೆಯ ಯಾದಿ; ಬುರುಜು ಹಿಡಿದ ನೋಟ ಹಾಯಿಸುವ ನಮ್ಮ ಮಕ್ಕಳು; ಅಡುಗೆ ಕೋಣೆಯ ಘಾಟು, ಹಿಂಜಿರುವ ಹಳೇಸೀರೆ, ಕಂಕುಳಲ್ಲಿ ಬೆವರಿನ ನಕಾಶೆಯಿರುವ ಕುಪ್ಪಸ, ಹಳಸಿದ ಎಣ್ಣೆ ವಾಸನೆ ಹೊಡೆಯುವ ತುರುಬು ಗಂಟು ಮತ್ತು ಬಿದ್ದಮೊಲೆಗಳೂ ಸೊರಗಿದ ಸೊಂಟವೂ ಇರುವ ನಮ್ಮ ಹೆಂಡಂದಿರು. ಹೀಗೆ ವಾಕರಿಕೆ ಹುಟ್ಟಿಸುವ ಈ ಬದುಕಿನಿಂದ ನಾವು ಓಡಿಹೋಗಿ ಅವಿತುಕೊಳ್ಳುವುದಾದರೂ ಎಲ್ಲಿ? ಮಕ್ಕಳ ಉಚ್ಚೆಯಲ್ಲಿ ತೋಯ್ದು ಗಟ್ಟಿಗಟ್ಟಿರುವ ಹತ್ತಿಯ ಹಾಸಿಗೆಯ ವಾಸನೆಯಲ್ಲಿ ಅಡ್ಡಾಗುವಷ್ಟರಲ್ಲಿ ಹಗಲೆಲ್ಲ ಬಾವಲಿಯ ಹಾಗೆ ಕಣ್ಣ ರೆಪ್ಪೆಗಳಿಗೆ ಜೋತುಬಿದ್ದುಕೊಂಡು ತೂಕಡಿಸುತ್ತಿದ್ದ ನಿದ್ರೆ ರೆಕ್ಕೆ ಕೊಡವಿ ಹಾರುತ್ತ ದೂರವಾಗುತ್ತದೆ. ಅತ್ತಿತ್ತ ಹೊರಳಾಡುತ್ತ ನಿದ್ದೆಯ ಬೆನ್ನಟ್ಟಿ ಸೋತು ಹಿಂದಿರುಗುವ ನಾವು ರೊಚ್ಚಿನೊಂದಿಗೇ ನಮ್ಮ ಹೆಂಡಂದಿರನ್ನು ಭೋಗಿಸುತ್ತೇವೆ. ಬಳಿಕ ಸುತ್ತು ಹೊಡೆಯುತ್ತಾ ಯಾವುದೋ ಕತ್ತಲೆಯ ಸುಳಿಯಲ್ಲಿ ಕಂದುತ್ತೇವೆ. ಅಮೃತಶಿಲೆಯ ಅರಮನೆಯೂ ಅದರ ಒಳಕೋಣೆಗಳಲ್ಲಿ ನವನವೀನ ಸುಖಸಾಮಗ್ರಿಗಳೂ ಮೆದುಮೆತ್ತಗಿನ ಸುಪ್ಪತ್ತಿಗೆಯೂ ಅದರಲ್ಲಿ ಬಿಸಿಲು ತಾಗಿದರೆ ಕರಗಿಬಿಡುವ ಬೆಣ್ಣೆಯಂಥ ಒಂದು ಹೆಣ್ಣುಮೈಯೂ ಮುದ್ದುಗೊಂಬೆಗಳಂಥಾ ದಷ್ಟಪುಷ್ಟ ಮಕ್ಕಳೂ ನಮ್ಮ ಅಭಿಲಾಷೆಗಳಾಗಿವೆ. ಆದರೂ ಅದಕ್ಕೋಸುಗ ಯಾರದ್ದೇ ಆದರೂ ಕಾಲು ಕಡಿಯುವುದಾಗಲಿ ಕತ್ತು ಕತ್ತರಿಸುವುದಾಗಲಿ ಕರುಳಿರಿಯುವುದಾಗಲಿ ನಮಗೆ ಸಾಧ್ಯವಾಗದು. ಅತ್ಯುನ್ನತಗಳಲ್ಲಿ ಮಹತ್ವಪಡೆದವರು ನಮ್ಮ ಈ ಬಲಹೀನತೆಯ ಮೇಲೆಯೇ ತಮ್ಮ ಸ್ವರ್ಗಗಳನ್ನು ನಿರ್ಮಿಸುತ್ತಿರುವರು. ಬರಿಯ ಪ್ರೇಕ್ಷಕರು ನಾವು !

ಈ ಮೂವರು ಯುವಕರು ಕರಿಕುದುರೆಯ ಹಾಗೆ ದೌಡಾಯಿಸುತ್ತಿರುವ ತೆರದ ಜೀಪೊಂದರಲ್ಲಿ ನಗರದ ಎದೆಯನ್ನು ಒದ್ದು ಅರೆಯುತ್ತಾ ಧಾವಿಸುತ್ತಿರುವುದನ್ನೂ ಕೌಮಾರದ ಮೊಗ್ಗು ಮೂಡಿರುವ ಈ ಎಳೆಯಳು ಲವಲವಿಕೆಯ ನಗುವೊಂದರಿಂದ ತನ್ನ ನತದೃಷ್ಟವನ್ನು ಮರೆಮಾಡಿ ಇತರರಿಗೆ ಅದೃಷ್ಟವನ್ನು ಮಾರಲು ಓಡಾಡುತ್ತಿರುವುದನ್ನೂ ನಾವು ಎಷ್ಟು ಬಾರಿ ಕಂಡಿಲ್ಲ! ಸಾಯಾಹ್ನದ ಚಹಾದ ಬೆಚ್ಚಗಿನ ಖುಷಿಯನ್ನು ತ್ಯಜಿಸಿ ನಾವು ನಳ್ಳಿನೀರಿನ ಅಸಹಾಯಕತೆಯನ್ನು ಹೀರಿ ಒಂದೊಂದು ತಿಕೇಟು ಕೊಂಡುಕೊಂಡೆವು. ಆಮೇಲೆ ತಿರುಕನ ಕನಸುಗಳನ್ನು ಎದೆಯಲ್ಲಿ ತುಂಬಿಕೊಂಡು ಓಡಾಡುತ್ತಾ ಜೀವನದ ಕಹಿಯನ್ನು ಜಗಿದು ನುಂಗಬಹುದು, ತಾನೆ ? ಆದರೆ ಈಗ ಆತನ ತಲೆಯ ಮೇಲಿನ ಬುಟ್ಟಿಯ ಹಾಗೇ ಆಗಿಬಿಟ್ಟಳಲ್ಲ ಈ ಹೆಣ್ಣುಮಗಳು! ಹರಿದ ಕುಪ್ಪಸದೊಳಗಿಂದ ಹೊರನುಗ್ಗುತ್ತಿವೆ ಅವಳ ಮೊಲೆಚಿಗುರುಗಳು ! ಹಿಂಜಿದ ಲಂಗದೊಳಗೆ ಕಂಗೊಳಿಸುತ್ತಿವೆ ಅವಳ ಒಳತೊಡೆಗಳು !

ಕುದುರೆಯ ಮುಖವೂ ಜೂಲುಕೂದಲೂ ಹೊಂದಿರುವ ಒಂದನೆಯವನು ಚಿಪ್ಪೊಡೆದು ಮುತ್ತು ತೆಗೆಯುವಾಗ ಬೈರಿಗೆಯಂಥ ಒಂದು ಆಕ್ರಂದನ ಕೊರೆಯುತ್ತ ನಮ್ಮೊಳಗೆ ನುಗ್ಗುತ್ತದೆ. ಆಗ ರಣಕಹಳೆ ಕೇಳಿದ್ದರಿಂದ ಎಂಬಂತೆ ಆ ತನಕ ಕಂಡಿರದ ಕೆಲವು ಸತ್ವಗಳು ನಮ್ಮೊಳಗೆ ಎಚ್ಚರಗೊಂಡು



# ನಾವು ಪಾಪ ಮಾಡದವರು

ಮೂಲ ಮಲಯಾಳಂ : ಗ್ರೇಸಿ

ಅನುವಾದ : ಕೆ. ಕೆ. ನಾಯರ್

### ಗ್ರೇಸಿ

ಮೂವಾಟ್ಟುಪುಳದಲ್ಲಿ ಹುಟ್ಟಿದರು. ಮೊದಲ ಕಥಾ ಸಂಕಲನ 'ಪಡಿಯಿರಜಿಪೋಯ ಪಾರ್ವತಿ' (ಮೆಟ್ಟಿಲಿಳಿದು ಹೋದ ಪಾರ್ವತಿ) ೧೯೯೧ರಲ್ಲಿ ಪ್ರಕಟವಾಯಿತು. 'ನರಕವಾದಿಲ್' (ನರಕಬಾಗಿಲು), 'ರಂಡು ಸ್ವಪ್ನದರ್ಶಿಗಳ್' (ಎರಡು ಸ್ವಪ್ನದರ್ಶಿಗಳು), 'ಪನಿಕ್ಕಣ್ಣ್' (ಜ್ವರದ ಕಣ್ಣು) ಇತ್ಯಾದಿ ಇವರ ಕೃತಿಗಳು. ೧೯೯೫ರಲ್ಲಿ ಬರಹಗಾರ್ತಿಯರಿಗೆ ಮೀಸಲಾದ ಲಲಿತಾಂಬಿಕ ಅಂತರ್ಜನ ಸ್ಮಾರಕ ಪುರಸ್ಕಾರ ಸಿಕ್ಕಿತು. 'ಭ್ರಾಂತನ್ ಪೂಕ್ಕಳ್' (ಹುಚ್ಚು ಹೂಗಳು)ಗೆ ೧೯೯೭ರ ತೋಪ್ಪಿಲ್ ರವಿ ಸ್ಮಾರಕ ಪುರಸ್ಕಾರ ಪಡೆದರು. 'ರಂಡ್ ಸ್ವಪ್ನ ದರ್ಶಿಗಳ್'ಗೆ ೨೦೦೧ರ ಕೇರಳ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದರು. ಇಂಗ್ಲಿಷ್, ಹಿಂದಿ, ತಮಿಳು, ಒರಿಯಾ ಭಾಷೆಗಳಿಗೆ ಇವರ ಕಥೆಗಳು ರೂಪಾಂತರಗೊಂಡಿವೆ. ಆಯ್ದ ಹತ್ತೊಂಬತ್ತು ಕಥೆಗಳ ಸಂಕಲನ 'ಇಪ್ಪೋದು ಪನಿಕ್ಕಾಲಂ' ಎಂಬ ಹೆಸರಲ್ಲಿ ತಮಿಳಿನಲ್ಲಿ ಪ್ರಕಟಗೊಂಡಿದೆ. ಇವರು ಕಾಲೇಜು ಪ್ರಾಧ್ಯಾಪಕಿ.

ಗ್ರೇಸಿಯವರ 'ಒರೋತ' ಎಂಬ ಕತೆ ನವಕರ್ನಾಟಕ ಪ್ರಕಟಿಸಿರುವ 'ಮಲಯಾಳದ 10 ಕಥೆಗಾರ್ತಿಯರು' ಕೃತಿಯಲ್ಲಿ ಬೆಳಕು ಕಂಡಿದೆ.

ವಿಳಾಸ

ಸೌಪರ್ಣಿಕಾ, ಅಲುವ - ೬೮೩ ೧೦೨

ಮೈಮುರಿದು ವಿಜೃಂಭಿಸಿದವು! ಅವುಗಳ ಕ್ರೌರ್ಯ ಸೂಸುವ ಸರ್ಪದೃಷ್ಟಿಗೂ ಚೂಪು ಚೂಪಾದ ಕೋಡುಗಳ ಜೊನ್ನಹೊಳಪಿಗೂ ಮುಳ್ಳುರೋಮಗಳು ಸಿಕ್ಕುಗಟ್ಟಿದ ಬಾಲವೆಂಬ ತ್ರಿಶೂಲದ ಮೊನೆಗಳಿಗೂ ತಾಗಿ ನಾವು ಎಡವಿಬಿದ್ದೆವು. ಒಂದನೆಯವನ ಒಡಲಿನ ಹುಚ್ಚು ಚಲನೆಗಳಿಗೆ ಸಮನಾಗಿ ನಮ್ಮ ವಿಕಾರಗಳಷ್ಟೂ ಸರಕ್ಕನೆ ಎಚ್ಚೆತ್ತು ಸ್ಖಲಿಸಿ ಹರಿಯತೊಡಗಿತು. ನಗರದ ಒಣಹವೆಯಲ್ಲಿ ನಾದಿದ ಗೋಧಿಹಿಟ್ಟಿನ ಮಾದಕ ವಾಸನೆ ಹಬ್ಬಿತು.

ಬೋಳುಮಂಡೆ ಹಾಗೂ ಅಂಗಸಾಧಕನ ಒಡಲಿರುವ ಎರಡನೆಯವನು ಅವಳಲ್ಲಿ ಪ್ರವೇಶಿಸುವಾಗ ಗಾಳಿಹೊಕ್ಕ ಒಡಲಿನೊಂದಿಗೆ ಒಬ್ಬ ಹುಡುಗನು ಜನಸಮೂಹದ ಬೇಲಿ ನುಸುಳಿ ಏದುಸಿರುಬಿಡುತ್ತ ಎರಡನೆಯವನನ್ನು ಸಮೀಪಿಸಿದನು. ಗುಳಿಬಿದ್ದು ಕಳೆಗುಂದಿದ ಕಣ್ಣುಗಳೂ ಬಾಡಿದ ಬಳ್ಳಿಯ ಹಾಗೆ ಇಳಿಬಿದ್ದ ತೋಳುಗಳೂ ಮೂಳೆಗಳೆದ್ದು ಉಬ್ಬಿದ ಎದೆಯೂ ಇರುವ ಅವನು ಎರಡನೆಯವನ ದಪ್ಪಗಿನ ತೋಳನ್ನು ಹಿಡಿದು ಅಲುಗಾಡಿಸುತ್ತಾ ಅರಚಿದನು :

ಅವಳನ್ನು ಕೊಲ್ಲಬೇಡವೋ ಪಾಪೀ !

ಮಾಂಸಖಂಡಗಳು ಉಕ್ಕುತ್ತಿರುವ ಒಂದು ತೋಳು ಆಂತರಿಕದಲ್ಲಿ ಅರ್ಧವೃತ್ತವನ್ನು ಬರೆದಾಗ ಅವನು ದೂರಕ್ಕೆ ಎಗರಿದನು. ಹಳೆಯ ಬಟ್ಟೆಯ ಮೂಟೆಯಂತೆ ಆದ ಅವನನ್ನು ಬಿಟ್ಟು ನಾವು ಆತನ ಹಾಗೂ ಕಾಲುವೆಯಂತೆ ಹರಿಯುತ್ತಿರುವ ನೆತ್ತರಿನಲ್ಲಿ ನಿಶ್ಚಲ ಅಂಗಾತ ಬಿದ್ದುಕೊಂಡಿರುವ ಆ ಹೆಣ್ಣಿನಕಡೆಗೆ ವ್ಯಗ್ರತೆಯೊಂದಿಗೆ ಹಿಂದಿರುಗಿದೆವು.

ಅವನು ಒಂದು ಮುಲುಕಿನೊಂದಿಗೆ ಮೆಲ್ಲಗೆ ಎದ್ದುಬಂದು ನಮ್ಮ ಮುಂದೆ ಒಂದು ಮೌನ ಪ್ರಾರ್ಥನೆಯ ಹಾಗೆ ನಿಂದುಕೊಂಡನು. ಅವನ ಕಣ್ಣುಗಳ ದೈನ್ಯತೆಯಲ್ಲಿ ನಮ್ಮ ಪ್ರತಿಬಿಂಬವನ್ನೇ ಕಂಡರೂ ನಾವು ಅವನನ್ನು ನಿರ್ಲಕ್ಷಿಸಿದೆವು. ನೆತ್ತರೂ ಕಣ್ಣೀರೂ ರಂಗೋಲಿ ಬಿಡಿಸಿರುವ ಮೋರೆಯಿಂದ ಅವನು ರೋದಿಸಿದನು :

ಮಾಜನರೇ ಅವಳನ್ನು ಕಾಪಾಡಿರಿ ! ಅವಳ ಅಪ್ಪ ಬಹಳ ಹಿಂದೆಯೇ ಸತ್ತುಹೋದ. ಅಮ್ಮ ಚಾಪೆ ಹಿಡಿದಿದ್ದಾಳೆ. ಅವಳೇ ಹಿರಿಯವಳು. ನಾಲ್ಕೈದು ಕಿರಿಯ ಹೈಕಳು ಇದಾವೆ. ಅವಳನ್ನು ಈ ರಕ್ಕಸ್ರು ಕೊಲ್ಲೋ ಮೊದ್ಲು ಕಾಪಾಡ್ರೀ !

ನಾವು ಯಾರೂ ನಿಂತಲ್ಲಿಂದ ಕದಲುತ್ತಿಲ್ಲವೆಂದರಿತು ಅವನು ಒಬ್ಬ ಹುಚ್ಚನ ಹಾಗೆ ನಮ್ಮನ್ನು ದುರುಗುಟ್ಟಿ ನೋಡಿದನು. ತೆರೆದುಕೊಂಡಿರುವ ಬಾಯಲ್ಲಿ ಬೇರ್ಪಟ್ಟು ನಿಂತಿರುವ ಒಂಟಿಹಲ್ಲಿನ ಆಶ್ಚರ್ಯ ಚಿಹ್ನೆಯೊಂದಿಗೆ ಧಾವಿಸುತ್ತ ಹೋಗಿ ಎರಡನೆಯವನ ಬೆನ್ನಿಗೆ ಸರಸರನೆ ಗುದ್ದಿದನು. ಅವನ ಕಪ್ಪು ಮುಷ್ಟಿಗಳು ಎರಡನೆಯವನ ಬೆನ್ನಮೇಲೆ ಹಾರಾಡುತ್ತಿರುವ ಎರಡು ನೊಣಗಳಾದವು. ಅವನು ಆತನನ್ನು ಪರಚುತ್ತ ಕಚ್ಚುತ್ತ ಮಾಡತೊಡಗಿದಾಗ ಏದುಸಿರುಬಿಡುತ್ತ ಆತ ಎದ್ದು ನಿಂತ. ಮುಂದೆ ಏನು ಎಂಬ ಕಾತರದಿಂದ ಮಿಡುಕುತ್ತಿರುವ ನಮ್ಮ ಕಣ್ಣ ಮುಂದೆಯೇ ಅವನು ಒಂದು ಚೆಂಡಿನಹಾಗೆ ಎಗರಿ ಉರುಳಿದನು. ಚಲನೆಯಿಲ್ಲದೆ ಬಿದ್ದುಕೊಂಡಿರುವ ಅವನಿಗೆ ನಾವು ಅಪಹಾಸ್ಯದ ಹೊಸಬಟ್ಟೆ ಹೊದೆಸಿ ಮರಳಿದ್ದು ಕೆಂಚನೆ ಕೂದಲೂ ಬೆಕ್ಕಿನ ಕಣ್ಣೂ ಹೊಂದಿರುವ ಮೂರನೆಯವನು ಅವಳ ಮೇಲೆ ವಾಲುತ್ತಿರುವ ದೃಶ್ಯದ ಕಡೆಗೆ.

ಮಿಡುಕುತ್ತ, ಮಿಡುಕುತ್ತ ಮರಣದ ಚಿಪ್ಪನ್ನು ಒಡೆದುಬಂದ ಅವನು ನಮ್ಮ ನೋಟಕ್ಕೆ ಪುನಃ ಅಡ್ಡಿಯಾದನು. ಭೂಮಿಯ ಮೇಲೆ ಆಕಾಶದತ್ತ ನಿಮಿರಿದ ಒಂದು ಹೆಬ್ಬೆರಳಿನ ರೇಖಾ ಚಿಹ್ನೆಯಾಗಿ ಅವನು ಬಾಗಿದನು. ಗುಪ್ಪೆಯಾಗಿ ಬಿದ್ದುಕೊಂಡಿರುವ ಜಲ್ಲಿಕಲ್ಲುಗಳನ್ನು ಹೆಕ್ಕಿ ತೆಗೆದು ಎದೆ ತುಂಡಾದ ಒಂದು ಬಿಲ್ಲಿನ ಹಾಗೆ ನಿಮಿರುತ್ತಾ ಮೂರನೆಯವನಿಗೆ ಎಸೆಯುವಾಗ ಅವನು ಕೂಗಿ ಹೇಳಿದನು :

ಕೊಲ್ಲಿರಿ ! ಆ ಹುಚ್ಚುನಾಯಿಯನ್ನು ಕೊಲ್ಲಿರಿ ! ಅವಳನ್ನು ಕಾಪಾಡಿರಿ !

ನೆತ್ತರಿನಲ್ಲಿ ಮಿಂದು ನಿಂತಿರುವ ಆ ಕೋಡಂಗಿ ವೇಷದ ಮೇಲೆ ನಿಜವಾಗಿಯೂ ಆಗ ನಮಗೆ ದಯೆ ಮೂಡಿತು. ನಾವು ಬಾಗಿ ನಿಮಿರಿ ಒಂದು ಅಲೆಯಾದೆವು. ತಂತಮ್ಮ ಕೈಯ ಜಲ್ಲಿಕಲ್ಲಿನ ಚೂಪಿನಲ್ಲಿ ಬಿಟ್ಟಕಣ್ಣುಗಳಿಂದ ನೋಡುತ್ತ ನಿಂತಾಗ ಅವನು ಪುನಃ ಅರಚಿದನು :

ಎಸೆಯಿರಿ ! ಎಸೆಯಿರಿ !

ಆಗ ವಚನದ ಪ್ರತಿಧ್ವನಿಗಳು ಆಕಾಶವಿಡೀ ಮೊರೆಯಿತು :

ಪಾಪ ಮಾಡದವರು ಕಲ್ಲೆಸೆಯಲಿ !

ನಾವು ಪಾಪಮಾಡದವರೇ ! ಕಲ್ಲೆಸೆಯಲು ಅರ್ಹತೆ ಹೊಂದಿದವರೇ ! ಆದರೂ ನಮ್ಮ ಕೈಗಳು ಸ್ಥಗಿತವಾಗುವುದು ಯಾಕೆ ? ಕಾಲುಗಳು ಹಿಂದಿರುಗಿ ಓಡಿ ದೂರವಾಗುವುದು ಯಾಕೆ ?

ಮೂಲ ಮಲಯಾಳಂ : ಗ್ರೇಸಿ
ಅನುವಾದ : **ಕೆ. ಕೆ. ನಾಯರ್**
ಎಂ.ಐ.ಜಿ. ೧೨೬, ಹುಡ್ಕೋ ಕಾಲೋನಿ, ಮಣಿಪಾಲ - ೫೭೬ ೧೦೪



## ಹೆಸರಿನ ಗುರುತು

ನನಗೂ ಒಂದು ಹೆಸರಿದೆ,
ಆದರೆ ನಾನು ಅವನಲ್ಲ.

ಆದರೂ ಹಾಗೆ ಕರೆಯುತ್ತಾರೆ
ಎಲ್ಲರೂ ನನ್ನನ್ನು
'ಹೂಂ'ಗುಟ್ಟುತ್ತೇನೆ
ನಾನು ಅವನಲ್ಲವೆಂಬುದು
ಅವರಿಗೆ ಗೊತ್ತಿಲ್ಲವೆಂದು.

ನನಗೂ ಒಂದು ಹೆಸರಿದೆ,
ಅದಕ್ಕೊಂದು ಜಾತಿಯಿದೆ
ಧರ್ಮವಿದೆ, ಚರಿತ್ರೆ – ಪುರಾಣವಿದೆ,
ನನಗಿಲ್ಲ ಹೆಸರಿನೊಂದಿಗೆ
ಇನಿತೂ ಸಂಬಂಧ.

ಆ ಹೆಸರು ಈ ಜಗತ್ತಿನ
ಹಲವು ಭಾಷೆಗಳ ನಿಘಂಟಿನಲ್ಲೂ ಇದೆ,
ಈ ಜಗತ್ತಿಗಿರುವಂತೆ
ಅದಕೂ ಒಂದಿಷ್ಟು ಅರ್ಥವಿದೆ,
ನನಗೆ ಭಾಷೆಯಿಲ್ಲ
ಅರ್ಥವೂ ಇಲ್ಲ
ಈ ಜಗತ್ತೂ ಎಂದೆಂದೂ ನನ್ನದಲ್ಲ.

ಯಾವುದೋ ದೇಹದಲಿ
ಮಿಡಿವ ಹೃದಯ, ತುಡಿವ ಮನಸಷ್ಟೇ ನಾನು
ನನಗೊಂದು ಹೆಸರೇಕೆ ಹೇಳಿ ?
ನನಗೇಕೆ
ಜಾತಿ –ಧರ್ಮಗಳ ಹಾವಳಿ ?

ಆದರೂ ಹೀಗೆ ಹಂಗಿನ
ಹೆಸರೊಂದು ಅಂಟಿಕೊಂಡಿದೆ ನನಗೆ,
ಕೊಡುವುತ್ತಲೇ ಇದ್ದೇನೆ
ಎಂದಾದರೂ ಕಳಚಿಕೊಳ್ಳಬಹುದೆಂದು.

ಗಣೇಶ ಹೊಸ್ಮನೆ
ಜಾನ್ಮನೆ - ೫೮೧ ೩೧೫, ಶಿರಸಿ (ಉ.ಕ.)

# ಆದ್ಯವಚನಕಾರ

# ದೇವರ ದಾಸಿಮಯ್ಯ



**೫ ಜೂನ್ ೨೦೦೬ :** ಇಂದು ವಿಶ್ವ ಪರಿಸರ ದಿನಾಚರಣೆ. ಪರಿಸರ ಚಿಂತಕರಿಗೆ ಬಹು ಪ್ರಿಯವಾದ 'ಸೂಳ್ನುಡಿ'ಯಿದು : 'ವಿಶ್ವಚಿಂತನೆ ಮತ್ತು ಸ್ಥಳೀಯ ದುಡಿಮೆ'. ಹನ್ನೆರಡನೇ ಶತಮಾನದಲ್ಲಿ 'ಕಲ್ಯಾಣ'ವನ್ನು ಕೇಂದ್ರಮಾಡಿಕೊಂಡು ಇಡೀ ಮನುಕುಲದ ಕಲ್ಯಾಣವನ್ನು ಕುರಿತು ಚಿಂತಿಸಿದ ವಚನ ಚಳವಳಿ ಮತ್ತು ಸಾಹಿತ್ಯಗಳು ಸ್ಥಳೀಯ ದುಡಿಮೆ ಮತ್ತು ವಿಶ್ವಚಿಂತನೆಯ ಶ್ರೇಷ್ಠ ಉದಾಹರಣೆಯಾಗಿವೆ. ಇದಕ್ಕೆ ಸ್ಫೂರ್ತಿ ಶಕ್ತಿಯಾಗಿ ಪರಿಣಮಿಸಿದ 'ಆದ್ಯವಚನಕಾರ' ದೇವರ ದಾಸಿಮಯ್ಯನ ವಚನಗಳನ್ನು ಕುರಿತು ನಡೆಸಿದ ಹೊಸ ಬಗೆಯ ಅನುಸಂಧಾನವಿಲ್ಲಿದೆ.

'ಆದ್ಯವಚನಕಾರ' ಎಂಬುದನ್ನು 'ಆದಿಕವಿ' ಎಂಬ ಅರ್ಥವ್ಯಾಪ್ತಿಯಲ್ಲೇ ಸ್ವೀಕರಿಸಬೇಕು. ಆದಿಕವಿ ಪಂಪನಿಗೂ ಮುಂಚೆ ಕನ್ನಡದಲ್ಲಿ ಗದ್ಯಕವಿಗಳು ಮತ್ತು ಪದ್ಯಕವಿಗಳು ಇದ್ದರು. ಆದರೂ ನಾವಿಂದು ಪಂಪನನ್ನೇ ಆದಿಕವಿಯೆಂದು ಕರೆಯುತ್ತೇವೆ. ಹಾಗೆಯೇ 'ಆದ್ಯವಚನಕಾರ' ದೇವರ ದಾಸಿಮಯ್ಯನಿಗೂ ಮುಂಚೆ ಕನ್ನಡದಲ್ಲಿ ವಚನಕಾರರು ಇದ್ದರು. ಸ್ವತಃ ದಾಸಿಮಯ್ಯನವರೇ ತಮ್ಮ ವಚನಗಳಲ್ಲಿ 'ಶರಣರ ಸೂಳ್ನುಡಿ', 'ಮೃಡಭಕ್ತರ ನುಡಿಗಡಣ' ಎಂದು ಕರೆದು ತಮಗಿಂತ ಮುಂಚೆ ಇದ್ದ ಶಿವಶರಣರ ನುಡಿಮುತ್ತುಗಳನ್ನು ಕೃತಜ್ಞತೆಯಿಂದ ಸ್ಮರಿಸಿದ್ದಾರೆ. ೧೫೦ರಷ್ಟು ವಚನಗಳು ದೇವರ ದಾಸಿಮಯ್ಯನ ಅಂಕಿತವಾದ 'ರಾಮನಾಥ' ಹೆಸರಿನಲ್ಲಿ ದೊರೆತಿರುವುದರಿಂದಲೂ, ಇವುಗಳಲ್ಲಿರುವ ಧಾತು ಮತ್ತು ಧೋರಣೆಗಳು ಇಡೀ ವಚನಸಾಹಿತ್ಯಕ್ಕೆ ಆಧಾರಸ್ತಂಭದಂತಿರುವುದರಿಂದಲೂ ದೇವರ ದಾಸಿಮಯ್ಯನನ್ನು 'ಆದ್ಯ ವಚನಕಾರ' ಎನ್ನಬಹುದು.

ಆದಿಕವಿ ಪಂಪನ ''ಛಲದೊಳ್ ದುರ್ಯೋಧನಂ''... ಎಂಬ ಮಾತು ಸುಪ್ರಸಿದ್ಧವಾಗಿದೆ. 'ಚಲ' ಎಂದೊಡನೆ ನಮಗೆ ನೆನಪಾಗುವುದು ದುರ್ಯೋಧನನ ಹೆಸರು. ಮನುಷ್ಯರು ಮನುಷ್ಯರನ್ನೇ ದೃಷ್ಟಿಯಲ್ಲಿಟ್ಟುಕೊಂಡು ಚಿಂತಿಸುವುದು ಅತ್ಯಂತ ಸಹಜ. ಆದರೆ, ದೇವರ ದಾಸಿಮಯ್ಯ ಚಲದೊಳ್ ಇರುವೆಯನ್ನು ಗುರುತಿಸಿದ್ದಾನೆ :

*ಇರುಹೆಯ ತೆರನೇನು !?*
*ನೆರೆ ಚಲವಿಲ್ಲದೆ ಮಾಡಿದವನ ಭಕ್ತಿ*
*ಆ ಇರುಹೆಯಿಂದ ಕರಕಷ್ಟ ಕಾಣಾ ರಾಮನಾಥ ॥೭೬॥*

ಮಳೆಗಾಲಕ್ಕೆ ಮುಂಚೆ ಇರುವೆಯ ಚಟುವಟಿಕೆಗಳು ಮತ್ತು ಶಿಸ್ತಿನ ಕಾರ್ಯಾಚರಣೆಗಳನ್ನು ಗಮನಿಸಿದವರಿಗೆ 'ಇರುವೆಯ ಚಲ' ಏನೆಂದು ಸ್ಪಷ್ಟವಾಗುತ್ತದೆ. ವಿಶ್ವವಿಖ್ಯಾತವಾದ 'ಪ್ಯಾಪಿಲಾನ್' ಕೃತಿಯಲ್ಲಿ 'ಮೇನಿಕ್ ಆ್ಯಂಟ್ಸ್' ಎಂಬ ಇರುವೆಗಳ ಪ್ರಸ್ತಾಪವಿದೆ. ಈ ಸೈನಿಕ ಇರುವೆಗಳ ಸಂಘಟನೆ ಮತ್ತು ಶಿಸ್ತುಬದ್ಧ ಕಾರ್ಯಾಚರಣೆಯಿಂದ ಪ್ಯಾಪಿಲಾನ್ ಪ್ರಭಾವಿತಗೊಳ್ಳುವುದಲ್ಲದೆ, ತಾನು ಸೆರೆಯಿಂದ ತಪ್ಪಿಸಿಕೊಳ್ಳಬೇಕಾದರೆ ಈ ಮಟ್ಟದ ಗುಪ್ತಕಾರ್ಯಾಚರಣೆ ನಡೆಸಬೇಕೆಂದು ಆಲೋಚಿಸುತ್ತಾನೆ. ಕುವೆಂಪು ಕಾದಂಬರಿಯಲ್ಲಿ ನಾಯಿಗುತ್ತಿ ಸೆಗಣಿಹುಳುವಿನ ಹೋರಾಟದಿಂದ ಸ್ಫೂರ್ತಿ ಪಡೆಯುವ ವರ್ಣನೆಯಿದೆ. ದೇವರ ದಾಸಿಮಯ್ಯ, ಪ್ಯಾಪಿಲಾನ್, ಕುವೆಂಪು ಮಾತ್ರವಲ್ಲ! ಎಲ್ಲ ದೇಶಗಳ ಬುಡಕಟ್ಟು ಕಥನಗಳು ಮತ್ತು ಮಹಾಕಾವ್ಯಗಳಲ್ಲಿ ಸೃಷ್ಟಿಯ ಕನಿಷ್ಠ ಜೀವಿಗಳಿಂದ ಸ್ಫೂರ್ತಿಪಡೆಯುವ ಪ್ರಸಂಗಗಳು ತುಂಬಿಹೋಗಿವೆ.. ಸೃಷ್ಟಿಯ ಕನಿಷ್ಠ ಜೀವಿಗಳಿಗೂ ಮಾನವಕುಲಕ್ಕೂ ಇರುವ ಸೋದರ ಸ್ನೇಹವನ್ನು ಇಂಥ ಕಡೆಗಳಲ್ಲಿ ಗುರುತಿಸಬಹುದು. ಆದರೆ, ಇಂದು ನಮ್ಮ ಮಹಾನಗರಗಳಲ್ಲಿ ಸೃಷ್ಟಿಯ ಕನಿಷ್ಠಜೀವಿಗಳಿಗೂ ಮಾನವರಿಗೂ ಮಧ್ಯೆ ಯಾವುದೇ ಸಂಬಂಧವಿಲ್ಲ. ಬೆಂಗಳೂರು ಮಹಾನಗರದಲ್ಲಿ ಕಪ್ಪೆಗಳು, ಚಿಟ್ಟೆಗಳು, ಮಿಲಿಪೀಡ್ಸ್, ಬಸವನಹುಳು ಇತ್ಯಾದಿಗಳಿಲ್ಲ... ಬೆಂಗಳೂರಿನ ಕಡೆ ಮುಖ ಮಾಡಿರುವ ಎಷ್ಟೋ ಪಟ್ಟಣಗಳು ಮತ್ತು ನಗರಗಳಲ್ಲಿ ಮುಂಗಾರಿನ ಮಳೆಬಿದ್ದ ಮಾರನೇ ದಿನ ಟಾರುರಸ್ತೆಗಳ ಪಕ್ಕ ನಡೆದುಕೊಂಡು ಹೋದರೆ, ರಸ್ತೆಮಧ್ಯದಲ್ಲಿ ಟೈರುಗಳಡಿ ಸಿಕ್ಕಿಕೊಂಡು ಅಪ್ಪಚ್ಚಿಯಾಗಿರುವ ಕಪ್ಪೆಗಳನ್ನು ಕಾಗೆಗಳು ಕುಕ್ಕಿ ಎಳೆದು ತಿನ್ನುವುದನ್ನು ಕಾಣಬಹುದು. ವಾಸ್ತವವಾಗಿ, ಈ ಕಪ್ಪೆಗಳು, ಚಿಟ್ಟೆಗಳು, ಮಿಲಿಪೀಡ್ಸ್, ಬಸವನಹುಳು ಮುಂತಾದ ಕನಿಷ್ಠ ಜೀವಿಗಳ ಅಸ್ತಿತ್ವವು ಮನುಷ್ಯನ ವಾಸಸ್ಥಾನದ ಯೋಗ್ಯತೆಯ ಬಗ್ಗೆ ನಿಸರ್ಗ ಕೊಡುತ್ತಿರುವ ಜೀವಂತ ಸರ್ಟಿಫಿಕೇಟುಗಳೆನ್ನಬಹುದು. ನಗರೀಕರಣ ಮತ್ತು ಆಧುನಿಕ ನಾಗರಿಕತೆಯ ಹೆಸರಿನಲ್ಲಿ ಇಂದು ಮಾನವಕುಲ ಇಂಥ ಜೀವಂತ ಸರ್ಟಿಫಿಕೇಟುಗಳ ಅಸ್ತಿತ್ವವನ್ನೇ ಇಲ್ಲದಂತೆ ಮಾಡುತ್ತಿದೆ. ಇಂಥ ಸಂದರ್ಭದಲ್ಲಿ ದೇವರ ದಾಸಿಮಯ್ಯ ಅಡ್ಡಪಲ್ಲಕ್ಕಿಯ ಜಗದ್ಗುರುವಿಗೆ ಬದಲು 'ಇರುವೆ ಗುರು'ವಿನ ಪರಿಕಲ್ಪನೆಯನ್ನು ಭಕ್ತಿಗೆ ನಿದರ್ಶನವಾಗಿ ಕೊಟ್ಟಿರುವುದು ಅತ್ಯಂತ ಸ್ತುತ್ಯರ್ಹವಾಗಿದೆ. ವಿಶ್ವ ಪರಿಸರ ದಿನಾಚರಣೆಯಂದೇ, ದೇವರ ದಾಸಿಮಯ್ಯನನ್ನು ಕುರಿತ ವಿಶಿಷ್ಟ ವಿಚಾರ ಸಂಕಿರಣ ನಡೆಯುತ್ತಿರುವುದು ಯಥೋಚಿತವಾಗಿದೆ.

ಭಕ್ತಿಪಂಥವನ್ನು ಅಖಿಲ ಭಾರತ ಮಟ್ಟದಲ್ಲಿ ಗುರುತಿಸುವ ಅಧ್ಯಯನಗಳು ಎಷ್ಟೋ ನಡೆದಿವೆ; ನಡೆಯುತ್ತಿವೆ. ಬಸವಣ್ಣನವರು ತಮ್ಮ ವಚನಗಳಲ್ಲಿ ಸ್ಮರಿಸಿರುವ ದೇಸೀಯವಾದ, ಭಕ್ತಿಪಂಥದ ಪರಂಪರೆಯನ್ನು ಡಾ॥ ಎಲ್. ಬಸವರಾಜು ಅವರು 'ದೇವರ ದಾಸಿಮಯ್ಯನ ವಚನಗಳು' ಮುನ್ನುಡಿಯಲ್ಲಿ ಸವಿಸ್ತಾರವಾಗಿ ಪ್ರತಿಪಾದಿಸಿದ್ದಾರೆ :

*ಭಕ್ತಿ ಇಲ್ಲದ ಬಡವ ನಾನಯ್ಯ*
*ಕಕ್ಕಯ್ಯನ ಮನೆಯಲು ಬೇಡಿದೆ*
*ಚೆನ್ನಯ್ಯನ ಮನೆಯಲು ಬೇಡಿದೆ*
*ದಾಸಯ್ಯನ ಮನೆಯಲು ಬೇಡಿದೆ*
*ಎಲ್ಲಾ ಪುರಾತರು ನೆರೆದು ಭಕ್ತಿಭಿಕ್ಷವನಿಕ್ಕಿದರೆ*
*ಎನ್ನ ಪಾತ್ರೆ ತುಂಬಿತ್ತು, ಕೂಡಲ*
*ಸಂಗಮದೇವ ॥೩೪೯॥*

''ಬಸವಣ್ಣನವರು ನಮ್ಮ ಈ ಭಕ್ತಿಪಂಥವನ್ನು ಪ್ರಚುರಪಡಿಸಲು ಪ್ರೇರಣೆಯನ್ನು ಪಡೆದುದಾದರೂ ಹುಟ್ಟಿನಿಂದ ಕುಲಹೀನರಾದರೂ ಆದುದರಿಂದಲೇ ಅಂದಿನ ಸಾಮಾಜಿಕ ಮೌಲ್ಯಾನುಸಾರವಾಗಿ ಅತ್ಯಂತ ಸಾಮಾನ್ಯರೆಂಬುದಿರಲಿ ಅಮಾನ್ಯರೇ ಆದರೂ ಗುಣಮಟ್ಟದಿಂದ ಕುಲೀನರೂ ಮಾನ್ಯರೂ ಆದ ಡೋಹಾರ ಜಾತಿಯ ಕಕ್ಕಯ್ಯನಿಂದ ಮಾದಾರ ಜಾತಿಯ ಚೆನ್ನಯ್ಯನಿಂದ ಮತ್ತು ಜೇಡರ ಜಾತಿಯ ದಾಸಯ್ಯನಿಂದ.''

(ಡಾ॥ ಎಲ್. ಬಸವರಾಜು, ಪುಟ ೯)

ಜೇಡರ ಜಾತಿ ಅಥವಾ ದೇವಾಂಗದ ಜಾತಿಯಲ್ಲಿ ಜನಿಸಿದ್ದರೂ ದಾಸಿಮಯ್ಯನು ಜಾತಿಪದ್ಧತಿಗೆ ಅಂಟಿಕೊಂಡವನಲ್ಲ. ಈ ಮಾನಸಿಕ ಪರಿವರ್ತನೆಯನ್ನು ಸೂಚಿಸಲು ದಾಸಿಮಯ್ಯ ತನ್ನ ವಚನಗಳಲ್ಲಿ 'ದಾಸನಕುಲ' ಎಂಬ ಪರಿಭಾಷೆಯನ್ನು ಬಳಸಿದ್ದಾನೆ. ದಾಸಿಮಯ್ಯನ ಕಾಲಕ್ಕಾಗಲೇ ಸುಪ್ರತಿಷ್ಠಿತವಾಗಿ ಪ್ರಚಾರಕ್ಕೆ ಬಂದಿತ್ತೆಂದು ಹೇಳಿ 'ದಾಸನಕುಲ'ವನ್ನು ಗುರುತಿಸಿರುವ ಡಾ॥ ಎಲ್. ಬಸವರಾಜು ಕೊಟ್ಟಿರುವ ನಿದರ್ಶನ ಪೂರ್ವಕ ವಚನವೆಂದರೆ,

*ದಾಸನಕುಲವಾದಾತ ಈಶಂಗಲ್ಲದೆ ಶರಣೆನ್ನ*
*ಆಸೆ ಮಾಡನೋಡ ಅನ್ಯದೈವಂಗಳಿಗೆ*
*ಆಸೆ ಮಾಡನೋಡ ದೇಶದ ಪಿಶಾಚಿಗಳಿಗೆ*
*ಆಸೆ ಮಾಡಿದನಾದಡೆ ಅವ ದಾಸನ ಕುಲವಲ್ಲ*

ಎ. ಚಂದ್ರಶೇಖರ ನಂಗಲಿ

*ಅವನನ್ನ ಕುಲ ಕಾಣಾ ರಾಮನಾಥ ॥೧೩೨॥*

ಜನ್ಮಾಧಾರಿತ ಅಸಮಾನತೆಯನ್ನು ಬಿಂಬಿಸುತ್ತಿದ್ದ ಜಾತಿ ಪದ್ಧತಿ ಮತ್ತು ಅಸ್ಪೃಶ್ಯತೆಗಳು ಹಲವರಲ್ಲಾದರೂ ಮಾನಸಿಕವಾಗಿ ಅಳಿದು ಜಾತ್ಯತೀತವಾದಂಥ 'ದಾಸನ ಕುಲ' ಅಥವಾ 'ದಾಸಪಂಥ' ಎಂಬ ಗ್ರಹಿಕೆಯೊಂದು ದಾಸಿಮಯ್ಯನ ಕಾಲಕ್ಕಾಗಲೇ ಸುಪ್ರತಿಷ್ಠಿತವಾಗಿ ಪ್ರಚಾರದಲ್ಲಿತ್ತು. ಜಾತಿಪದ್ಧತಿಯನ್ನು ಮಾನಸಿಕವಾಗಿ ಮೀರಿ ನಿಲ್ಲಬಹುದೆಂಬುದಕ್ಕೆ ದಾಸಿಮಯ್ಯನ ಹಲವು ವಚನಗಳನ್ನು ಉದಾಹರಿಸಬಹುದು :

೧. *ವೇಷಕ್ಕಂಜುವೆ ದೋಷಕ್ಕೆ ಹೇಸುವೆ*
*ಈಶ್ವರನಾಗಿ ಎನ್ನ ಕೈಯಲ್ಲಿ ಆರಾಧಿಸಿಕೊಳಲೊಲ್ಲದೆ*
*ಹದಿನೆಂಟು ಜಾತಿಯ ಹೇಸಿಕೆಯ ಕೂಳ*
*ತಿಂಬವರನೇನೆಂಬೆನೈ ರಾಮನಾಥ ॥೧೧೮॥*

೨. *ಕಡಿಗಳ ಹದಿನೆಂಟನೊಡಗೂಡಿ ಸಂಧಿಸಿ*
*ತೊಡಚಿ ಕಟ್ಟಿದೆ ನರರ ಬಂಧನದಲ್ಲಿ. ಈ*
*ತೊಡಹದ ನಾಯ ನಿಜ್ಜ ನೀನಿಕ್ಕಿ*
*ಕೆಡಿಸಿದೆಯಯ್ಯ ರಾಮನಾಥ ॥೬೦॥*

...''ಶಿವನು ತನ್ನ ಅಕ್ಕಪಕ್ಕದ ಹತ್ತೆಂಟು ಮೂಳೆಯನ್ನು ಮುರಿದು ಜೋಡಿಸಿ ಬಿಗಿದು ಅದಕ್ಕೊಂದು ಪಂಜರ ಕಟ್ಟಿದ... ಆ ಪಂಜರದ ಆ ರಂಗುಭಂಗಿಗೆ ಮನಸೋತ ಆ ಜೀವನು ಅದರೊಳಗೆ ಹೋದ''...

(ಎಲ್. ಬಸವರಾಜು ವಚನ ಚಿಂತನ, ಅದೇ, ಪುಟ ೧೨೫)

೩. *ಮಡದಿಯ ಪ್ರಾಣಕ್ಕೆ ಮೊಲೆ ಮುಡಿ ಇದ್ದಿತ್ತೆ ?*
*ಒಡೆಯರ ಪ್ರಾಣಕ್ಕೆ ಇದ್ದಿತ್ತೆ ಯಜ್ಞೋಪವೀತ ?*
*ಕಡೆಯಲ್ಲಿದ್ದ ಅಂತ್ಯಜನು ಹಿಡಿದಿದ್ದನೇ ಪ್ರಾಣದಲ್ಲಿ ಹಿಡಿಗೋಲ ?*
*ನೀ ತೊಡಕಿಕ್ಕಿದ ತೊಡಕ ನೀ ಲೋಕದ*
*ಜಡರೆತ್ತಬಲ್ಲರೈ ? ರಾಮನಾಥ ! ॥೮೧॥*

...''ಪರಶಿವನು ತನ್ನಂಶವಾದ ಆತ್ಮಂಗೆ ಶರೀರ ಸಂಬಂಧವ ಮಾಡಲು – ಹೆಣ್ಣೆಂದು, ಗಂಡೆಂದು, ವಿಪ್ರನೆಂದು, ಹೊಲೆಯನೆಂದು ನೂರೊಂದು ಕುಲ, ಹದಿನೆಂಟು ಜಾತಿಯನುಂಟುಮಾಡಿ ಒಬ್ಬರಿಗೊಬ್ಬರು ಹೋರಾಡುವ ಬಂಧನವ ಈ ಜಗದ ಅಚೇತನವಾದ ಜೀವರು ಎತ್ತ ಬಲ್ಲರು ? ಅರಿಯರೆಂಬುದರ್ಥ''...

(ಎಲ್. ಬಸವರಾಜು, ಅಡಿಟಿಪ್ಪಣಿ, ಅದೇ, ಪುಟ ೮೩)

ಮೇಲಿನ ವಚನ-ವ್ಯಾಖ್ಯಾನ-ಚಿಂತನಗಳಿಂದ ಸ್ಪಷ್ಟಪಡುವ ಸಂಗತಿ ಏನೆಂದರೆ, ಕೆಸರಿನಲ್ಲಿ ಜನಿಸಿದ ಕಮಲಪುಷ್ಪ ಕೆಸರನ್ನು ಮೀರಿ ನಿಲ್ಲುವಂತೆ ಎಲ್ಲ ಮಾನವರು ಯಾವುದೇ ಜಾತಿಯಲ್ಲಿ ಜನಿಸಿರಲಿ, ಅಂತಿಮವಾಗಿ ಜಾತಿ ಪದ್ಧತಿಯನ್ನು ಮೀರಿ ಮುಂದುವರಿಯಬೇಕು. ಈ ದೃಷ್ಟಿಯಿಂದ ನೋಡಿದರೆ ವಚನ ಚಳವಳಿ ಮತ್ತು ಸಾಹಿತ್ಯದ ತಿರುಳು ಕೂಡ ಜನ್ಮಾಧಾರಿತ ಅಸಮಾನತೆಯನ್ನು ಹೇಗೆ ಮೀರಬೇಕೆಂಬುದೇ ಆಗಿದೆ.

ವಚನ ಚಳವಳಿ ಮತ್ತು ಸಾಹಿತ್ಯದ ಮಟ್ಟಿಗೆ ಆರಂಭ ಕಾಲದ ಬೇಸಾಯಗಾರನಾದ ದಾಸಿಮಯ್ಯನು 'ಮುಂದಿನ ನೇಗಿಲು' ಎನ್ನಬಹುದು. ಕೋಲಾರ ಜಿಲ್ಲೆಯಲ್ಲಿ ಪ್ರಚಲಿತವಿರುವ ತೆಲುಗು ಗಾದೆಯಿಂದ 'ಮುಂದಿನ ನೇಗಿಲು' ಎಂಬ ರೂಪಕವನ್ನು ತೆಗೆದುಕೊಂಡಿದ್ದೇನೆ. ''ಮುಂದು ಮಡಕ ಸರಿಗ್ಗಾ ಉಂಟೆ ಅಂತಾ ಸರಿಗ್ಗಾ ಉಂಟುಂದಿ'' – ಎಂದರೆ, ''ಮುಂದಿನ ನೇಗಿಲು ಸರಿ ಇದ್ದರೆ ಉಳಿದುವೆಲ್ಲ ಸರಿ ಇರುತ್ತದೆ'' – ಎಂದರ್ಥ ! ಇದು ದಾಸಿಮಯ್ಯನಿಗೆ ಬಹು ಚೆನ್ನಾಗಿ ಒಪ್ಪುತ್ತದೆ. ದಾಸಿಮಯ್ಯ ಸರಿಯಾಗಿದ್ದುದರಿಂದ ಉಳಿದೆಲ್ಲ ವಚನಕಾರರು ಸರಿಯಾಗಿದ್ದರು ಎಂಬುದು ಉತ್ಪ್ರೇಕ್ಷೆಯಲ್ಲ; ವಾಸ್ತವ ಸತ್ಯವಾಗಿದೆ. ದಾಸಿಮಯ್ಯ ಹಾಕಿಕೊಟ್ಟ ಮೇಲ್ಪಂಕ್ತಿ ಮತ್ತು ಆತನ ವಚನಗಳಲ್ಲಿರುವ ಧಾತು-ಧೋರಣೆಗಳು ಮುಂದೆಬಂದ ಅನೇಕ ವಚನಕಾರರಲ್ಲಿ ಸ್ಪಷ್ಟವಾಗಿ ಗುರುತಿಸಬಹುದು. ದಾಸಿಮಯ್ಯನ ವಚನಗಳನ್ನು ಸಂಪಾದಿಸಿರುವ ಡಾ॥ ಎಲ್. ಬಸವರಾಜು ಅವರು ಆಯ್ದ ಕೆಲವು ವಚನಗಳ ಅಡಿಟಿಪ್ಪಣಿಯಲ್ಲಿ ದಾಸಿಮಯ್ಯನ ವಚನಗಳನ್ನು ನೆನಪಿಗೆ ತರುವ ಬಸವಣ್ಣ, ಅಲ್ಲಮ, ಅಕ್ಕಮಹಾದೇವಿ, ಸರ್ವಜ್ಞರ ವಚನಗಳ ಉಲ್ಲೇಖವನ್ನು ಕೊಟ್ಟಿದ್ದಾರೆ. ಇದನ್ನು ವಿಸ್ತರಿಸುತ್ತಾ, ದಾಸಿಮಯ್ಯನೊಂದಿಗೆ ನಾವು ನಡೆಸಬಹುದಾದ ವೈವಿಧ್ಯಮಯ ಅನುಸಂಧಾನಗಳಲ್ಲಿ ಕೆಲವೊಂದನ್ನು ಸಂವಾದತಂತ್ರದಿಂದ ನಾನಿಲ್ಲಿ ಪ್ರಸ್ತಾಪಿಸಿದ್ದೇನೆ :

೧. ದಾಸಿಮಯ್ಯ – ಬಸವ ಸಂವಾದ
೨. ದಾಸಿಮಯ್ಯ – ಅಲ್ಲಮ ಸಂವಾದ
೩. ದಾಸಿಮಯ್ಯ – ಅಕ್ಕಮಹಾದೇವಿ ಸಂವಾದ
೪. ದಾಸಿಮಯ್ಯ – ಚೌಡಯ್ಯ ಸಂವಾದ
೫. ದಾಸಿಮಯ್ಯ – ಸರ್ವಜ್ಞ ಸಂವಾದ
೬. ದಾಸಿಮಯ್ಯ – ಎಕ್ಕುಂಡಿ ಸಂವಾದ

ವಚನ ಚಳವಳಿ ಮತ್ತು ಸಾಹಿತ್ಯದ 'ಮುಂದಿನ ನೇಗಿಲು' ದಾಸಿಮಯ್ಯನ ವಚನಗಳಲ್ಲೇ ನಾಲ್ಕು ಸಾಲಿನ ಕೂರಿಗೆಯಲ್ಲಿ ಬಿತ್ತನೆಗೊಂಡ ಬೀಜ ವಿಚಾರಗಳನ್ನು ಗುರುತಿಸಬಹುದು :

೧. ಸ್ವತಂತ್ರ ಮನೋಧರ್ಮ : ಇಳೆ ನಿಮ್ಮ ದಾನ – ೬೭
೨. ಅಪವರ್ಗೀಕರಣ : ಕೀಳಿಂಗಲ್ಲದೆ – ೧೨೬
೩. ಸಬಲೀಕರಣ : ಮೊಲೆಮೂಡಿಬಂದರೆ – ೧೧೧
೪. ನಿರ್ಭೀತಿ : ಬರು ಸಟೆಗನ ಭಕ್ತಿ – ೩೦

ಈ ನಾಲ್ಕು ಸಾಲಿನ ಬೀಜ ವಿಚಾರಗಳೇ ಮುಂದೆ ವಚನಸಾಹಿತ್ಯದ ಚತುರ್ಮುಖ ಸೌಂದರ್ಯ ತತ್ವಗಳಾಗಿ ಮಾನ್ಯವಾಗಿವೆ. ದಾಸಯ್ಯ, ದಾಸಿದೇವ, ದಾಸಿಮಾರ್ಯ, ಜೇಡರ ದಾಸಿಮಯ್ಯ, ದೇವರ ದಾಸಿಮಯ್ಯ ಇವೆಲ್ಲ 'ದೇವನೊಬ್ಬ ನಾಮ ಹಲವು' ಎಂಬಂತೆ ಒಬ್ಬನೇ ವ್ಯಕ್ತಿಯ ಬೇರೆ ಬೇರೆ ನಾಮಾಂತರಗಳಾಗಿವೆ. ಚಿದು, ಚಿದಾನಂದ, ಮೂರ್ತಿ, ಚಿದಾನಂದ ಮೂರ್ತಿ ಹೇಗೆ ಒಬ್ಬನೇ ವ್ಯಕ್ತಿಯ ನಾಮಾಂತರಗಳೋ ಹಾಗೆಯೇ ದಾಸಿಮಯ್ಯನಿಗೆ ಸಂಬಂಧಿಸಿದ ನಾಮಾಂತರಗಳನ್ನು ಗ್ರಹಿಸಬೇಕು. ಈ ವಿಷಯದಲ್ಲಿ ಗೋವಿಂದ ಪೈ, ಎಲ್. ಬಸವರಾಜು, ಕೆ. ಜಿ. ನಾಗರಾಜಪ್ಪ ಅವರ ಅಭಿಮತವೇ ಸ್ವೀಕಾರಾರ್ಹವೆಂದು ಈ ಲೇಖಕನೂ ತಿಳಿದಿದ್ದಾನೆ. ಶಿವಭಕ್ತರಿಗೂ ಮತ್ತು ಮತಮಾನ್ಯಗಳಿಗೂ ಇರುವ ವ್ಯತ್ಯಾಸವನ್ನು ಚರ್ಚಿಸುತ್ತಾ ಡಾ॥ ಎಲ್. ಬಸವರಾಜು ಹೇಳಿರುವ ಮಾತೊಂದು ಬಹುಮುಖ್ಯವಾಗಿದೆ :

''...ತಗ್ಗೆ ಬಹುಶಃ ಮತದವರು ಮಾಡುತ್ತಿದ್ದ ಪ್ರತಿಪಾದನೆಗೂ ದೇವರ ದಾಸಿಮಯ್ಯ ಮುಂತಾದವರ ಪ್ರತಿಪಾದನೆಗೂ ಮೂಲಭೂತವಾದ ವೈಷಮ್ಯಗಳಿದ್ದವೆನಿಸುವುದು...'' (ಅದೇ, ಪುಟ ೫೧).

ಈ ಮೂಲಭೂತವಾದ ವೈಷಮ್ಯಗಳೇ ಮುಂದುವರೆಯುತ್ತಾ ಆಧುನಿಕ ಕಾಲದ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿಗೆ ಕಾರಣವಾಗಿದೆಯೆಂದು ಗ್ರಹಿಸುವುದು ಸತ್ಯವಾಗಿದೆ. ಬಸವರಾಜು ಅವರು ತಮ್ಮ ಪುಸ್ತಕದ




ಹಾಸನದಲ್ಲಿ ೧೯.೮.೨೦೦೬ರಂದು ಪ್ರಾರಂಭವಾದ ನವಕರ್ನಾಟಕ ಪುಸ್ತಕ ಪ್ರದರ್ಶನವನ್ನು ಮಾನ್ಯ ಎಚ್. ಕೆ. ಜವರೇಗೌಡರು ಉದ್ಘಾಟಿಸಿದರು. ಮಾನ್ಯ ಎಚ್. ಬಿ. ರಮೇಶ್, ಎನ್. ಶೈಲಜ ಮತ್ತು ಎಚ್. ವಿ. ಮದನ ಗೌಡರು ಮುಖ್ಯ ಅತಿಥಿಯಾಗಿದ್ದರು. ಮಾನ್ಯ ಬಿ. ಎಸ್. ವೆಂಕಟೇಶ ಮೂರ್ತಿ ಅವರು ಅಧ್ಯಕ್ಷತೆ ವಹಿಸಿದ್ದರು.

ಸವಿಸ್ತಾರವಾದ ಮುನ್ನುಡಿಯಲ್ಲಿ ದಾಸಿಮಯ್ಯ ಪ್ರತಿಪಾದಿಸಿದ 'ದೇಸೀಯ ಧರ್ಮ'ವನ್ನು ಗುರುತಿಸಿ, ದಾಸಿಮಯ್ಯನನ್ನು 'ಜಾನಪದ ಜಗದ್ಗುರು' ಎಂದು ಕರೆದಿದ್ದಾರೆ. ಹುಳುಗಳನ್ನು ಆಯ್ದು ತಿನ್ನುವ ಕೋಳಿ (೮೮), ಕೆಚ್ಚಲಿ ನಲ್ಲಿದ್ದರೂ ರಕ್ತ ಕುಡಿಯುವ ಉಣ್ಣೆ (೧೩೯), ಹಗ್ಗದಿಂದ ಕಟ್ಟುವಡೆದ ಪಶು (೧೧೭), ಹೊಡೆಗೆಡೆದು ಬೀಳುವ ಕಡೆಗೀಲಿಲ್ಲದ ಬಂಡಿ (೨), ಹರಿದ ಗೋಣಿಯಲ್ಲೊಬ್ಬ ತುಂಬಿದ ಕಳವೆ (೩೬), ಇಲಿಯನ್ನು ಕಂಡೊಡನೆ ಪುಟನೆಗೆವ ಮಠದ ಬೆಕ್ಕು (೩೦), ನೊರೆ ಹಾಲೊಲ್ಲದ ಜ್ವರದ ಬಾಯಿ (೧೩೪), ಲಿಂಗವೆನಿಸಿಕೊಳ್ಳದ ಮೆಳೆಯ ಮೇಲಣ ಕಲ್ಲು (೩೧), ಎಲುವಿನ ಗುರುತುಳ್ಳ ಹೊಲೆಯರ ಬಾವಿ (೪೦) ಮುಂತಾದ ಜೀವನಾನುಭವಗಳು ಅಥವಾ ಪ್ರತ್ಯಕ್ಷ ಜ್ಞಾನವನ್ನು ಆಧರಿಸಿ ವಚನಗಳ ಬೆಳೆಯನ್ನು ತೆಗೆದ ಮುಂದಿನ ನೇಗಿಲು, ಆದ್ಯವಚನಕಾರ, ಜಾನಪದ ಜಗದ್ಗುರು ದಾಸಿಮಯ್ಯನ ಪ್ರಭಾವ ಬಸವಣ್ಣ ಮತ್ತು ಅಲ್ಲಮ ಪ್ರಭುವಿನ ಮೇಲಾಗಿರುವುದಕ್ಕೆ ಕಿರುನಿದರ್ಶನವಾಗಿ ಕೆಳಕಂಡ ವಚನಗಳನ್ನು ಪರಿಶೀಲಿಸಿರಿ :

**೧. ಗುರುಪಾದ**

ದಾಸಿಮಯ್ಯ : *ಗುರು ಕರುಣಿಸಲು ಸಂಸಾರ ವಿಷಯ ಕೆಟ್ಟಿತ್ತು. ಮಾಯಾ ಪ್ರಪಂಚು*
*ಬಿಟ್ಟಿತ್ತು : ಹುಟ್ಟರತು ಹೋಯಿತ್ತು*
*ನೆಟ್ಟಗೆ ಗುರುಪಾದವ ಮುಟ್ಟಿ ಭವಗೆಟ್ಟೆನು ಕಾಣಾ ರಾಮಾನಾಥಾ ॥೧೮॥*

ಬಸವಣ್ಣ : *ಮಡಕೆಯ ಮಾಡುವಡೆ ಮಣ್ಣೇ ಮೊದಲು*
*ತೊಡಿಗೆಯ ಮಾಡುವಡೆ ಹೊನ್ನೇ ಮೊದಲು*
*ಶಿವಪಥವನರಿವಡೆ ಗುರುಪಾದವೇ ಮೊದಲು*
*ಕೂಡಲಸಂಗಮದೇವರನರಿವಡೆ ಶರಣರ ಸಂಗವೇ ಮೊದಲು ॥೪೯॥*

ಅಲ್ಲಮಪ್ರಭು : *ಕಂಡುದ ಹಿಡಿಯಲೊಲ್ಲದೆ*
*ಕಾಣದುದನರಸಿ ಹಿಡಿದಹೆನೆಂದರೆ*
*ಸಿಕ್ಕದೆಂಬ ಬಳಲಿಕೆ ನೋಡಾ !*
*ಕಂಡುದನೆ ಕಂಡು*
*ಗುರುಪಾದವ ಹಿಡಿದಲ್ಲಿ*
*ಕಾಣದುದ ಕಾಣಬಹುದು ಗುಹೇಶ್ವರ ॥೩೨॥*

**೨. ಸತಿಪತಿಗಳೊಂದಾದ ಭಕ್ತಿ :**

ದಾಸಿಮಯ್ಯ : *ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ*
*ಸತಿಪತಿಗಳೊಂದಾಗದವನ ಭಕ್ತಿ ಅಮೃತದೊಳು*
*ವಿಷ ಬೆರಸಿದಂತೆ ಕಾಣಾ ರಾಮನಾಥ ॥೪೬॥*

ಬಸವಣ್ಣ : *ಇಂದ್ರಿಯ ನಿಗ್ರಹವ ಮಾಡಿದರೆ*
*ಹೊಂದುವವು ದೋಷಂಗಳು*
*ಮುಂದೆ ಬಂದು ಕಾಡುವವು ಪಂಚೇಂದ್ರಿಯಗಳು*
*ಸತಿಪತಿರತಿಸುಖವ ಬಿಟ್ಟರೇ ಸಿರಿಯಾಳ- ಚೆಂಗಳೆಯರು ?*
*ಸತಿಪತಿರತಿಸುಖ ಭೋಗೋಪಭೋಗವಿಳಾಸವ ಬಿಟ್ಟರೇ*
*ಸಿಂಧುಬಲ್ಲಾಳನವರು ॥*
*ನಿಮ್ಮ ಮುಟ್ಟಿ ಪರಧನ ಪರಸತಿಯರಿಗೆಳಸಿದರೆ*
*ನಿಮ್ಮ ಚರಣಕ್ಕೆ ದೂರ ಕೂಡಲ ಸಂಗಮದೇವ ॥೩೪೯॥*

ಅಲ್ಲಮಪ್ರಭು : *ಉಭಯದೃಷ್ಟಿ ಏಕದೃಷ್ಟಿಯಲ್ಲಿ ಕಾಂಬಂತೆ*
*ದಂಪತಿ ಏಕಭಾವವಾಗಿ ನಿಂದಲ್ಲಿ*
*ಗುಹೇಶ್ವರ ಲಿಂಗಕ್ಕರ್ಪಿತವಾಯಿತ್ತು ಸಂಗನ ಬಸವಣ್ಣ ॥೪೮೭॥*

**೩. ಗೋಟಡಕೆಯ ಸೋಲ :**

ದಾಸಿಮಯ್ಯ : *ಕಂಚು-ಮುಟ್ಟು- ಕಲ್ಲು-ಗುಂಡುಗಳೆರೆವಣ್ಣಗಳು ನೀವು ಕೇಳಿರೇ !*
*ಗಂಟೆಯ ನುಡಿಸಿ ಶಿವನನುಂಟು ಮಾಡಿಕೊಂಡಿಹೆನೆಂಬಿರಿ !*
*ಆ ಗಂಟೆಯ ಧ್ವನಿಗೆ*
*ಒಂದು ಗೋಟಡಕೆಯ ಸೋಲ ಗುರು ರಾಮನಾಥನು ! ॥೧೨೯॥*

ಬಸವಣ್ಣ : *ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ*
*ಹರದ ಕುಳ್ಳಿರ್ದ ನಮ್ಮ ಮಹದೇವ ಸೆಟ್ಟಿ !*
*ಒಮ್ಮನವಾದರೆ ಒಡನೆ ನುಡಿವನು*
*ಇಮ್ಮನವಾದರೆ ನುಡಿಯನು*
*ಕಾಣೆಯ ಸೋಲ ಅರ್ಧ ಕಾಣೆಯ ಗೆಲ್ಲ*
*ಜಾಣ ನೋಡವ್ವ ನಮ್ಮ ಕೂಡಲ ಸಂಗಮದೇವ ॥೭೨॥*

ಅಲ್ಲಮಪ್ರಭು : *ಧರೆಯ ಮೇಲೊಂದು*
*ಪಿರಿದಪ್ಪ ಸಂತೆಯ ನೆರವಿಗೆ ಬಂದವರನೇನೆಂಬೆನು !*
*ಪರಿ ಪರಿಯ ಭಂಡದ ವ್ಯವಹಾರದೊಳಗೆ*
*ಕೊಡಲಿಲ್ಲ – ಕೊಳಲಿಲ್ಲ !*
*ವೃಥಾ ವಿಳಾಸವಿದೇನೋ ?*
*ಅರೆ ಮರುಳೆಂಬ ಶಿವನು*
*ನೆರೆ ಮರುಳೆಂಬ ಜಗವ*
*ಹುಟ್ಟಿಸಿದ ಪರಿಯ ಕಂಡು ಬೆರಗಾದೆ, ಗುಹೇಶ್ವರ ॥೪೩೨॥*

ವಚನಗಳನ್ನು ಅರ್ಥಮಾಡಿಕೊಳ್ಳುವಾಗ ಸುವಿಚಾರಮಾರ್ಗವನ್ನು ಅನುಸರಿಸಬೇಕು : ''ನಾನೇನ ಮಾಡಲಿ ? ಬಡವನಯ್ಯ !'' ಎಂಬಲ್ಲಿ 'ನಾನು' ಎಂದರೆ ಬಸವಣ್ಣ ಎಂದು ಗ್ರಹಿಸುವುದು ಸೀಮಿತವಾಗುತ್ತದೆ. ಈ ವಚನವನ್ನು ನುಡಿದ – ಕೇಳಿದ ಎಲ್ಲ ಸಹೃದಯರು 'ನಾನು' ವ್ಯಾಪ್ತಿಯಲ್ಲಿ ಬರುತ್ತಾರೆ. ವಚನಗಳು ವ್ಯಷ್ಟಿಯನ್ನು ಮೀರಿದ ಸಮಷ್ಟಿಯ ಅಭಿವ್ಯಕ್ತಿಗಳಾಗಿವೆ. ''ಹಸಿವೆಂಬ ಹೆಬ್ಬಾವು ಬಸಿರ ಬಂದು ಹಿಡಿದೊಡೆ ವಿಷವೇರಿತ್ತಯ್ಯ ಆಪಾದ ಮಸ್ತಕಕ್ಕೆ'' (೨೨) ಎಂಬ ದಾಸಿಮಯ್ಯನ ವಚನದಲ್ಲಿರುವ 'ಬಸಿರು' (= ಹೊಟ್ಟೆ) ಶಬ್ದವನ್ನು 'ವ್ಯಕ್ತಿಯ ಬಸಿರು' ಎಂದು ಮಾತ್ರ ಗ್ರಹಿಸಿದರೆ ಸೀಮಿತವಾಗುತ್ತದೆ. ಇದನ್ನು ಕುಟುಂಬದ ಬಸಿರು, ಸಮಾಜದ ಬಸಿರು ಎಂಬಂತೆ ಸುವಿಶಾಲವಾಗಿ ಗ್ರಹಿಸಬೇಕು. ಆದರೆ ದುರದೃಷ್ಟವಶಾತ್ ವಚನಗಳನ್ನು ವ್ಯಕ್ತಿನಿಷ್ಠವಾಗಿ ಮಾತ್ರ ಅರ್ಥೈಸಿಕೊಂಡುಬರುವ ರೂಢಿ ಇನ್ನೂ ಮುಂದುವರೆದಿದೆ. ಈ ಪ್ರವೃತ್ತಿ ಹೀಗೆ ಮುಂದುವರಿದರೆ, ವಚನಗಳಿರಲಿ ನಮ್ಮ ಉದ್ಧಾರವೂ ಆಗುವುದಿಲ್ಲ ಎಂಬುದನ್ನು ಮರೆಯಬಾರದು. ಇದುವರೆಗೆ ನನ್ನ ಮಾತುಗಳನ್ನು ಆಲಿಸಿದ ನಿಮ್ಮೆಲ್ಲರಿಗೂ ವಂದಿಸುತ್ತಾ ವಿರಮಿಸುತ್ತೇನೆ, ನಮಸ್ಕಾರ !

*(ವಿ.ಸೂ. : ಈ ಲೇಖನದಲ್ಲಿರುವ ವಚನ ಸಂಬಂಧಿಯಾದ ಸಂಖ್ಯೆಗಳು ಡಾ॥ ಎಲ್. ಬಸವರಾಜು ಅವರ ವಚನ ಸಂಪಾದನಾ ಗ್ರಂಥಗಳಿಗೆ ಸೇರಿದ್ದಾಗಿವೆ. ಈ ಲೇಖನವನ್ನು ದಿನಾಂಕ ೫-೬-೨೦೦೬ ರಂದು ರಾಜ್ಯ ದೇವಾಂಗ ನೌಕರರ ವತಿಯಿಂದ ಏರ್ಪಡಿಸಿದ್ದ ದೇವರ ದಾಸಿಮಯ್ಯ ವಿಚಾರ ಸಂಕಿರಣದಲ್ಲಿ ಮಾಡಿದ ಭಾಷಣವನ್ನು ಆಧರಿಸಿ ರಚಿಸಲಾಗಿದೆ.)*

ವಿ. ಚಂದ್ರಶೇಖರ ಸಂಗಲಿ
[illegible]
[illegible]



# ರಿಫ್ರೆಶರ್ ಕೋರ್ಸ್‌ಗಳೆಂದರೆ...

ಬನ್ನಾಡಿ ಸಬಿತಾ

ಇಂದು ಉನ್ನತ ಶಿಕ್ಷಣ ಕ್ಷೇತ್ರದಲ್ಲಿರುವ, ಅದರಲ್ಲೂ ಮಾನವಿಕ ವಿಭಾಗಗಳಲ್ಲಿರುವ ಶ್ರದ್ಧಾವಂತ ಶಿಕ್ಷಕರ ಎದುರಿಗೆ ಹಲವು ಸವಾಲುಗಳಿವೆ. ಅವುಗಳಲ್ಲಿ ಮುಖ್ಯವಾದದ್ದು ತಮ್ಮ ಮತ್ತು ತಮ್ಮ ವಿಷಯಗಳ ಪ್ರಸ್ತುತತೆಯ ಪ್ರಶ್ನೆ. ಈ ಸಮಾಜದಲ್ಲಿ ಯು.ಜಿ.ಸಿ. ಸಂಬಳ ಪಡೆಯುತ್ತಿರುವವರ ಬಗೆಗೆ ಮಿಶ್ರ ಪ್ರತಿಕ್ರಿಯೆಗಳಿವೆ. (ಅದನ್ನು ಪಡೆಯದೆ ದಿನಗೂಲಿಗಳಾಗಿರುವ ಅಧ್ಯಾಪಕರೇ ಈಗ ಹೆಚ್ಚು.) ಒಂದೆಡೆ ಇವರಿಗೇಕಿಷ್ಟು ಸಂಬಳ ಎಂಬ ಪ್ರಶ್ನೆಯೊಂದಾದರೆ, ಇನ್ನೊಂದೆಡೆ ಇಷ್ಟು ಸಂಬಳ ಪಡೆಯುತ್ತಾರೆಂಬ ಕಾರಣಕ್ಕಾಗಿಯೇ ಅವರಿಗೆ ಗೌರವವೂ ಇದೆ. ಖಾಸಗಿ ಕ್ಷೇತ್ರದಲ್ಲಿ ಲಕ್ಷಗಟ್ಟಲೆ ಸಂಬಳ ಪಡೆವವರ ಬಗೆಗಾಗಲೀ, ಸರ್ಕಾರಿ ಕ್ಷೇತ್ರದ ಲಂಚಕೋರರ ಬಗೆಗಾಗಲೀ ಇಂತಹ ಕಟು ನಿಲುವುಗಳು ಏಕಿಲ್ಲ ಎಂಬುದು ನೀಗಿಕೊಳ್ಳಲಾಗದ ಸಮಸ್ಯೆಯೇ. ಆದರೂ, ಉಪನ್ಯಾಸಕ ವರ್ಗವನ್ನು ಹೀಗೆ ಸಮಾಜವು ನೋಡುತ್ತಿರುವುದೇಕೆ, ಎಂಬ ಪ್ರಶ್ನೆಯನ್ನು ನಾವು ಗಂಭೀರವಾಗಿ ಕೇಳಿಕೊಳ್ಳಬೇಕಾಗಿದೆ.

ಈ ಪ್ರತಿಕ್ರಿಯೆಗೂ, ಸಮಾಜವು ಕೊಡುವ ಆದ್ಯತಾ ವಲಯಕ್ಕೂ ಪರಸ್ಪರ ಸಂಬಂಧವಿದೆ. ಸರಕುಗಳ ಬೆಂಬತ್ತಿರುವ ಹುಚ್ಚುಕುದುರೆಗಳ ನಡುವೆ ನಾವೂ ಓಡಬೇಕೇ ಅಥವಾ ಅವರ ವೇಗಕ್ಕೆ ತಡೆಯೊಡ್ಡಿ ಸರಕುಗಳಾಚೆಗೆ ಇರುವ ಮನುಷ್ಯ ಜಗತ್ತಿನೆಡೆಗೆ ಅವರ ಗಮನ ತಿರುಗಿಸಬೇಕೇ ಎಂಬಂತಹ ಪ್ರಶ್ನೆಗಳನ್ನು ನಾವೀಗ ಕೇಳಿಕೊಳ್ಳಬೇಕಾಗಿದೆ. ಉಪನ್ಯಾಸಕ ಕುಟುಂಬದ ಸದಸ್ಯರಲ್ಲಿ ಅನೇಕರು ಸವಲತ್ತುಗಳ ಸದುಪಯೋಗವನ್ನು ಚೆನ್ನಾಗಿಯೇ ಮಾಡಿಕೊಳ್ಳುತ್ತಿದ್ದಾರೆ. ಮನೆ, ಕಾರು, ಮೊಬೈಲು, ಒಡವೆಗಳಿಗೆ ಈಗ ಕೊರತೆಯೇನೂ ಇಲ್ಲ. ನಾವೀಗ ಭೌತಿಕವಾಗಿ ಬಡವರಲ್ಲ. ಇದರಲ್ಲಿ ಯಾವ ತಪ್ಪೂ ಇಲ್ಲ. ಆದರೆ ಇದರಾಚೆಗೆ ಏನು ? ಕೇವಲ ಈ ವಸ್ತುಗಳು ನಮಗೆ ಘನತೆ ತಂದುಕೊಡಬಲ್ಲವೇ ಎಂದರೆ, ಇಲ್ಲ ಎಂಬುದೇ ಉತ್ತರ. ಇವೆಲ್ಲವೂ ಕೇವಲ ಅಲಂಕಾರಗಳೇ ಹೊರತು ಜೀವದ್ರವ್ಯಗಳಲ್ಲ. ನಮ್ಮ ಆಯ್ಕೆಯ ವಿಷಯಗಳ ಬಗೆಗಿನ ನಮ್ಮ ಜ್ಞಾನಮಟ್ಟ, ಕಾಳಜಿ, ಒಲವುಗಳೇ ನಮ್ಮ ಜೀವದ್ರವ್ಯಗಳು.

ನಾಗಾಲೋಟದಲ್ಲಿ ಓಡುತ್ತಿರುವ ಸಾಫ್ಟ್‌ವೇರ್ ಕ್ಷೇತ್ರ, ಬಯೋಟೆಕ್ ಕ್ಷೇತ್ರ, ಮಾರುಕಟ್ಟೆ ವಲಯಗಳನ್ನು ದಿಗ್ಭ್ರಮೆಯಿಂದ ನೋಡುತ್ತಿರುವ ಸಮಾಜ ಇದೇ ನಿಜವೆಂಬ ಭ್ರಾಂತಿಗೆ ಬಿದ್ದಿದೆ. ಈ ವಲಯಗಳಲ್ಲಿ ಹಗಲೂ ರಾತ್ರಿ ದುಡಿಯುವ ಯಂತ್ರದ ಬಿಡಿಭಾಗಗಳಾಗಿರುವ ನಿರ್ವೀರ್ಯ, ನಿರ್ಮಮಕಾರದ ಮನುಷ್ಯಾಕೃತಿಗಳಿಗೆ ತಾಯಮಡಿಲಿನ ಬಿಸುಪು, ಮನುಷ್ಯ ಸಂಬಂಧಗಳ ಸ್ಪರ್ಶದ ರೋಮಾಂಚನಗಳು ಕಳೆದುಹೋಗಿವೆ. ಆದರೆ, ಅವರ ಬದುಕಿನ ಸರ್ಕಸ್ಸನ್ನೇ ನಿಜ ಬದುಕೆಂದು ಭ್ರಮಿಸಿ ಅವರಂತಾಗಲು ಹಂಬಲಿಸಿ ತಮ್ಮ ಮಡಿಲನ್ನು ಬರಿದಾಗಿಸಿಕೊಳ್ಳುತ್ತಿರುವ ದುರಂತ ನಮ್ಮನ್ನು ಆವರಿಸಿಕೊಳ್ಳುತ್ತಿದೆ.

ಇಂತಹ ಸಂದಿಗ್ಧ ಸನ್ನಿವೇಶದಲ್ಲಿ ಸಿಲುಕಿರುವ ಉಪನ್ಯಾಸಕ ವೃಂದವೂ ಇದೇ ನಿಜ ಎಂಬ ಭ್ರಮೆಗೆ ಬಿದ್ದಂತಿದೆ. ಹೀಗಾಗಿ, ಎಷ್ಟೋ ಬಾರಿ ಆತ್ಮವಿಶ್ವಾಸವಿಲ್ಲದ ಖಾಲಿ ಡಬ್ಬಿಗಳಂತೆ ಬಡಬಡಿಸುತ್ತಾ ತಮ್ಮ ಮಕ್ಕಳನ್ನು ಇಂಜಿನಿಯರುಗಳನ್ನಾಗಿ ಮಾಡುವುದರಲ್ಲಿ ಸಾರ್ಥಕತೆ ಕಂಡುಕೊಳ್ಳುತ್ತಾ, ವಿದ್ಯಾರ್ಥಿಗಳಾಗಿ ಬರುವ ಇತರರ ಮಕ್ಕಳನ್ನು ಪರೀಕ್ಷೆಯಲ್ಲಿ ಆದಷ್ಟು ಅಂಕ ಪಡೆಯಲು ಸಿದ್ಧತೆ ಮಾಡುತ್ತಾ (ಒಮ್ಮೊಮ್ಮೆ ಅದನ್ನೂ ಮಾಡದೆ ಉಡಾಫೆ ಹೊಡೆಯುತ್ತಾ) ಮತ್ತು ಇದೇ ಸರಿ ಎಂಬ ಹುಂಬತನವನ್ನು ಸಮಾಜವು ಆಹ್ವಾನಿಸಿಕೊಳ್ಳುತ್ತಾ ಇದೆ.

ಆದರೆ, ಅದಮ್ಯ ಜೀವನಪ್ರೀತಿಯೆಂಬ ಕನಸಿನ ಕೂಸನ್ನು ಹೆರಲು ತನ್ನ ಮಜ್ಜೆ ಮಾಂಸಗಳು ಕಸುವನ್ನು ಪಡೆದುಕೊಳ್ಳುವಂತೆ ಮಾಡುವ ಹೊಣೆಗಾರಿಕೆ ಶಿಕ್ಷಕ ಸಮುದಾಯದ ಮೇಲಿದೆ ಎಂಬುದನ್ನು ನೆನಪಿಸಿಕೊಳ್ಳಬೇಕಾದ ಕಾಲವಿದು. ಸರ್ಕಸ್ ಮಾಡುವುದು ಬಿಟ್ಟು ಸಾರ್ಥಕ ಬದುಕಿಗಾಗಿ ಹಂಬಲಿಸಬೇಕಾದುದನ್ನು ಸಮಾಜಕ್ಕೆ ನೆನಪಿಸಬೇಕಾದವರು ಶಿಕ್ಷಕರು. ಅದಕ್ಕಾಗಿ ಮೊದಲು ಅವರು ಈ ಪ್ರಶ್ನೆಗಳಿಗೆ ಉತ್ತರಿಸುವ ತಾಕತ್ತನ್ನು ಪಡೆಯಬೇಕಾಗಿದೆ. ಜ್ಞಾನದ ಕೊಳದ ನೀರನ್ನು ಆಪೋಶನ ಮಾಡಿ ತಮ್ಮ ಬರಡನ್ನು ನೀಗಿಕೊಳ್ಳಬೇಕಾಗಿದೆ.

ಈ ಎಲ್ಲಾ ಭಾವಗಳು ದಾಂಗುಡಿ ಇಟ್ಟದ್ದು ಇತ್ತೀಚೆಗೆ ಹಂಪಿ ಕನ್ನಡ ವಿಶ್ವವಿದ್ಯಾಲಯದಲ್ಲಿ ಕನ್ನಡ ಸಾಹಿತ್ಯ ವಿಭಾಗವು ಆಯೋಜಿಸಿದ್ದ ಪುನರ್ಮನನ ಶಿಬಿರದಲ್ಲಿ ನಾನು ಭಾಗಿಯಾಗಿದ್ದಾಗ. ಇಂತಹ ಗಂಭೀರ ಶಿಬಿರಗಳ ಬಗೆಗೆ ನಮ್ಮ ಉಪನ್ಯಾಸಕ ಕುಟುಂಬದ ಹಲವು ಸದಸ್ಯರ ಪ್ರಶ್ನೆಯೇನೆಂದರೆ, ಇದೆಲ್ಲಾ ನಮಗೆ ಅಗತ್ಯವಿದೆಯೇ ಎಂಬುದು. ಇಷ್ಟೆಲ್ಲಾ ಆಳಕ್ಕೆ ಇಳಿದು, ಇದನ್ನೆಲ್ಲಾ ವಿದ್ಯಾರ್ಥಿಗಳ ಮೇಲೆ ಹೇರಿದರೆ, ಅವರು ಇನ್ನಷ್ಟು ದೂರ ಓಡುತ್ತಾರೆ ಎಂಬ ಆತಂಕ ಹಲವರಲ್ಲಿದೆ. ಆದರೆ, ಇದೂ ಒಂದು ಭ್ರಮೆ ಎಂಬುದು ನನಗೀಗಾಗಲೇ ಅರಿವಿಗೆ ಬಂದಿರುವ ವಿಷಯ. ವಿಷಯವೊಂದನ್ನು ಹಲವು ಮಗ್ಗುಲುಗಳಿಂದ ವಿಶ್ಲೇಷಿಸಿದಾಗ ವಿದ್ಯಾರ್ಥಿಗಳು ನನಗೆ ಇನ್ನಷ್ಟು ಹತ್ತಿರವಾಗಿದ್ದಾರೆ. ಒಂದು ವಿಷಯದ ಆಳಕ್ಕೆ ಹೋದಾಗ, ಎದುರಾಗುವ

ಅದಮ್ಯ ಜೀವನಪ್ರೀತಿಯೆಂಬ ಕನಸಿನ ಕೂಸನ್ನು ಹೆರಲು ತನ್ನ ಮಜ್ಜೆ ಮಾಂಸಗಳು ಕಸುವನ್ನು ಪಡೆದುಕೊಳ್ಳುವಂತೆ ಮಾಡುವ ಹೊಣೆಗಾರಿಕೆ ಶಿಕ್ಷಕ ಸಮುದಾಯದ ಮೇಲಿದೆ ಎಂಬುದನ್ನು ನೆನಪಿಸಿಕೊಳ್ಳಬೇಕಾದ ಕಾಲವಿದು. ಸರ್ಕಸ್ ಮಾಡುವುದು ಬಿಟ್ಟು ಸಾರ್ಥಕ ಬದುಕಿಗಾಗಿ ಹಂಬಲಿಸಬೇಕಾದುದನ್ನು ಸಮಾಜಕ್ಕೆ ನೆನಪಿಸಬೇಕಾದವರು ಶಿಕ್ಷಕರು. ಅದಕ್ಕಾಗಿ ಮೊದಲು ಅವರು ಈ ಪ್ರಶ್ನೆ ಗಳಿಗೆ ಉತ್ತರಿಸುವ ತಾಕತ್ತನ್ನು ಪಡೆಯಬೇಕಾಗಿದೆ.



ಹಲವು ಪ್ರಶ್ನೆಗಳಿಗೆ ನಾವು ಉತ್ತರಿಸುವ ಸಾಮರ್ಥ್ಯ ಬೆಳೆಸಿಕೊಳ್ಳುತ್ತೇವೆ. ನಮ್ಮ ಈ ಆತ್ಮವಿಶ್ವಾಸ ವಿದ್ಯಾರ್ಥಿಗಳ ಹಾಗೂ ಸಮಾಜದ ಇತರರ ಗೌರವಕ್ಕೆ ನೀರೆರೆಯುತ್ತದೆ. ಅದಲ್ಲದೆ, ನಮ್ಮೊಳಗಣ ಖಾಲಿತನ ನಮ್ಮ ಮಾತಲ್ಲೂ ಕಂಡು ಬಂದಾಗ – ಸಮಾಜ ಸರಿಯಾಗಿಯೇ ಕೇಳುತ್ತದೆ, ''ನಿಮಗ್ಯಾಕೆ ಇಷ್ಟು ಸಂಬಳ ?''

ವಿಶ್ವವಿದ್ಯಾನಿಲಯಗಳೂ ತಮ್ಮ ಹೊಣೆಗಾರಿಕೆಯನ್ನು ಸರಿಯಾಗಿ ನಿರ್ವಹಿಸ ಬೇಕಾದ್ದು ಇಂದಿನ ಅತಿ ದೊಡ್ಡ ಅಗತ್ಯ. ಯು.ಜಿ.ಸಿ. ಕಡ್ಡಾಯಗೊಳಿಸಿದ ಪುನರ್ಮನನ ಶಿಬಿರಗಳು ಸಂಯೋಜಕರಿಗೂ ಶಿಬಿರಾರ್ಥಿಗಳಿಗೂ ಕೇವಲ 'ಅನಿವಾರ್ಯ ಕರ್ಮ'ಗಳಾಗಬೇಕಿಲ್ಲ. ಹಂಪಿಯ ಶಿಬಿರದಲ್ಲಿ ಡಾ॥ ಅಮರೇಶ ನುಗುಡೋಣಿ ಹಾಗೂ ಬಳಗದವರು ಸುಮಾರು ೭೦ಕ್ಕೂ ಹೆಚ್ಚು ಮೌಲಿಕ ಲೇಖನ ಗಳನ್ನು ಆರಿಸಿ ಕನ್ನಡ ನಾಡಿನ ಹಲವು ಅತ್ಯುತ್ತಮ ವಿಷಯತಜ್ಞರನ್ನು ಕರೆಸಿಕೊಂಡು ತಮ್ಮ ಜವಾಬ್ದಾರಿ ತೋರಿದ್ದಾರೆ. ಇದರ ನಡುವೆಯೂ ೩-೪ ಜನ ವಿಷಯತಜ್ಞರು ಅನುತ್ತೀರ್ಣರಾಗಿದ್ದಾರೆ. ಇದಕ್ಕಿಂತ ಮಿಗಿಲಾಗಿ ಹೊಣೆಗಾರಿಕೆಯ ಭಾರವನ್ನು ಶಿಬಿರಾರ್ಥಿಗಳ ಭುಜಕ್ಕೂ ಇವರು ರವಾನಿಸಿದ್ದರು. ಪ್ರತೀ ಉಪನ್ಯಾಸದ ಮೊದಲು, ದಿನಕ್ಕೆ ನಾಲ್ಕು ಜನ ಶಿಬಿರಾರ್ಥಿಗಳು ಟಿಪ್ಪಣಿ ಮಂಡಿಸಬೇಕಾಗಿತ್ತು. ಅದಕ್ಕಾಗಿ ಪ್ರತೀ ಶಿಬಿರಾರ್ಥಿ ದಿನಕ್ಕೆ ನಾಲ್ಕು ಲೇಖನಗಳನ್ನು ಕಡ್ಡಾಯವಾಗಿ ಓದಲೇಬೇಕಾಗಿತ್ತು. (ಈ ಎಲ್ಲಾ ಲೇಖನಗಳನ್ನೂ ಮೊದಲೇ ಜೆರಾಕ್ಸ್ ಪ್ರತಿಯಲ್ಲಿ ಒದಗಿಸಲಾಗಿತ್ತು.) ಶಿಬಿರವು ಅಂತಿಮ ಹಂತ ತಲುಪುವ ಹೊತ್ತಿಗೆ ಟಿಪ್ಪಣಿ ಮಂಡಿಸುತ್ತಿದ್ದ ಶಿಬಿರಾರ್ಥಿಗಳಲ್ಲಿ ಆತ್ಮವಿಶ್ವಾಸ ಹೆಚ್ಚುತ್ತಾಹೋಗಿದ್ದು ಈ ಶಿಬಿರದ ಯಶಸ್ಸಿಗೆ ಒಂದು ಮಾನದಂಡ ವಾಗಿತ್ತು. ಆದರೆ, ಇಲ್ಲೂ ಕೆಲವು ಶಿಬಿರಾರ್ಥಿಗಳು ಇದರ ಪೂರ್ಣ ಪ್ರಯೋಜನ ಪಡೆಯಲಿಲ್ಲ ಎಂಬುದು ವಿಷಾದದ ವಿಷಯವಾದರೂ ಕಡೆಯಪಕ್ಷ ಬೆಳೆಯುವುದಕ್ಕೆ ಅವರಿಗೆ ಒಂದು ಕಿರುದಾರಿಯನ್ನಂತೂ ಶಿಬಿರ ತೋರಿದೆ.

ಪ್ರತೀ ವಿಶ್ವವಿದ್ಯಾನಿಲಯದಲ್ಲೂ ಇಂತಹ ಉಪಯುಕ್ತ ಶಿಬಿರಗಳನ್ನೂ ಕಾರ್ಯಕ್ರಮ ಗಳನ್ನೂ ಆಯೋಜಿಸಬಲ್ಲ ಸಮರ್ಥ ಉಪನ್ಯಾಸಕರು ಕೆಲವರಾದರೂ ಇದ್ದಾರೆ. ಆದರೆ, ಅವರಿಗೆ ಅವಕಾಶವನ್ನೂ ಸ್ವಾತಂತ್ರ್ಯವನ್ನೂ ಕೊಡದೆ, ಜ್ಞಾನದ ಸಿಹಿಯೇ ಶತ್ರುವಾಗಿರುವ ಬೌದ್ಧಿಕ ಸಕ್ಕರೆಕಾಯಿಲೆಯಿಂದ ಬಳಲುತ್ತಿರುವ ಕಾಣದ ಕೈಗಳ ಪ್ರಭಾವೀ ಹಿಂಡು ಮೇಲುಗೈ ಸಾಧಿಸುತ್ತಾ ವಿಶ್ವವಿದ್ಯಾನಿಲಯಗಳ ಬಗೆಗೇ ಸಾಮಾನ್ಯರು ನಂಬಿಕೆ ಕಳೆದುಕೊಳ್ಳುವಂತಾಗುತ್ತಿದೆ. (ಇಂತಹವರು ಕರೆಸುವ ಮತ್ತು ಎಷ್ಟೋ ವಿಷಯತಜ್ಞರೆಂಬ ಬಿರುದುಹೊತ್ತು ಬರುವವರು ಬಫೂನುಗಳಂತೆ ಒಂದಿಡೀ ಗಂಟೆ ಜೋಕ್ ಮಾಡುತ್ತಾ, ಸ್ವರತಿಯ ಭಾಷಣ ಬಿಗಿಯುತ್ತಾ, ವಿಷಯದ ಮೇಲಿನ ಗಂಭೀರ ಪ್ರಶ್ನೆಗಳನ್ನು ಉಫ್ ಎಂದು ಊದುತ್ತಾ ಕಾಲಹರಣ ಮಾಡುತ್ತಿರುತ್ತಾರೆ.) ಹೀಗಿರುವಾಗ ನುಗುಡೋಣಿ ಬಳಗದವರಿಗೆ ಒತ್ತಾಸೆಯಾಗಿ ನಿಂತ ಹಂಪಿ ವಿಶ್ವವಿದ್ಯಾಲಯದ ಕುಲಪತಿಗಳು ಹಾಗೂ ಕುಲಸಚಿವರಿಗೆ ಯಶಸ್ಸಿನ ಬಹುಪಾಲು ಕೀರ್ತಿ ಸಲ್ಲುತ್ತದೆ.

ಇಂತಹ ವಾತಾವರಣವಿದ್ದಾಗ, ಸಂಪನ್ಮೂಲ ವ್ಯಕ್ತಿಗಳ ಬಳಗದಲ್ಲಿ ಚಾಲ್ತಿಯಲ್ಲಿ ರುವಂತೆ, ಅವರು ಆತ್ಮಹತ್ಯಾದಳದ ಸದಸ್ಯರಾಗಬೇಕಿಲ್ಲ ಹಾಗೂ ಶಿಬಿರಾರ್ಥಿಗಳ ಬಳಗದಲ್ಲಿ ಚಾಲ್ತಿಯಲ್ಲಿರುವಂತೆ ರಿಫ್ರೆಶರ್ ಕೋರ್ಸ್‌ಗಳು ಕಾನ್ಸಂಟ್ರೇಶನ್ ಕ್ಯಾಂಪ್‌ಗಳೂ ಆಗಬೇಕಿಲ್ಲ.

ಬನ್ನಾಡಿ ಸಬಿತಾ
ಕನ್ನಡ ಉಪನ್ಯಾಸಕರು, ಸರ್ ಎಂ. ವಿ. ಸರ್ಕಾರಿ ಕಲಾ ಮತ್ತು ವಾಣಿಜ್ಯ ಕಾಲೇಜು, ಭದ್ರಾವತಿ

# ರಂಗಭೂಮಿ

ಸಮಾಜಾಭಿಮುಖವಾಗದ
ಆಂದೋಲನ ಹೋರಾಟ
ಚಳುವಳಿ
ವ್ಯಕ್ತಿಗತ ಮುಖವಾಡದೊಳಗೆ
ಚಾಲನೆ ಪಡೆಯುತ್ತಾ...
ಇವುಗಳ ಗೋಡುವೆ ಇರದಂತ
ಸಾಮಾನ್ಯರ ಬಾಳು
ಅಕ್ಕಿ ಬೇಳೆ – ಉಪ್ಪು ಖಾರ ಸೂರು
ಈ ಲೆಕ್ಕದೊಳಗೆ ದಿನರಾತ್ರಿ ಕಳೆಯುವಾಗ
ಕೇಳುಗರಿರದ ಇವರ ಕೂಗು;
ಕೇಳಿದ್ದವರ ವೃತ್ತಗಳು
ನಿರ್ಮಾಣ ನಿರ್ವಾಣವಾದಗಳೆ
ಒಳಗೊಳಗಿನ ಮುಸುಕಿನ
ಆಟದ ಹೂರಣ
ಸಿದ್ಧಾಂತ ಬದ್ಧತೆಗಳ ಘೋಷಣೆ
ಪ್ರಜ್ಞಾವಂತರ ಒಣಪ್ರತಿಷ್ಠೆಯ
ಈ ರಂಗುಭೂಮಿ
ರಂಗಾಗೆ ಪ್ರತಿಷ್ಠೆಗೊ ಪ್ರತ್ಯೇಕಕೊ
ಮೆರವಣಿಗೆಯಾಗುವಂತ
ಒಂದು ವಿಪರ್ಯಾಸ ಯೋಜಕ.





ರಜಿಯಾ ಡಿ. ಬಿ.
W/o ಡಾ॥ ಡಿ. ಬಿ. ಫಕ್ರುದ್ದೀನ್
ಪ್ರಾಂಶುಪಾಲರು,
ಹೆಚ್.ಕೆ.ಬಿ.ಕೆ. ಇಂಜಿನಿಯರಿಂಗ್ ಕಾಲೇಜು
೨೨/೧, ನಾಗವಾರ, ಬೆಂಗಳೂರು - ೫೬೦ ೦೪೫



ದೃಷ್ಟಾಂತ, ರೂಪಕಗಳು ತಾತ್ವಿಕಾಂಶಗಳನ್ನು ತಮ್ಮೊಳಗೆ ಸಮೀಕರಿಸಿಕೊಂಡು ಒಂದು ಸಂಗತಿಯನ್ನು ಅಥವಾ ಕಥಾಂಶವನ್ನು ನಿರೂಪಿಸುತ್ತವೆ. ಅಲ್ಲಿ ತತ್ವ ವ್ಯಂಜಕವಾಗುತ್ತದೆ. ಪ್ರತಿಮಾರೂಪದ ಕಥೆಗಳು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಮತ್ತೊಂದು ಕೆಲಸವನ್ನು ಮಾಡುತ್ತವೆ. ಅದೇ ದೃಶ್ಯ ಕಟ್ಟುವ – ಚಿತ್ರ ಬಿಡಿಸುವ ಕೆಲಸ. ಓದುಗರ/ಕೇಳುಗರ ಮನಸ್ಸಿನಲ್ಲಿ ದೃಶ್ಯವೊಂದನ್ನು ಕಾಣಿಸಿ ಅಲ್ಲಿಂದಾಚೆಗೂ ಅವು ಧ್ವನಿಪೂರ್ಣವಾಗುತ್ತವೆ. ಸಾಮಾನ್ಯವಾಗಿ ಈ ಮಾದರಿಯ ಕಥೆಗಳು ಸಂಕ್ಷಿಪ್ತ ರೂಪದವು. ಅವು ತೀವ್ರ ಹಾಗೂ ತೀಕ್ಷ್ಣಗತಿಯಲ್ಲಿ ತತ್ತ್ವಸಂದೇಶವನ್ನು ಮೂಡಿಸುತ್ತವೆ.

# ತತ್ವ ಪರಿಭಾಷೆಯ ಕಥೆಗಳು

ಡಾ|| ಸರಸ್ವತಿ ವಿಜಯಕುಮಾರ್

ಕಥೆಗಳಿಗೂ ತತ್ವಪ್ರತಿಪಾದನೆಗೂ ಬಹಳ ಹಿಂದಿನಿಂದಲೂ ವಿಶೇಷ ಸಂಬಂಧ ಬೆಳೆದುಬಂದಿದೆ. ಯಾವುದೇ ಮತಧರ್ಮಗಳ ಪ್ರತಿಪಾದನೆಗೆ ಕಥೆಗಳು ಜೀವಸಂಜೀವಿನಿಗಳಾಗಿ ವ್ಯವಹರಿಸಿರುವುದನ್ನು ಮನಗಾಣಬಹುದಾಗಿದೆ. ಅವುಗಳಲ್ಲಿ ದೃಷ್ಟಾಂತ, ರೂಪಕ, ಪ್ರತಿಮಾ ರೂಪದ ಕಥೆಗಳೂ ಕೂಡ ಕಥಾಜಗತ್ತಿನಲ್ಲಿ ಮನೆಮಾಡಿಕೊಂಡಿವೆ.

ದೃಷ್ಟಾಂತ, ರೂಪಕಗಳು ತಾತ್ವಿಕಾಂಶಗಳನ್ನು ತಮ್ಮೊಳಗೆ ಸಮೀಕರಿಸಿಕೊಂಡು ಒಂದು ಸಂಗತಿಯನ್ನು ಅಥವಾ ಕಥಾಂಶವನ್ನು ನಿರೂಪಿಸುತ್ತವೆ. ಅಲ್ಲಿ ತತ್ವ ವ್ಯಂಜಕವಾಗುತ್ತದೆ. ಪ್ರತಿಮಾರೂಪದ ಕಥೆಗಳು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಮತ್ತೊಂದು ಕೆಲಸವನ್ನು ಮಾಡುತ್ತವೆ. ಅದೇ ದೃಶ್ಯಕಟ್ಟುವ – ಚಿತ್ರ ಬಿಡಿಸುವ ಕೆಲಸ. ಓದುಗರ/ಕೇಳುಗರ ಮನಸ್ಸಿನಲ್ಲಿ ದೃಶ್ಯವೊಂದನ್ನು ಕಾಣಿಸಿ ಅಲ್ಲಿಂದಾಚೆಗೂ ಅವು ಧ್ವನಿಪೂರ್ಣವಾಗುತ್ತವೆ. ಸಾಮಾನ್ಯವಾಗಿ ಈ ಮಾದರಿಯ ಕಥೆಗಳು ಸಂಕ್ಷಿಪ್ತ ರೂಪದವು. ಅವು ತೀವ್ರ ಹಾಗೂ ತೀಕ್ಷ್ಣಗತಿಯಲ್ಲಿ ತತ್ತ್ವಸಂದೇಶವನ್ನು ಮೂಡಿಸುತ್ತವೆ.

ಪ್ರಸ್ತುತ ಲೇಖನದಲ್ಲಿ, ಕೆಲವು ಸಮಾನ ತಾತ್ವಿಕ ಆಶಯಗಳು ಜೈನಕಥೆಗಳಲ್ಲಿ ಹಾಗೂ ಶ್ರೀ ರಾಮಕೃಷ್ಣ ಪರಮಹಂಸರು ನಿರೂಪಿಸಿರುವ ಕಥೆಗಳಲ್ಲಿ ಹೇಗೆ ಮೂಡಿಬಂದಿವೆಯೆಂಬುದನ್ನು ಪರಿಶೀಲಿಸಲಾಗಿದೆ.

**ಮನಸ್ಸಿನ ವಿವಿಧ ಪರಿಣಾಮಗಳನ್ನು ಚಿತ್ರಿಸುವ ಕಥೆಗಳು**

ಮನಸ್ಸಿನ ವಿವಿಧ ಭಾವ ಪರಿಣಾಮಗಳು ವ್ಯಕ್ತಿಯ ವ್ಯಕ್ತಿತ್ವವನ್ನು ಅರುಹುವಂತಹವು. ಮಾನಸಿಕ ಪರಿಣಾಮಗಳ ವಿವಿಧ ಹಂತಗಳನ್ನು ಜೈನದರ್ಶನವು 'ಲೇಶ್ಯೆ' ಎಂಬ ಪರಿಭಾಷೆಯಲ್ಲಿ ನಿರೂಪಿಸುತ್ತದೆ. ಲೇಶ್ಯೆಯೆಂದರೆ ಮನಸ್ಸಿನಲ್ಲಿ ಅನುರಂಜಿತವಾಗುವ ಭಾವ ಪರಿಣಾಮಗಳು. ಅವು ಒಟ್ಟು ಆರು. ಅವುಗಳನ್ನು ಷಡ್ಲೇಶ್ಯೆಗಳೆಂದೇ ಕರೆಯಲಾಗಿದೆ. ಕೃಷ್ಣ, ನೀಲ, ಕಾಪೋತ, ಪೀತ, ಪದ್ಮ ಮತ್ತು ಶುಕ್ಲಲೇಶ್ಯೆಗಳೆಂದು ಅವುಗಳನ್ನು ಹೆಸರಿಸಲಾಗಿದೆ.

ಜೈನೇತರರಲ್ಲಿ ಮಾನಸಿಕ ಪರಿಣಾಮವನ್ನು ಸಾಮಾನ್ಯವಾಗಿ ಸತ್ವ, ರಜಸ್ ಮತ್ತು ತಮಸ್ ಎಂಬ ಪರಿಭಾಷೆಯಲ್ಲಿ ವಿಂಗಡಿಸಿರುವುದುಂಟು. ಜೈನರು ಹೇಳಿರುವ ಆರು ಲೇಶ್ಯೆಗಳಲ್ಲಿ ಕೃಷ್ಣ ಮತ್ತು ನೀಲ ಲೇಶ್ಯೆಗಳು ತಮೋಗುಣಕ್ಕೂ ಕಾಪೋತ ಮತ್ತು ಪೀತ ಲೇಶ್ಯೆಗಳು ರಜೋಗುಣಕ್ಕೂ ಪದ್ಮ ಮತ್ತು ಶುಕ್ಲ ಲೇಶ್ಯೆಗಳು ಸಾತ್ವಿಕಗುಣಕ್ಕೂ ಹತ್ತಿರವಾದವು. ಅವು ಕ್ರಮವಾಗಿ ನಿಕೃಷ್ಟ, ಮಧ್ಯಮ ಮತ್ತು ಉತ್ಕೃಷ್ಟ ಭಾವಗಳನ್ನು ಸೂಚಿಸುತ್ತವೆ. ಅಲ್ಲದೆ ಲೇಶ್ಯೆಗಳ ನಿರೂಪಣೆಯಲ್ಲಿ ಭಾವ ಮತ್ತು ಬಣ್ಣಗಳ ಸಮೀಕರಣವಿರುವುದನ್ನೂ ಕಾಣಬಹುದು. ಅವು ಕ್ರಮವಾಗಿ ಕಪ್ಪು, ನೀಲಿ, ಬೂದು, ಹಳದಿ, ತಾವರೆಯ ನಸುಗೆಂಪು ಮತ್ತು ಬಿಳಿಬಣ್ಣಗಳನ್ನು ಪ್ರತಿನಿಧಿಸುತ್ತವೆ. ಅದರಂತೆ ತಾಮಸ ಗುಣವನ್ನು ಕಪ್ಪುಬಣ್ಣದಲ್ಲಿಯೂ ರಜೋಗುಣವನ್ನು ಕೆಂಪುಬಣ್ಣದಲ್ಲಿಯೂ ಸಾತ್ವಿಕ ಗುಣವನ್ನು ಬಿಳಿಬಣ್ಣದಲ್ಲಿಯೂ ಗುರುತಿಸುವುದುಂಟು.

ಜೈನಾಗಮ ಗ್ರಂಥಗಳಾದ ಷಟ್ಖಂಡಾಗಮ (ಪ್ರಾಕೃತ - ಕ್ರಿ.ಶ. ೧ನೇ ಶತಮಾನ), ಗೊಮ್ಮಟಸಾರ (ಪ್ರಾಕೃತ - ಕ್ರಿ.ಶ. ೧೨ನೇ ಶತಮಾನ), ಪದಾರ್ಥಸಾರ (ಕನ್ನಡ - ಕ್ರಿ.ಶ. ೧೨ನೇ ಶತಮಾನ) ಮೊದಲಾದ ಗ್ರಂಥಗಳಲ್ಲಿ ಷಡ್ಲೇಶ್ಯೆಗಳ ನಿರೂಪಣೆಯ ಸಂದರ್ಭದಲ್ಲಿ ಒಂದು ಅಪೂರ್ವ ಪ್ರತಿಮೆಯು ಸಸ್ಯಪರಿಸರದ ಹಿನ್ನೆಲೆಯಲ್ಲಿ ದೊರೆಯುತ್ತದೆ. ಅಲ್ಲಿ ಕಂಡುಬರುವ ವಿವರ ಹೀಗಿದೆ :

ಒಂದು ಮಾವಿನ ಮರ. ಅದರ ತುಂಬಾ ಹಣ್ಣುಕಾಯಿಗಳು ತೊನೆದಾಡುತ್ತಿವೆ. ಆ ಹಣ್ಣುಗಳನ್ನು ಪಡೆಯಲು ಆರು ಮಂದಿ ವಿವಿಧ ರೀತಿಗಳಲ್ಲಿ ಸನ್ನದ್ಧರಾಗಿದ್ದಾರೆ. ಮೊದಲನೆಯವನು ಹಣ್ಣುಗಳನ್ನು ಪಡೆಯಲು ಕೊಡಲಿ ಹಿಡಿದು ಆ ಮರವನ್ನೇ ಬುಡಸಮೇತ ಕಡಿಯುವ ಭಾವವನ್ನು ತಳೆದು ಅದಕ್ಕಾಗಿ ಸನ್ನದ್ಧನಾಗಿದ್ದಾನೆ; ಅವನ ಬಣ್ಣ ಕಪ್ಪು. ಎರಡನೆಯವನು ಹಣ್ಣುಗಳಿಗಾಗಿ ಕಾಂಡವನ್ನು ಕಡಿಯಲು ಹೊರಟಿದ್ದಾನೆ; ಅವನ ಬಣ್ಣ ನೀಲಿ. ಮೂರನೆಯವನು ಶಾಖೆಯನ್ನು ಮಾತ್ರ ಕತ್ತರಿಸಿ ಹಣ್ಣುಗಳನ್ನು ಪಡೆಯಲು ಹೊರಟಿದ್ದಾನೆ; ಅವನ ಬಣ್ಣ ಕಾಪೋತ (ಪಾರಿವಾಳದ ಬಣ್ಣ ಅಂದರೆ ಬೂದು ಬಣ್ಣ). ನಾಲ್ಕನೆಯವನು ಒಂದು ಗೊಂಚಲನ್ನು ಮಾತ್ರ ಕಿತ್ತು ಹಣ್ಣನ್ನು ಪಡೆಯಲು ತೊಡಗಿದ್ದಾನೆ; ಅವನ ಬಣ್ಣ ಪೀತ. ಐದನೆಯವನು ಗೊಂಚಲಿನಲ್ಲಿರುವ ತನಗೆ ಬೇಕಾದ ಹಣ್ಣೊಂದನ್ನು ಮಾತ್ರ ಕಿತ್ತುಕೊಳ್ಳುತ್ತಿದ್ದಾನೆ; ಅವನ ಬಣ್ಣ ಪದ್ಮ. ಆರನೆಯವನು ಕೆಳಗೆ ಬಿದ್ದಿರುವ ಹಣ್ಣನ್ನು ಆಯ್ದುಕೊಳ್ಳಲು ಹೊರಟಿದ್ದಾನೆ; ಅವನ ಬಣ್ಣ ಶುಕ್ಲ ಅಂದರೆ ಬಿಳಿ.

ಈ ಆರು ಸಂದರ್ಭಗಳೂ ವ್ಯಕ್ತಿಯ ವಿವಿಧ ಮನಃಸ್ಥಿತಿಗಳನ್ನು ಸಾರುವ ಪ್ರತೀಕವಾಗಿವೆ. ಬುಡಸಮೇತ ಮರವನ್ನು ಉರುಳಿಸಿ ಹಣ್ಣನ್ನು ಪಡೆದುಕೊಳ್ಳುತ್ತೇನೆಂಬ ಮನೋಭಾವದವನ ಮನಸ್ಸು ಅತ್ಯಂತ ಕ್ರೂರ. ಅವನು ಕೃಷ್ಣಲೇಶ್ಯೆಯವನು. ಕೃಷ್ಣಲೇಶ್ಯೆಯವನು ನಿರ್ದಯಿ, ದುಷ್ಟ, ಅತ್ಯಂತ ಕ್ರೂರಿ, ಹಿಂಸಾಪ್ರವೃತ್ತಿಯುಳ್ಳವನು ಎಂಬಿವೇ ಮೊದಲಾದ ವರ್ಣನೆಗಳು ಶಾಸ್ತ್ರಗ್ರಂಥದಲ್ಲಿ ದೊರೆಯುತ್ತವೆ. ಆತನ ಪರಿಣಾಮ ತೀವ್ರತಮ.

ನೀಲಲೇಶ್ಯೆಯವನು ಫಲಭರಿತವಾದ ಮಾವಿನ ಮರವನ್ನು ನೋಡಿ ಅದರ ಕಾಂಡವನ್ನು ಕತ್ತರಿಸಿ ಹಣ್ಣನ್ನು ಕಿತ್ತುಕೊಳ್ಳುವೆನೆಂಬ ಭಾವವುಳ್ಳವನು. ಅವನಾದರೂ ಭೋಗಾಕಾಂಕ್ಷಿ; ದುರಭಿಮಾನವುಳ್ಳವನು; ಮಾಯಾ ಪ್ರಪಂಚಲ್ಲಿ ವ್ಯವಹರಿಸುವವನು. ಆತನ ಪರಿಣಾಮ ತೀವ್ರತರವೆಂದು ಶಾಸ್ತ್ರಗಳು ವರ್ಣಿಸುತ್ತವೆ.

ಕಾಪೋತಲೇಶ್ಯೆಯವನು ಮರವನ್ನಾಗಲೀ, ಕಾಂಡವನ್ನಾಗಲೀ ಕಡಿಯಲಿಚ್ಛಿಸದೆ ಶಾಖೆಯನ್ನು ಕತ್ತರಿಸಿ ಫಲವನ್ನು ಅನುಭವಿಸುತ್ತೇನೆ ಎನ್ನುತ್ತಾನೆ. ಆತನ ಪರಿಣಾಮ ತೀವ್ರ. ಆತ ವಿನಾಕಾರಣ ಮುನಿಸಿಕೊಳ್ಳುವವನು,

ಅಸೂಯಾಪರ, ಕಾರ್ಯಾಕಾರ್ಯ ವಿವೇಕ ರಹಿತ, ದಯಾಹೀನ ಎಂಬಿವೇ ಮೊದಲಾಗಿ ಜೈನಶಾಸ್ತ್ರಗಳು ಅಂತಹ ಲೇಶ್ಯೆಯುಳ್ಳವರನ್ನು ಕುರಿತು ವರ್ಣಿಸುತ್ತವೆ.



ಪೀತಲೇಶ್ಯೆಯವನು ಮರವನ್ನು ನಿರ್ಮೂಲ ಮಾಡುವುದನ್ನಾಗಲೀ ಕಾಂಡವನ್ನು ಕತ್ತರಿಸುವು ದನ್ನಾಗಲೀ ಶಾಖೆಯನ್ನು ಕತ್ತರಿಸುವುದನ್ನಾಗಲೀ ಇಚ್ಛಿಸದೆ ಉಪಶಾಖೆಯನ್ನು ಮಾತ್ರ ಕತ್ತರಿಸಿ ಫಲವನ್ನು ಅನುಭವಿಸುತ್ತೇನೆಂಬ ಮನೋಭಾವ ದವನು. ಆತ ದಯಾಪರ; ಮೃದು ಮನೋಭಾವ ದಿಂದ ಕೂಡಿದವನು; ಕಾರ್ಯಾಕಾರ್ಯಗಳಲ್ಲಿ ಪರಿಜ್ಞಾನವುಳ್ಳವನು. ಆತನ ಪರಿಣಾಮ ಮಂದತಮ.

ಪದ್ಮಲೇಶ್ಯೆಯವನು ಉಪಶಾಖೆಯನ್ನೂ ಕೀಳ ಬಯಸದೆ ಬೇಕಾದ ಫಲವನ್ನು ಮಾತ್ರ ಕಿತ್ತು ಅನುಭವಿಸುತ್ತೇನೆ ಎಂಬ ಮನೋಭಾವದವನು. ಅವನು ಉದಾರ ಮನೋಭಾವದವನು; ಪವಿತ್ರವಾದ ಮನೋವಾಕ್ಕಾಯಗಳನ್ನು ಉಳ್ಳವನು; ಸತ್ಕಾರ್ಯಗಳಲ್ಲಿ ತೊಡಗಿಸಿಕೊಳ್ಳುವವನು; ವಾತ್ಸಲ್ಯ ಗುಣಸಂಪನ್ನ. ಆತನ ಪರಿಣಾಮ ಮಂದತರ.

ಶುಕ್ಲಲೇಶ್ಯೆಯವನು ಮರದ ಮೇಲಿನ ಹಣ್ಣಿನ ತಂಟೆಗೂ ಹೋಗದೆ, ಅದಕ್ಕೆ ಯಾವ ರೀತಿಯ ಬಾಧೆಯನ್ನೂ ಕೊಡದೆ ತಾನೇ ತಾನಾಗಿ ಕೆಳಗೆಬಿದ್ದ ಹಣ್ಣನ್ನು ಮಾತ್ರ ಅನುಭವಿಸುತ್ತೇನೆ ಎನ್ನುವ ಮನೋಭಾವದವನು. ಆತ ಹಿತಮಿತ ವ್ಯವಹಾರಗಳಿಂದ ಕೂಡಿದವನು; ಸಮಾನಭಾವವನ್ನು ಉಳ್ಳವನು; ಅತ್ಯಂತ ದಯಾಪರ; ಪ್ರಾಜ್ಞ, ಆತನ ಪರಿಣಾಮ ಮಂದ. ಶುಕ್ಲಲೇಶ್ಯೆಯೇ ಮುಕ್ತಿಯ ನೆಲೆಯಲ್ಲ. ಅದು ಮುಕ್ತಿಯನ್ನು ಪಡೆಯಲು ಸಾಧನವಾಗುವ ಭಾವ.

ಲೇಶ್ಯಾ ಪ್ರಪಂಚ ತನ್ನೊಳಗೆ ಅನೇಕ ತಾತ್ವಿಕಾಂಶಗಳನ್ನು ಬಿಡಿಸುತ್ತದೆ. ಪರಿಣಾಮ ಉತ್ತರೋತ್ತರವಾಗಿ ಉತ್ತಮಗೊಳ್ಳುತ್ತಾ ಹೋದಂತೆ ವ್ಯಕ್ತಿಯ ವ್ಯಕ್ತಿತ್ವ ಬೆಳೆಯುತ್ತಾ ಹೋಗುತ್ತದೆ. ಕರ್ಮವನ್ನು ಗೆದ್ದ ವೀತರಾಗ ಭಗವಂತನಿಗೆ ಯಾವ ಲೇಶ್ಯೆಯೂ ಇರುವುದಿಲ್ಲವೆಂದು ಹೇಳಲಾಗಿದೆ; ಏಕೆಂದರೆ ಭಗವಂತ ಶುದ್ಧಾತ್ಮ. ಹೀಗೆ ಲೇಶ್ಯಾ ಪರಿಭಾಷೆಯ ಮೂಲಕ ಜೈನಶಾಸ್ತ್ರವು ಮನಸ್ಸಿನ ವಿವಿಧ ನೆಲೆಗಳನ್ನು ವರ್ಣಿಸಿದೆ.

ಮನುಷ್ಯನ ವಿವಿಧ ಮನಃಸ್ಥಿತಿಗಳನ್ನು ಸಾರುವ ಮೇಲಿನ ವೃಕ್ಷಪ್ರತಿಮೆಯು ಇಂದಿಗೂ ಮತ್ತೊಂದು ಅರ್ಥದಲ್ಲಿ ಧ್ವನಿಪೂರ್ಣವಾಗುತ್ತದೆ. ಮನುಷ್ಯ ಇಂದು ಸಸ್ಯ ಜಗತ್ತಿನೊಂದಿಗೆ ನಡೆಸುತ್ತಿರುವ ವ್ಯವಹಾರ ಹೆಚ್ಚಾಗಿ ಕೃಷ್ಣಲೇಶ್ಯಾ ಪ್ರವೃತ್ತಿಯದ್ದು. ಅಂತಹ ಕರಾಳಭಾವದಿಂದ ಇಂದು ಪರಿಸರ ನಾಶವಾಗುತ್ತಿದೆ. ಇಂದು ಪದ್ಮ, ಶುಕ್ಲಲೇಶ್ಯೆಯವರು ಈ ಹಿನ್ನೆಲೆಯಲ್ಲಿ ಅತಿ ವಿರಳ. ನಮ್ಮ ಪರಿಸರ ಇಂದು ಉಳಿಯ ಬೇಕಾದರೆ ಅಂತಹ ಸಾತ್ವಿಕ ಮನೋಧರ್ಮ ಬೇಕಾಗುತ್ತದೆ.

ಪದಾರ್ಥಸಾರದಲ್ಲಿ ಈ ವರ್ಣಚಿತ್ರವೊಂದು ಲಭಿಸುತ್ತದೆ. ಆದರೆ ಆ ಚಿತ್ರಕಾರರ ಬಗೆಗೆ ಯಾವೊಂದು ಮಾಹಿತಿಯೂ ಇಲ್ಲ. ಶ್ರವಣಬೆಳಗೊಳದ ಜೈನಮಠ ಹಾಗೂ ಇನ್ನಿತರ ಕೆಲವು ಜೈನದೇವಾಲಯಗಳಲ್ಲಿ ಈ ವರ್ಣಚಿತ್ರ ವಿಶೇಷವಾಗಿ ಕಂಡು ಬರುತ್ತದೆ ಎಂಬುದು ವಿಶೇಷ. ಅಂದರೆ ಜೈನರಲ್ಲಿ ಇಂದಿಗೂ ಈ ಪ್ರತಿಮೆ ಸಾಕಷ್ಟು ಪ್ರಸಿದ್ಧಿಯನ್ನೂ ಪ್ರಚಾರವನ್ನೂ ಪಡೆದುಕೊಂಡಿದೆ ಎಂಬುದು ಸ್ಪಷ್ಟ. ಶ್ರವಣ ಬೆಳಗೊಳದಲ್ಲಿ ಮೂಡಿಬಂದಿರುವ ಚಿತ್ರ ಕ್ರಿ.ಶ. ೧೯ನೇ ಶತಮಾನಕ್ಕೆ ಸೇರಿದ್ದೆಂದು ತಿಳಿದುಬರುತ್ತದೆ. ಪದಾರ್ಥಸಾರದಲ್ಲಿ ಕಂಡುಬರುವ ಚಿತ್ರವನ್ನು ಇಲ್ಲಿ ಕೊಡಲಾಗಿದೆ.

ಇವೇ ಆಶಯಗಳು ಅಂದರೆ ಮನೋಭಾವದ ವಿವಿಧ ಪ್ರಕ್ರಿಯೆಗಳು ಶ್ರೀ ರಾಮಕೃಷ್ಣ ಪರಮಹಂಸರು ನಿರೂಪಿಸಿರುವ ರೂಪಕ ಕಥೆಯೊಂದರಲ್ಲಿ ಹೀಗೆ ಮೂಡಿಬಂದಿವೆ.

ಒಮ್ಮೆ ಓರ್ವ ಕಾಡಿನ ಮೂಲಕ ನಡೆದುಕೊಂಡು ಹೋಗುತ್ತಿದ್ದ. ಆಗ ಮೂರು ಜನ ದರೋಡೆಕೋರರು ಅವನ ಮೇಲೆ ಬಿದ್ದು ಅವನಲ್ಲಿದ್ದುದನ್ನೆಲ್ಲ ಕಸಿದುಕೊಂಡರು. ಅವರಲ್ಲಿ ಮೊದಲನೆಯ ಕಳ್ಳ, 'ಇವನನ್ನು ಉಳಿಸಿ ಏನು ಪ್ರಯೋಜನ ?' ಎಂದು ಭಾವಿಸಿ ಅವನನ್ನು ಕೊಲ್ಲಲು ಅಣಿಯಾದ. ಆಗ ಎರಡನೆಯ ದರೋಡೆಕೋರ, 'ಅವನನ್ನು ಕೊಂದು ಏನು ಪ್ರಯೋಜನ ? ಅವನ ಕೈಕಾಲುಗಳನ್ನು ಕಟ್ಟಿ ಇಲ್ಲೆ ಬಿಡಿ' ಎಂದ. ದರೋಡೆಕೋರರು ಅವನ ಕೈ ಕಾಲುಗಳನ್ನು ಕಟ್ಟಿ ಅವನನ್ನು ಅಲ್ಲೇ ಬಿಟ್ಟು ಮುನ್ನಡೆದರು. ಸ್ವಲ್ಪ ಕಾಲದ ಮೇಲೆ ಮೂರನೆಯ ದರೋಡೆಕೋರ ಹಿಂತಿರುಗಿ ಬಂದು, 'ಅಯ್ಯೋ, ನನಗೆ ವ್ಯಥೆಯಾಗಿದೆ. ನಿನಗೆ ತುಂಬಾ ನೋವಾಗಿದೆಯೇ ? ನಾನು ನಿನ್ನನ್ನು ಬಂಧನದಿಂದ ಬಿಡಿಸುತ್ತೇನೆ' ಎಂದ. ಅವನನ್ನು ಬಿಡಿಸಿದ ಮೇಲೆ ದರೋಡೆಕೋರ ಆ ಪ್ರಯಾಣಿಕನನ್ನು ಕುರಿತು, 'ನನ್ನ ಜೊತೆಯಲ್ಲಿ ಬಾ. ನಾನು ನಿನ್ನನ್ನು ರಾಜಮಾರ್ಗಕ್ಕೆ ಕರೆದು ಕೊಂಡು ಬಿಡುತ್ತೇನೆ' ಎಂದ. ಸ್ವಲ್ಪ ಕಾಲ ನಡೆದ ಮೇಲೆ ರಾಜಮಾರ್ಗ ದೊರೆಯಿತು. ಆಗ ಪ್ರಯಾಣಿಕನು – ನೀನು ನನಗೆ ಬಹಳ ಉಪಕಾರ ಮಾಡಿರುವೆ ಎಂದು ಕೃತಜ್ಞತೆಯನ್ನು ಸೂಚಿಸಿ ಮುನ್ನಡೆದ.

ಈ ಸನ್ನಿವೇಶದ ತಾತ್ವಿಕ ಹಿನ್ನೆಲೆ ಹೀಗಿದೆ : ಈ ಪ್ರಪಂಚವೇ ಒಂದು ಕಾಡು. ಇಲ್ಲಿ ಕಾಡುತ್ತಿರುವ ಮೂರು ಜನ ದರೋಡೆಕೋರರೇ ಸತ್ವ, ರಜಸ್ ಮತ್ತು ತಮಸ್ ಎಂಬುವರು. ತಮಸ್ ಪ್ರಯಾಣಿಕನನ್ನು ಕೊಲ್ಲಲು ಪ್ರಯತ್ನಿಸುವುದು; ಅದು ಅತ್ಯಂತ ಕ್ರೂರ ಭಾವವನ್ನು ಹೊಂದಿರುವುದು. ರಜಸ್ ಅವನನ್ನು ಕಟ್ಟಿಹಾಕುವುದು; ತಮೋ ಗುಣಕ್ಕಿಂತ ಪರಿಷ್ಕಾರಗೊಂಡ ಭಾವವುಳ್ಳದ್ದು. ಸತ್ವ ಅವನನ್ನು ತಮಸ್ ಮತ್ತು ರಜೋಗುಣದ ಕೈಯಿಂದ ಪಾರುಮಾಡುವುದು. ಆದರೆ ಸತ್ವವೂ ಕೂಡ ಮನುಷ್ಯನಿಗೆ ಮುಕ್ತಿಯನ್ನು ಕೊಡಲಾರದು. ಅದು ಏನಿದ್ದರೂ 'ನೋಡು, ಇಲ್ಲಿದೆ ನಿನ್ನ ಮನೆ' ಎಂದು ಮಾರ್ಗದರ್ಶಿಯಾಗಬಲ್ಲುದು. (ಆಧಾರ: ಕಥೆಗಾರ ಶ್ರೀ ರಾಮಕೃಷ್ಣ, ಶ್ರೀ ರಾಮಕೃಷ್ಣ ಆಶ್ರಮ, ಮೈಸೂರು, ೧೯೮೭).

**ಮೃತ್ಯುಭೀಕರತೆ ಹಾಗೂ ಸಂಸಾರದ ಅಸಾರತೆಯನ್ನು ಸಾರುವ ಕಥೆಗಳು**

ಜೈನಶಾಸ್ತ್ರ ಸಾಹಿತ್ಯದಲ್ಲಿ ಕಂಡುಬರುವ 'ಮಧುಬಿಂದು ದೃಷ್ಟಾಂತ' ಎಂಬ ಕಥೆ ಮೃತ್ಯುವೆಂಬ ಕಠೋರಸತ್ಯದ ಮಡಿಲಿನಲ್ಲಿದ್ದರೂ ಈ ಜೀವ ಅದನ್ನು ಲೆಕ್ಕಿಸದೆ ಭೋಗಕ್ಕೆ ಒಲಿಯುವ ಪ್ರತಿಮೆಯನ್ನು ನೀಡುತ್ತದೆ.

ಓರ್ವ ಪ್ರಯಾಣಿಕ ದಾರಿತಪ್ಪಿ ಒಂದು ಕಾಡನ್ನು ಪ್ರವೇಶಿಸಿದನು. ಒಂದು ಆನೆ ಅವನನ್ನು ಅಟ್ಟಿಸಿಕೊಂಡು ಬಂತು. ಓಡಿ ತಪ್ಪಿಸಿಕೊಳ್ಳುವಾಗ ಅವನು ಒಂದು ಬಾವಿಯ ಬಳಿ ಬೆಳೆದು ನಿಂತಿದ್ದ ದೊಡ್ಡ ಆಲದ ಮರದ ಬಳಿಗೆ ಬಂದನು. ಭಯಗೊಂಡ ಆ ಮನುಷ್ಯನು ನೇತಾಡುತ್ತಿದ್ದ ಒಂದು ಕೊಂಬೆಯನ್ನು ಹಿಡಿದು, ಬಾವಿಯೊಳಗೆ ಜೋತು ಬಿದ್ದನು. ಆದರೆ ಆ ಬಾವಿಯೊಳಗೆ ಬಾಯಿತೆರೆದುಕೊಂಡು ಕಬಳಿಸಲು ಸಿದ್ಧವಾಗಿರುವ ಹೆಬ್ಬಾವು. ಬಾವಿಯ ನಾಲ್ಕೂ ಮೂಲೆಗಳಲ್ಲಿದ್ದ, ನಾಲ್ಕು ಸರ್ಪಗಳು ಇವನನ್ನು ಕಚ್ಚಲು ಪ್ರಯತ್ನಿಸುತ್ತಿದ್ದವು. ಇವನು ಜೋತುಬಿದ್ದಿದ್ದ ಆ ಕೊಂಬೆಯನ್ನು ಕಪ್ಪು ಮತ್ತು ಬಿಳಿ ಇಲಿಗಳೆರಡು ಕತ್ತರಿಸುತ್ತಿದ್ದವು. ಮದವೇರಿದ ಆನೆಯು, ಬಾವಿಯ ಬಳಿ ನಿಂತು, ತನ್ನ ಸೊಂಡಲಿನಿಂದ ಅವನನ್ನು ಮುಟ್ಟಲು ಪ್ರಯತ್ನಿಸುತ್ತಿತ್ತು. ಆ ಮರದಲ್ಲಿ ದೊಡ್ಡ ಜೇನು ಹುಟ್ಟೊಂದು ಜೇನುಹುಳುಗಳಿಂದ ತುಂಬಿಹೋಗಿತ್ತು. ಹುಚ್ಚೆದ್ದ ಆನೆಯು ಮರವನ್ನು ಒಮ್ಮೆ ಅಲುಗಾಡಿಸಿತು. ಅಲುಗಾಟಕ್ಕೆ ಜೇನಿನ ಹುಟ್ಟಿನಿಂದ ಜೇನುಹನಿಗಳು ಆ ಮನುಷ್ಯನ ತುಟಿಯ ಮೇಲೆ ಬಿದ್ದವು. ಅವುಗಳ ರುಚಿಯನ್ನು ಅವನು ಆಸ್ವಾದಿಸಿದನು. ಅಷ್ಟರಲ್ಲಿ ಜೇನುಹುಳುಗಳು ಅವನನ್ನು ಮುತ್ತಿಗೆ ಹಾಕಲು ತೊಡಗಿದ್ದವು. ಮೇಲೆ ದೇವತೆಗಳು ವಿಮಾನದಲ್ಲಿದ್ದು ಅವನನ್ನು ಪಾರು ಮಾಡಲು ಕರೆಯುತ್ತಿದ್ದರು. ಆದರೆ ಅವನಿಗೆ ಆ ಕಡೆ ಗಮನವಿಲ್ಲ. (ವಸುದೇವಹಿಂಡಿ – ಪ್ರಾಕೃತ)

ಇಲ್ಲಿ ಮನುಷ್ಯ ಎಂದರೆ ಲೌಕಿಕ ಮನುಷ್ಯ; ಕಾಡು ಎನ್ನುವುದು ಹುಟ್ಟು ಸಾವು (ಜರಾ ಮರಣ)ಗಳಿಂದ ಕೂಡಿದ ಪ್ರಪಂಚ; ಬಾವಿ ಎನ್ನುವುದು ಮಾನವ ಜೀವನ; ಹೆಬ್ಬಾವು ಎನ್ನುವುದು ನರಕ; ನಾಲ್ಕು ಸರ್ಪಗಳು ನಮ್ಮಲ್ಲಿರುವ ಕ್ರೋಧ, ಮಾನ, ಮಾಯ, ಲೋಭಗಳು; ಬಿಳಿ ಮತ್ತು ಕಪ್ಪು ಇಲಿಗಳು ಕೃಷ್ಣಪಕ್ಷ ಶುಕ್ಲಪಕ್ಷಗಳು – ಆಯುಷ್ಯದ ವ್ಯಯ; ಜೇನು ಇಂದ್ರಿಯ ಸುಖ; ಮರ ಅಜ್ಞಾನ; ದೇವತೆಗಳನ್ನು ಕಡೆಗಣಿಸುವಿಕೆ, ಪಾರುಗಾಣುವ ಮಾರ್ಗವಿದ್ದರೂ ಅದರ ಕಡೆಗೆ ಗಮನವೀಯದೆ ಆ ಅಪಾಯ ದಲ್ಲಿಯೇ ತೊಳಲುವ ಮನುಷ್ಯನ ದಡ್ಡತನ ಎಂಬಿವೇ ಅಂತರಾರ್ಥಗಳನ್ನು ಈ ಪ್ರತಿಮೆ ಒಳಗೊಂಡಿದೆ. ಅಲ್ಪಸುಖಕ್ಕಾಗಿ ಮನುಷ್ಯ ಈ ಭೀಕರವಾದ ಸಂಸಾರಕ್ಕೆ

ಒಲಿಯುತ್ತಾನೆ ಎಂಬುದನ್ನು ಈ ಕಥೆ ಸೂಚಿಸುತ್ತದೆ.

ಈ ಮೇಲಿನ ಪ್ರತಿಮೆಯನ್ನೂ ಕೂಡ ಚಿತ್ರಕಾರರು ವರ್ಣಚಿತ್ರ ವಿನ್ಯಾಸದಲ್ಲಿ ಬಿಡಿಸಿದ್ದಾರೆ. ಜಿನಾಲಯಗಳಲ್ಲಿ ಈ ಚಿತ್ರ ಸಾಮಾನ್ಯವಾಗಿ ದೊರೆಯುತ್ತದೆ.

ಶ್ರೀ ರಾಮಕೃಷ್ಣ ಪರಮಹಂಸರ 'ಸಂಸಾರದ ಆನಂದ' ಎಂಬ ಶೀರ್ಷಿಕೆಯ ಕಥೆಯೂ ಮೇಲಿನ ಆಶಯವನ್ನೇ ಎತ್ತಿಹಿಡಿದಿದೆ :

ಒಬ್ಬ ಪ್ರಯಾಣಿಕ ನಡೆಯುತ್ತಾ ಒಂದು ಕಾಡಿಗೆ ಬಂದ. ಅವನಿಗೆ ತುಂಬಾ ದಣಿವಾಗಿತ್ತು. ಮೈಯೆಲ್ಲಾ ಬೆವರುತ್ತಿತ್ತು. ಒಂದು ಮರದ ಕೆಳಗೆ ವಿಶ್ರಮಿಸಲು ಕುಳಿತುಕೊಂಡ. 'ನನಗೆ ಮಲಗಿಕೊಳ್ಳಲು ಒಂದು ಮೆತ್ತನೆಯ ಹಾಸಿಗೆಯಿದ್ದರೆ ಎಷ್ಟು ಚೆನ್ನ' ಎಂದು ಆಲೋಚಿಸಿದ. ತತ್‌ಕ್ಷಣ ಅದು ಬಂತು. ತಾನೊಂದು ಕಲ್ಪವೃಕ್ಷದ ಕೆಳಗೆ ಮಲಗಿರುವೆನೆಂದು ಅವನಿಗೆ ಗೊತ್ತಾಗಲಿಲ್ಲ. ಅವನಿಗೆ ತುಂಬಾ ಆಶ್ಚರ್ಯವಾಗಿ ಅದರ ಕೆಳಗೆ ವಿಶ್ರಮಿಸಿಕೊಂಡ. ಅನಂತರ ಅವನ ಮನಸ್ಸಿನಲ್ಲಿ ಮತ್ತೊಂದು ಆಸೆ ತಲೆದೋರಿತು. 'ಒಬ್ಬ ತರುಣಿ ಬಂದು ನನ್ನ ಕಾಲುಗಳನ್ನು ಒತ್ತಿದರೆ ಎಷ್ಟು ಚೆನ್ನ' ಎಂದುಕೊಳ್ಳುತ್ತಿದ್ದಂತೆ ಒಬ್ಬ ಸುಂದರ ತರುಣಿ ಬಂದು ಅವನ ಕಾಲುಗಳನ್ನು ಒತ್ತುತ್ತಿದ್ದಳು. ಅವನಿಗೆ ಹೊಟ್ಟೆ ಹಸಿವಾಯಿತು. ನನಗೆ ಊಟಕ್ಕೆ ಏನಾದರೂ ಸಿಕ್ಕೀತೇ? ಎಂದು ಯೋಚಿಸಿದ. ತತ್‌ಕ್ಷಣವೇ ರುಚಿರುಚಿಯಾದ ತಿಂಡಿ ತೀರ್ಥಗಳು ಅವನ ಮುಂದೆ ಬಂದವು. ಅವನು ತೃಪ್ತಿಯಾಗುವಷ್ಟು ತಿಂದು ಮಲಗಿದ. ಇದ್ದಕ್ಕಿದ್ದಂತೆ ಅವನ ಮನಸ್ಸಿನಲ್ಲಿ 'ಹುಲಿ ಏನಾದರೂ ಬಂದು ನನ್ನ ಮೇಲೆ ಎಗರಿದರೆ ಏನು ಗತಿ' ಎಂಬ ಆಲೋಚನೆ ಮೂಡಿಬಂತು. ಕೂಡಲೇ ದೊಡ್ಡ ಹುಲಿಯೊಂದು ಅವನ ಮೇಲೆ ಬಿದ್ದು ಅವನನ್ನು ಘಾಸಿಮಾಡಿ, ಅವನ ರಕ್ತವನ್ನು ಹೀರಿತು. (ಆಧಾರ : ಕಥೆಗಾರ ಶ್ರೀ ರಾಮಕೃಷ್ಣ, ಶ್ರೀ ರಾಮಕೃಷ್ಣ ಆಶ್ರಮ, ಮೈಸೂರು, ೧೯೮೭).

ಪ್ರಾಪಂಚಿಕ ಆಸೆಗಳಿಗೆ ಮನಸೋತರೆ ಮನುಷ್ಯನಿಗೆ ಅವುಗಳೇನೋ ದೊರೆಯಬಹುದು. ಆದರೆ ಅದರ ಹಿಂದೆ ಭೀಕರವಾದ ಸಾವು ನೋವುಗಳೂ ಹುದುಗಿವೆ. ಅವು ಹುಲಿಗಿಂತಲೂ ಭಯಂಕರ ಎಂಬುದನ್ನು ಪ್ರಕಟಿಸಲು ಮೇಲಿನ ಕಥೆಯನ್ನು ನಿರೂಪಿಸಲಾಗಿದೆ.

**ಸುದ್ದಿಚಿತ್ರ**




ಸೆಪ್ಟೆಂಬರ್ ೧೧ರಂದು ಮಂಗಳೂರಿನಲ್ಲಿ ನವಕರ್ನಾಟಕ ಪುಸ್ತಕ ಪ್ರದರ್ಶನ ಹಾಗು ಬಿಡುಗಡೆ ಸಮಾರಂಭದಲ್ಲಿ ನಗರದ ಹಲವು ಗಣ್ಯರು ಹಾಗೂ ಪುಸ್ತಕಾಸಕ್ತರು ಭಾಗವಹಿಸಿದ್ದರು. ಚಿತ್ರದಲ್ಲಿ (ಎಡದಿಂದ ಬಲಕ್ಕೆ) ಶ್ರೀ ಹರೀಶ್ ಕುಮಾರ್, ಡಾ|| ವಾಮನ ನಂದಾವರ, ಶ್ರೀ ಬಿ. ವಿ. ಕಕ್ಕಿಲ್ಲಾಯ, ಪ್ರೊ|| ನಾಗರಾಜರಾವ್ ಜವಳಿ ಇವರು.

ಇಂತಹ ಅನೇಕ ಆಶಯಗಳನ್ನು ಸ್ಫುರಿಸುವ ಕಥೆಗಳು ಸಾಮಾನ್ಯವಾಗಿ ಎಲ್ಲ ಮತ ಧರ್ಮಗಳಲ್ಲಿಯೂ ದೊರೆಯುತ್ತವೆ. ಅವುಗಳನ್ನು ಸಂಗ್ರಹಿಸಿ, ವರ್ಗೀಕರಿಸಿ ಅಧ್ಯಯನ ನಡೆಸಲು ಅವಕಾಶವಿದೆ. ಇಲ್ಲಿ ಅಂತಹ ಒಂದು ಸಣ್ಣ ಪ್ರಯತ್ನವನ್ನು ಮಾಡಲಾಗಿದೆ.

ಡಾ|| ಸರಸ್ವತಿ ವಿಜಯಕುಮಾರ್
ಕನ್ನಡ ಉಪನ್ಯಾಸಕಿ, ರೀಜನಲ್ ಇನ್‌ಸ್ಟಿಟ್ಯೂಟ್ ಆಫ್ ಎಜುಕೇಷನ್, ಮಾನಸಗಂಗೋತ್ರಿ, ಮೈಸೂರು - ೬

# ಮುಖಗಳು

ಬೆಳ್ಳಂಬೆಳಗ್ಗೆ ಎದ್ದು
ಬಿಸಿನೀರು, ಟಿಫಿನಲ್ಲಿ ಒದ್ದಾಡಿ
ರೇಗಿಸಿ ಮತ್ತು ರಮಿಸಿ
ಮಗನನ್ನು ಆಟೋ ಹತ್ತಿಸುವ
ಆತುರದ ಮುಖಗಳು !

ಮಟ-ಮಟ ಮಧ್ಯಾಹ್ನ
ಸಿಟಿಬಸ್ಸಿಗಾಗಿ ಕಾದು ಸುಸ್ತಾಗಿ
ಮೇಡಮ್ಮರ ಮಾತು ನೆನಪಾಗಿ
ಕರ್ಚಿಫಲ್ಲಿ ಕೈ ಒರೆಸಿಕೊಳ್ಳುವ
ಬೆದರಿದ ಮುಖಗಳು !



ಸಂಜೆ ಕ್ಲಾಸ್ ತಪ್ಪಿಸಿ
ಅವಳ ನೆನಪಲಿ ತೇಲಾಡಿ
ಮಾಡಿ ಗಟ್ಟಿ ಧೈರ್ಯ
ಕೆಂಪು ಗುಲಾಬಿಯೊಂದಿಗೆ ಕಾಯುವ
ಕಾತುರದ ಮುಖಗಳು !

ರಾತ್ರಿಯೂಟ ಮುಗಿಸಿ
ಒಂದು, ಮತ್ತೊಂದು ಮಾತ್ರೆ ನುಂಗಿ,
ಮಗನ ನೌಕರಿಗಾಗಿ ಪ್ರಾರ್ಥಿಸಿ
ನಿದ್ದೆಯಲ್ಲಿ ಮಗಳ ಮದುವೆಯ ಸ್ಕೆಚ್ ಹಾಕುವ
ಆಸೆಯ ಮುಖಗಳು !

ಎಷ್ಟೊಂದು ಮುಖಗಳು ವಿಶ್ವದಲಿ
ಇವೆಲ್ಲ ನಮ್ಮ ಪ್ರತಿಬಿಂಬಗಳು
ಪ್ರತಿಯೊಬ್ಬರ ಜೀವನದಲ್ಲೂ ಇದ್ದು –
ಉಳಿದು-ಅಳಿದು ಹೋಗುವ
ಬಣ್ಣ-ಬಣ್ಣದ ಚಿತ್ರಗಳು – ಈ ಮುಖಗಳು !!

ಖುರ್ಷೀದ್ ಆಲಂ ಮೋಮಿನ, 'ರೆಹಮಾನ್ ಮಂಜಿಲ್', ಗುರುವಾರ ಪೇಟೆ, ಅಂಚೆ : ಚೆನ್ನಮ್ಮನ ಕಿತ್ತೂರು - ೫೯೧ ೧೧೫, ಬೆಳಗಾವ ಜಿಲ್ಲೆ

# ಅನ್ವರ್ಥನಾಮ

ಹೆಸರುಗಳ ಲೋಕ ಯಾರಿಗಾದರೂ ವಿಸ್ಮಯ ಹುಟ್ಟಿಸುವಂಥದ್ದು. ಈ ಲೋಕದ ಮುಚ್ಚಳ ಬಿಚ್ಚಿ ಹಣಿಕಿಹಾಕುವ ಹವಣಿಕೆ ಬೇಕು. ಈ ಲೋಕವನ್ನು ತಾಳ್ಮೆ ಕುತೂಹಲದಿಂದ ಉತ್ಖನನ ಮಾಡುತ್ತ ಸಾಗುವ ಎದೆಗಾರಿಕೆ ಬೇಕು. ಇದು ಈ ಲೋಕದ ಅಂತರಂಗದಲ್ಲೇನೇನು ಇದೆ ಎಂಬುದನ್ನು, ಮೇಲ್ನೋಟಕ್ಕೆ ಕಾಣಬರುವುದನ್ನು ತಿಳಿಯಪಡಿಸುವ ಒಂದು ಲಘುಬರಹ ಮಾತ್ರ.

**ಡಾ|| ಅನಿಲ ಕಮತಿ**

ನಮ್ಮಲ್ಲಿಯ ವ್ಯಕ್ತಿಗಳ ಬಹುತೇಕ ಹೆಸರುಗಳು ತಮ್ಮ ಮೆಚ್ಚಿನ ದೇವರುಗಳ ಯಾ ವ್ಯಕ್ತಿಗಳ ಹೆಸರುಗಳ ಅನುಕರಣೆಗಳು. ಉದಾಹರಣೆಗೆ, ಶಂಕರ, ಸರಸ್ವತಿ, ಅಮಿತಾಭ, ಮೋನಿಷಾ. ಅದೆಷ್ಟೋ ಸಲ ಹೆಸರಿರಿಸುವ ವ್ಯಕ್ತಿಗಳ ಅಭಿವ್ಯಕ್ತಿಯ ಸಂಕೇತಗಳಾಗಿಯೂ ಮೂಡಿಬರುವುದುಂಟು. ಉದಾಹರಣೆಗೆ, ಶ್ರುತಿ, ಲಯ, ತೃಪ್ತಿ ಇತ್ಯಾದಿ. ಹೆಸರುಗಳು ಕೆಲಸಲ ಶಬ್ದಾರ್ಥದ ಗೋಜಿಗೆ ಹೋಗದೇ ಇಡುವ ಸುಂದರ 'ಶಬ್ದ'ಗಳು. ಉದಾಹರಣೆಗೆ, ನಿಹಾರಿಕಾ, ತೃಷ್ಣಾ ಇತ್ಯಾದಿ. ಕೆಲಜನ ತಮ್ಮ ಜೀವನ ದೃಷ್ಟಿಯ ಪರಿಕಲ್ಪನೆಯನ್ನೇ ಶಬ್ದರೂಪದಲ್ಲಿ ಟಂಕಿಸಿ, ನಮ್ಮಲ್ಲಿರುವ ಅರ್ಥವತ್ತಾದ ಪದಗಳನ್ನೇ ಹೊಸ ಹೆಸರುಗಳಾಗಿ ಮಾರ್ಪಡಿಸಿ, ಈ ಶಬ್ದಕ್ಕೂ ಹೆಸರಿಗೂ ಹೊಸ ಆಯಾಮವನ್ನೇ ನೀಡಬಲ್ಲರು. ಉದಾಹರಣೆಗೆ, ಅಕ್ಷರ, ಸಮುದ್ರ, ಹೂ ಇತ್ಯಾದಿ.

ಮನೆತನದ ಹೆಸರುಗಳು ಮುಖ್ಯವಾಗಿ ಮೂರು ಬಗೆಯಾಗಿ ಬೆಳೆದುಬಂದಿವೆ. ಒಂದೋ ಇವು ನೆಲೆಯನ್ನು ಆಧರಿಸಿದವು ಅಥವಾ ವೃತ್ತಿ ಸೂಚಕಗಳು ಅಥವಾ ಆ ಮನೆತನದ ಪ್ರಮುಖ ವ್ಯಕ್ತಿಯ ಹೆಸರನ್ನೇ ಬಳಸಿಕೊಂಡಿರುವುದು. ಹುಬ್ಬಳ್ಳಿ, ಸಂಕೇಶ್ವರ ಇವು ನೆಲೆಯನ್ನು ಸೂಚಿಸುವ ಅಡ್ಡ ಹೆಸರುಗಳಾದರೆ, ಕಂಬಾರ, ಕುಂಬಾರ, ಅವಡಿ ಇವು ವೃತ್ತಿಸೂಚಕಗಳು. ರಾಚಣ್ಣನಿಂದ ರಾಚಣ್ಣವರ, ಹಾಲಪ್ಪನಿಂದ ಹಾಲಪ್ಪನವರ ಇವು ವ್ಯಕ್ತಿಯ ಹೆಸರುಗಳಿಂದ ಪ್ರಭಾವಿತವಾದವುಗಳು.

ಕನ್ನಡನಾಡು ಇಬ್ಬರು ಅದ್ವಿತೀಯರೆನ್ನಬಹುದಾದ 'ಪುಟ್ಟಪ್ಪ'ನವರನ್ನು ಪಡೆದಿದೆ. ಒಬ್ಬರು ಕುಪ್ಪಳ್ಳಿ ವೆಂಕಟಪ್ಪನವರ ಮಗ ಪುಟ್ಟಪ್ಪ, ಇನ್ನೊಬ್ಬರು ಪಾಟೀಲ ಪುಟ್ಟಪ್ಪ. ಒಬ್ಬರು ಕವಿಯಾಗಿ, ನಾಟಕಕಾರರಾಗಿ, ಕಾದಂಬರಿ ಕಾರರಾಗಿ ಅದ್ವಿತೀಯರೆನ್ನಿಸಿಕೊಂಡಿದ್ದರೆ, ಇನ್ನೊಬ್ಬರು ಕನ್ನಡ ಹೋರಾಟ, ಪತ್ರಕರ್ತ, ಪತ್ರಿಕೋದ್ಯಮಿ, ಸೃಜನಶೀಲ ಸಾಹಿತಿಯಾಗಿ ಜನಮಾನಸದಲ್ಲಿ ಮೆರೆದವರು. ಇಬ್ಬರೂ ತಾವಿನ್ನೂ 'ಪುಟ್ಟ', ಇನ್ನೂ ಚಿಕ್ಕವರು ಎಂದುಕೊಂಡವರೇ. 'ಪಾಪು' ಎಂದೇ ತಮ್ಮನ್ನು ಪಾಟೀಲ ಪುಟ್ಟಪ್ಪ ಕರೆಸಿಕೊಂಡವರು. ತಮ್ಮ ದೃಷ್ಟಿಯಲ್ಲಿ ಇಬ್ಬರೂ 'ಪುಟ್ಟ'ರೇ ಆಗಿರಬಹುದಾದರೂ, ಕನ್ನಡಿಗರಿಗೆಲ್ಲ ಅಪ್ಪನಂತಿರುವ ಇವರಿಬ್ಬರೂ ಚಿಕ್ಕ-ಅಪ್ಪ – ಚಿಕ್ಕಪ್ಪನಾಗಿರುವವರೇ. ಇಬ್ಬರೂ ಜೀವನದುದ್ದಕ್ಕೂ ಕನ್ನಡಕ್ಕಾಗಿ ಪರಪುಟ್ಟನಂತೆ ಅವಿರತ ದುಡಿದವರೇ. ಕನ್ನಡಿಗರ ಜನಮಾನಸದಲ್ಲಿ ಅಧಿಕಾರಿಗಳು, ಮಂತ್ರಿಮಹೋದಯರ ಟೇಬಲ್ ಮೇಲೆ ಕನ್ನಡದ ವಿಷಯವನ್ನು ಅತ್ಯಂತ ಸಮರ್ಥವಾಗಿ PUT-UP ಮಾಡಿದವರೇ. ಹಾಗಾಗಿ ಅವರ ತಂದೆ-ತಾಯಂದಿರು ಇವರಿಗೆ ಈ ಹೆಸರನ್ನು ಯಾವುದೇ ಕಾರಣಕ್ಕಾಗಿ ಇಟ್ಟಿರಲಿ, ಇವರು ತಮ್ಮ ಹೆಸರನ್ನು ಈ ರೀತಿ ಸಾರ್ಥಕಪಡಿಸಿಕೊಂಡಿದ್ದಾರೆ.

ನನ್ನ ಹೈಸ್ಕೂಲು ವಿದ್ಯಾರ್ಥಿ ಜೀವನದಲ್ಲಿ ಪಾಟೀಲ ಎನ್ನುವವನೊಬ್ಬ ನನ್ನ ಸಹಪಾಠಿ. ಈ ಮೂರು ವರ್ಷಗಳಲ್ಲಿ ನನಗೆ ಅತ್ಯಂತ ಆತ್ಮೀಯ ಗೆಳೆಯನಾಗಿದ್ದವ. ಈತ ಹುಟ್ಟುವಾಗ 'ಪ್ರಪಂಚ' ವಾರಪತ್ರಿಕೆಯ ಮುಖಾಂತರ ಇಡೀ ಕರ್ನಾಟಕದಲ್ಲಿ ತುಂಬ ಪ್ರವರ್ಧಮಾನಕ್ಕೆ ಬರುತ್ತಿದ್ದ ಪಾಟೀಲ ಪುಟ್ಟಪ್ಪನವರ ಅಸೀಮ ಅಭಿಮಾನಿಯಾಗಿದ್ದ. ಈತನ ತಂದೆ ಈ ನನ್ನ ಗೆಳೆಯನನ್ನೂ 'ಪುಟ್ಟಪ್ಪ' ಎಂದು ಕರೆದರು. ಆ ಪಾಟೀಲ ಪುಟ್ಟಪ್ಪನವರಂತೆ ಈ ಪಾಟೀಲ ಪುಟ್ಟಪ್ಪನೂ ಲೇಖನಿ ಹಿಡಿದು ತುಂಬ ಪ್ರಸಿದ್ಧಿಗೆ ಬರಲಿ ಎಂದು ತುಂಬ ಮುತುವರ್ಜಿಯಿಂದಲೇ ಈತನಿಗೆ ಶಾಲೆಗೆ ಕಳಿಸುತ್ತಿದ್ದರೆನ್ನಿ. ಆದರೆ ಈತ ತನ್ನೀ ಹೆಸರನ್ನು ಸಾರ್ಥಕಪಡಿಸಿಕೊಂಡಿದ್ದೇ ಬೇರೆ ಬಗೆಯಲ್ಲಿ! ಈತ ಐದು-ಐದೂಕಾಲು ಫೂಟಿಗಿಂತ ಹೆಚ್ಚು ಎತ್ತರ ಬೆಳೆಯಲೇ ಇಲ್ಲ. ಹೈಸ್ಕೂಲಿನಲ್ಲಿದ್ದಾಗಲೂ ನಮ್ಮ P.E. ಟೀಚರು ಡ್ರಿಲ್‌ಗೆಂದು ''ಸಾಲಾಗಿ ನಿಲ್ಲಿರಿ'' ಎಂದರಚಿ ಸೀಟಿ ಊದಿ ಎತ್ತರ ಪ್ರಕಾರ ಒಂದು ಸಾಲಿನಲ್ಲಿ ನಿಲ್ಲಲು ಆದೇಶಿಸಿದರೆ ಆ ಸಾಲು ಈತನಿಂದಲೇ ಪ್ರಾರಂಭವಾಗಬೇಕು – ಈ ಕೊನೆಯಿಂದಲ್ಲ; ಆ ಕೊನೆಯಿಂದ. ನಂತರವೂ ಈತ ಹೆಚ್ಚು ಎತ್ತರಕ್ಕೆ ಬೆಳೆಯದೇ, ಇಂದಿಗೂ ಮಗುವಿನ ಮುಖಲಕ್ಷಣವನ್ನೇ ಹೊಂದಿದ್ದಾನೆ. ಅಲ್ಲದೇ ಈತನಿಗೆ ಇನ್ನೂ ಗಡ್ಡ-ಮೀಸೆ ಬೆಳೆಯುವುದಕ್ಕೆ ಮೊದಲೇ ಮದುವೆಯಾಗಿ, ಒಂದು ಮಗುವಿನ ತಂದೆಯೂ ಆಗಿ ತನ್ನ ಈ ಪುಟ್ಟ ಅಪ್ಪನ ಪಟ್ಟವನ್ನು ಗಟ್ಟಿಗೊಳಿಸಿಕೊಂಡ.

ನಮ್ಮಲ್ಲಿ ಅದೆಷ್ಟೋ ಜನ ತಮ್ಮ ಹೆಸರಿನ ಅರ್ಥ ಅರಿತುಕೊಳ್ಳಲು ಹೋಗುವುದೇ ಇಲ್ಲ. ಬಹುಪಾಲು ಪಾಲಕರು ಹೆಸರಿಗೊಂದು ಅರ್ಥವಿರಬೇಕು ಎಂಬುದನ್ನೇ ನಿರ್ಲಕ್ಷಿಸಿ, ತಮಗೆ ಸೂಕ್ತವಾಗಿ ಕಂಡ 'ಸುಂದರ ಶಬ್ದ'ವೊಂದನ್ನು ಹೆಸರೆಂದು ಇಟ್ಟುಕೊಳ್ಳುತ್ತಾರೆ. ಆದರೂ ಅದೆಷ್ಟೋ ಸಲ ಯಾವುದೋ ಸಂದರ್ಭಕ್ಕಾಗಿಯೋ, ಘಟಿಸಿದ ಘಟನೆಗೆ ಸಂಬಂಧಿಸಿಯೋ ಮಗುವಿಗೆ ಹೆಸರನ್ನು ಆಯ್ದುಕೊಳ್ಳುವುದುಂಟು. ಹೀಗಾಗಿ ನಮ್ಮಲ್ಲಿ ನಾಗರ ಪಂಚಮಿಗೆ ಹುಟ್ಟಿದವ ನಾಗೇಶ, ನಾಗೇಂದ್ರನಾಗಿಯೋ, ಗಣೇಶ ಹಬ್ಬದಲ್ಲಿ ಹುಟ್ಟಿದವರು ವಿನಾಯಕರಾಗಿಯೋ, ಹೋಳಿಗೆ ಹುಟ್ಟಿದವರು ಕಾಮಣ್ಣರಾಗಿಯೋ, ದೀಪಾವಳಿಯಲ್ಲಿ ಜನಿಸಿದವರು ದೀಪಾ, ದೀಪಂಕರರಾಗಿಯೋ ಹೆಸರು ಹೊಂದುವುದುಂಟು. ಆದರೆ ಅಮಾವಾಸ್ಯೆಯ ನಟ್ಟಿರುಳಿನಲ್ಲಿ ಪೂರ್ಣಿಮಾ, ಜ್ಯೋತ್ಸ್ನಾಗಳೋ ಬಿದಿಗೆ ದಿನ ನಿಶಾ, ಯಾಮಿನಿಯರೋ ಅವತರಿಸುವುದಿಲ್ಲ ಎಂದು ಮಾತ್ರ ಭಾವಿಸಬೇಡಿ.

ನಮ್ಮೂರಿನ ಒಬ್ಬ ದೊಡ್ಡ ದಾನಿಯ ಹೆಸರು ದುರ್ಯೋಧನ. ಆದರಿಂದು ಇಲ್ಲವಾದುದರಿಂದ ಅವರ ಹೆಂಡತಿ, ಮಕ್ಕಳನ್ನೆಲ್ಲ ಈ ಹೆಸರು ಅದ್ಹೇಗೆ ಇಟ್ಟರು? ಎಂದು ಕೇಳಿದಾಗಲೂ ಯಾವುದೇ ಫಲ ದೊರಕಲಿಲ್ಲ. ರಾವಣ, ಲಂಕೇಶ ಎಂಬ ಹೆಸರುಗಳು ನಮ್ಮಲ್ಲಿವೆಯಾದರೂ ದುರ್ಯೋಧನ, ದುಶ್ಶಾಸನ ಎಂಬ ಹೆಸರುಗಳಿರುವುದು ನಾನು ಕೇಳಿಲ್ಲ. (ಕಲ್ಕತ್ತೆಯಲ್ಲಿ ದುಶ್ಶಾಸನ ಎಂಬ ಹೆಸರಿನ ಕಾರು ಚಾಲಕನಿದ್ದನಂತೆ.) ಆದರೆ ಇದರ ಹಿನ್ನೆಲೆ ಮಾತ್ರ ಇನ್ನೂ ಗೂಢ.

ನನ್ನ ದಟ್ಟ ಪರಿಚಯದ ಮಹಿಳೆಯೊಬ್ಬರ ಹೆಸರು ಸೈರಂಧ್ರಿ. ನನ್ನ ವೈದ್ಯವೃತ್ತಿ ನಿಮಿತ್ತದ ಪರಿಚಯ ಅದು. ಪ್ರತಿಸಲ ಔಷಧ ಚೀಟಿಯ ಮೇಲೆ ಬರೆಯಲು ಅವಳ ಹೆಸರು ಕೇಳಿದಾಗಲೂ ಅವಳು ಸಂಕೋಚದಿಂದಲೇ 'ಸೈರಂದ್ರಿ' ಎಂದು ಉಲಿಯುತ್ತಿದ್ದಳು. ಇದ್ಯಾಕೆ ಹೀಗೆ ಎಂಬುದು ನನಗೆ ಬಿಡಿಸಲಾರದ ಒಗಟಾಗಿತ್ತು. ಒಂದು ದಿನ ಅವಳು ಆಸ್ಪತ್ರೆಗೆ ಬಂದಾಗ ಏನೊ ಕೊಂಚ ಬಿಡುವಾಗಿರುವುದನ್ನು ಮನಗಂಡು – 'ಇದ್ದೆಂಗ್ ನಿಮಗೀ ಹೆಸರು ಬಂತ್ರಿ ?' ಎಂದು ವಿಷಯಕ್ಕೆಳಿಸಿದೆ.

ಅವಳ ಸಂಯಮದ ಕಟ್ಟೆಯೊಡೆಯಿತು – ''ಯಾಂಬಲ್ರಿವ. ನಮ್ಮವ್ವ ನನ್ನ ಬಸಿರಿದ್ದಾಗ ಊರಾಗ ಯಾವುದೋ ನಾಟಕ ನೋಡಾಕ ಹೋಗಿತ್ತಂತ್ರಿ. ನಾಟಕ ನೋಡಿಬಂದ ರಾತ್ರಿನ ನನ್ನ ಹಡೆದಳಂತ್ರೀ. ಆ ನಾಟಕದಾಗ ಯಾವ ರಾಕ್ಷಸಿ ಹೆಸರಾಗಿತ್ತೋ ಯಾರಿಗೊತ್ರೀ. ನನಗ ಅದು ಹೆಸರಿಟ್ರಂತ ನೋಡ್ರಿ. ಮಳ್ಳ ಮುದುಕಿ.'' ಒಂದು ರೀತಿಯ ತಿರಸ್ಕಾರ, ತನ್ನ ತಾಯಿಯ ಬಗೆಗಿನ ತಾತ್ಸಾರ ಅವಳ ಧ್ವನಿಯಲ್ಲಿ ತಾನೇ ತಾನಾಗಿ ಧ್ವನಿಸುತ್ತಿತ್ತು.

ನಾನವಳನ್ನು ಕುಳ್ಳಿರಿಸಿಕೊಂಡು – ''ಇದು ಯಾವ ರಾಕ್ಷಸಿಯ ಹೆಸರೂ ಅಲ್ಲ. ಪಾಂಡವರು ಅಜ್ಞಾತವಾಸದಲ್ಲಿ ವಿರಾಟರಾಜನಲ್ಲಿದ್ದಾಗ ದ್ರೌಪದಿಯ ಹೆಸರು ಸೈರಂಧ್ರಿ. ಆ ಪಂಚ ಮಹಾಪತಿವ್ರತೆಯರ ಪೈಕಿ ಒಬ್ಬಳಾದ ಇಂಥ ಮಹಾಸಾಧ್ವಿಯ ಹೆಸರನ್ನೇ ನಿಮ್ಮ ತಾಯಿ ನಿನಗಿಟ್ಟಿದ್ದಾಳೆ'' ಎಂದು ಕೊಂಚ ಬಿಡಿಸಿ ತಿಳಿಹೇಳಿದಾಗ – ''ಅಯ್ಯೋ ಶಿವನ, ಹಿಂಗೈತೆನ್ರೀ ಈ ಕಥಿ'' ಎಂದು ಮನಸೋಕ್ತ ನಕ್ಕಾಗ ಅವಳ ಕಣ್ಣಲ್ಲಿ ಅಂದು ಒಂದು ಕ್ಷಣ ಮಿಂಚಿ ಮರೆಯಾಗಿದ್ದ ಮಿಂಚಿನ ಸೆಳೆತವನ್ನು ನಾನೆಂದೂ ಮರೆಯಲಾರೆ. ಅಂದಿನಿಂದ ತನ್ನ ಹೆಸರು ಹೇಳುವಾಗ ಅವಳ ಧ್ವನಿಯಲ್ಲಿ ಒಂದು ರೀತಿಯ ಆತ್ಮವಿಶ್ವಾಸ ಅಯಾಚಿತವಾಗಿ ಮನೆಮಾಡಿಕೊಂಡಿತ್ತು.

ಕನ್ನಡ ವಿಷಯದಲ್ಲಿ ಬಿ.ಎ. ಮಾಡುತ್ತಿರುವ ಷೋಡಶಿಯೋರ್ವಳು ಈಚೆಗೆ ಆಸ್ಪತ್ರೆಗೆ ಬಂದಳು. ರೂಢಿಯಂತೆ ಹೆಸರು ಕೇಳಿದೆ. ಇಂಪಾದ ದನಿ ಉಲಿಯಿತು – 'ಮಂಜೂಷಾ'. ''ಮಂಜೂಷಾ ಎಂದರೇನು ?'' ನಾನು ಕೇಳಿದೆ. ಗಲಿಬಿಲಿಗೊಳ್ಳುವ ಸರದಿ ಆಕೆಯದು. ನನ್ನ ಪ್ರಶ್ನೆಯನ್ನು ಬಿಡಿಸಿಟ್ಟೆ: ''ನಿನ್ನ ಹೆಸರಿನ ಅರ್ಥವೇನಮ್ಮ ?'' ಆಶ್ಚರ್ಯದಿಂದ ಅವಳ ಹುಬ್ಬೇರಿತು. ''ಹೆಸರಿಗೂ ಅರ್ಥವಿರುವುದುಂಟೇ ?'' ಎಂಬ ಭಾವ ಅವಳ ನೋಟದಲ್ಲಿತ್ತು. ''ಮಂಜೂಷ

ಎಂದರೆ ಆಭರಣಗಳಿರುವ ಪೆಟ್ಟಿಗೆ'' ಎಂದು ನಾನು ತಿಳಿಹೇಳಿದಾಗ ಅವಳ ಮುಖ ೨೪ ಕ್ಯಾರೆಟ್ ಬಂಗಾರದಂತಾಯ್ತು.

ಮೊನ್ನೆ ನಮ್ಮೂರಿಗೆ ಹೊಸದಾಗಿ ಮದುವೆಯಾಗಿದ್ದ ಹುಡುಗಿಯೊಬ್ಬಳು ಬಂದಳು. ''ಊರಿಗೆ ಬಂದವಳು ನೀರಿಗೆ ಬಾರದಿರುವಳೇ'' – ಇದು ಹಳೆಯ ಗಾದೆ. ''ಊರಿಗೆ ಬಂದವಳು ಆಸ್ಪತ್ರೆಗೆ ಬರಲಿರಲಾದೀತೇ!'' ಇದು ಇಂದಿಗೆ ಅನ್ವಯವಾಗುವ ಮಾತು. ನಾಲ್ಕಾರು ದಿನಗಳಲ್ಲಿ ಮದುಮಗಳ ಸವಾರಿ ನಮ್ಮಲ್ಲಿ ಬಿಜಯಂಗೈಯಿತು.

''ಹೆಸರು ?'' ನನ್ನ ಪ್ರಶ್ನೆ.

''ಶರವರಿ''

''ಶರಾವತಿ !?'' ಸಂತೋಷ, ಆಶ್ಚರ್ಯ ನನ್ನ ದನಿಯಲ್ಲಿತ್ತು. ಗುಜರಾತಿ ವಧುವಿಗೆ ಕನ್ನಡ ನಾಡಿನ ಜೀವನದಿಯ ಹೆಸರನ್ನು ತಳುಕು ಹಾಕಲು ನನ್ನ ಮನ ನನಗರಿವಿಲ್ಲದೆಯೇ ತಾಳ ಹಾಕುತ್ತಿತ್ತೇನೋ? ತಟವಟ ನಡಿಗೆ, ಉತ್ಸಾಹದ ಚಿಲುಮೆ, ನಕ್ಕರೆ ಫಳ್ಳನೆ ಹೊಳೆಯುವ ಬೆಳದಿಂಗಳಂಥ ಹಲ್ಲುಗಳು ಶರಾವತಿಯ ಸಿರಿ ಬೆಳಕನ್ನು ನನಗೆ ನೆನಪಿಗೆ ತಂದಿರಬಹುದು.

''ಊಹುಂ ಶರವರಿ'' ಘೂಂಘಟಿನ ಆಳದಿಂದಲೇ ಒರಟು ತಿದ್ದುಪಡಿ.

''ಓಹೋ! ಶರವರಿಯೋ ? ಹಾಗೆಂದರೆ ?'' ನನ್ನದು ಬತ್ತದ ಕುತೂಹಲ.

''ನನಗಂತೂ ಗೊತ್ತಿಲ್ಲ. ಇದು ನನ್ನ ಮೊದಲಿನ ಹೆಸರೂ ಅಲ್ಲ. ಗಂಡನ ಮನೆಯವರು ಇರಿಸಿರುವ ಮುದ್ದಿನ ಹೆಸರು.''

ನನ್ನ ಪ್ರಶ್ನಾರ್ಥಕ ನೋಟ ಅವಳ ಗಂಡನೆಡೆಗೆ ಹೊರಳಿತು. ಅವನು ಉಪೇಕ್ಷೆಯಿಂದಲೆಂಬಂತೆ ಭುಜ ಕುಣಿಸಿದ.

ಆ ಸಂದರ್ಭಕ್ಕೆ ನನಗೂ ಅದರರ್ಥ ಗೊತ್ತಿರಲಿಲ್ಲ.

ಆದರೆ ಮುಂದೊಂದು ದಿನ 'ಶರವರಿ' ಎಂದರೆ ಕತ್ತಲು; ನಿಶಾ, ಶರವರಿ, ಯಾಮಿನಿ – ಇವೆಲ್ಲಾ ಈ ದಿಶೆಯಲ್ಲಿ ಸಮಾನಾರ್ಥಕ ಹೆಸರುಗಳೇ ಎಂದು ನಾನೇನೋ ಸ್ಥಿತಪ್ರಜ್ಞನಂತೆ ವಿವರಿಸುತ್ತಿದ್ದರೂ ಅವಳ ಮುಖ ಒಂದು ಕ್ಷಣ ಕಪ್ಪಿಟ್ಟಿದ್ದು ಮಾತ್ರ ನಿಜ.

ಒಟ್ಟಿನಲ್ಲಿ ಹೆಚ್ಚಿನ ಸಂದರ್ಭಗಳಲ್ಲಿ ನಮಗೂ ನಮ್ಮ ಹೆಸರಿಗೂ ಅಜಗಜಾಂತರ. ಒಮ್ಮೆ ಅಜ ಹೆಸರಾದರೆ, ಗಜ ಗಾತ್ರ. ಇನ್ನು ಕೆಲವು ಸಲ ಇದೇ ತಿರುವು ಮುರುವು.

ಅನ್ವರ್ಥನಾಮ ಎಂಬುದು ನಮ್ಮಲ್ಲಿ ತುಂಬ ಪ್ರಚಲಿತವಿರುವ ಪದಗುಚ್ಛ. ಅವರವರ ಹೆಸರನ್ನು ಅವರ ಪ್ರತಿಭೆ, ನಡತೆ ವ್ಯಕ್ತಿತ್ವಕ್ಕೆ ಹೋಲಿಸಿ ತಳಕುಹಾಕಲು, ಭಾಷಣಕಾರರು, ಬರಹಗಾರರು ತಿಪ್ಪರಲಾಗ ಹಾಕುತ್ತಾರೆ.

ಕೆಲವು ಹೆಸರುಗಳು ಮಾತ್ರ ನಿಶ್ಚಿತಕ್ಕೂ ಅನ್ವರ್ಥನಾಮಗಳೇ. ನನ್ನ ಬಾಲ್ಯದಲ್ಲಿ ನನ್ನ ಮಿದುಳಿನಲ್ಲಿ ಅಚ್ಚಾದ ಮತ್ತು ಇಂದಿಗೂ ಮಸುಕಾಗದೇ ಉಳಿದ ಅಂಥದೊಂದು ಪ್ರಸಂಗ –

ಆಗ ನಾನಿನ್ನೂ ಪ್ರಾಥಮಿಕ ಶಾಲೆಯ ಬಹುಶಃ ಎರಡನೆಯ ವರ್ಗದ ವಿದ್ಯಾರ್ಥಿ. ನಮ್ಮೂರಲ್ಲಿ ಆಗ ಸಾರ್ವಜನಿಕವಾಗಿ ನೆಹರು, ಗಾಂಧಿ ಮತ್ತು ಬಸವ ಜಯಂತಿಗಳನ್ನು ಆಚರಿಸುತ್ತ ಭಾಷಣ ಸ್ಪರ್ಧೆಗಳನ್ನೇರ್ಪಡಿಸುತ್ತಿದ್ದರು. ಸ್ಪರ್ಧೆಗಳಲ್ಲಿ ಅತಿ ಚಿಕ್ಕವನಾಗಿದ್ದ ನಾನು ನೆಹರು ಜಯಂತಿಯ ಸಂದರ್ಭವೊಂದರಲ್ಲಿ ನಮ್ಮ ತಂದೆ ಬರೆದುಕೊಟ್ಟಿದ್ದ ಭಾಷಣವನ್ನು ಉರುಹೊಡೆಯುತ್ತ ಒರಲಿದೆ – ''ಚಾಚಾ ನೆಹರುರವರ ಹೆಸರು ಜವಾಹರ. ಇವರ ತಂದೆಯ ಹೆಸರು ಮೋತಿಲಾಲ. ಮೋತಿ ಎಂದರೆ ಮುತ್ತು, ಜವಾಹರ ಎಂದರೆ ರತ್ನ. ಈ ಮುತ್ತಿನ ಹೊಟ್ಟೆಯಿಂದ ಈ ರತ್ನ ಹುಟ್ಟಿದ್ದು ೧೮೮೯ರ ನವೆಂಬರ್ ೧೪ರಂದು.''

ಜನರಿಂದ ನಾನು ಗಿಟ್ಟಿಸಿದ ಚಪ್ಪಾಳೆಯೇ ನನಗೆ ಮೊದಲ ಬಹುಮಾನ ಗ್ಯಾರಂಟಿ ಎಂಬುದನ್ನು ಸಾಬೀತುಗೊಳಿಸಿತ್ತು.

೧೯೯೫ರಲ್ಲಿ ನಮ್ಮಲ್ಲಿಗೆ ಸುಪ್ರಸಿದ್ಧ ಸಾಹಿತಿ, ಅಂಕಣಕಾರ ಡಾ|| ಹಾ.ಮಾ. ನಾಯಕರು ಬಂದಿದ್ದರು. ಪರಿಚಯ ಭಾಷಣದಲ್ಲಿ ನಾನು – ''ಹಾಮಾನಾ ಎಂದೇ ಪ್ರಸಿದ್ಧರಾಗಿರುವ ಇವರ ಹೆಸರನ್ನು ಇಂಗ್ಲಿಷಿನಲ್ಲಿ ಹೇಳಬೇಕೆಂದರೆ, ಎಚ್. ಎಮ್. ನಾಯಕ ಎನ್ನಬೇಕು. ಕನ್ನಡಿಗರ ಪಾಲಿಗೆ ಇವರು ಎಚ್. ಎಮ್. ಎಂದರೆ ಹೆಡ್ ಮಾಸ್ಟರ್ ನಾಯಕರೆಂದೇ ಹೇಳಬೇಕು. ಕನ್ನಡದ ವಿಷಯಕ್ಕೆ ಇವರು ಇಂದಿನ ಎಚ್ಚೆಮ ನಾಯಕರೇ ಸರಿ'' ಎಂದೆ. ಇದರಿಂದ ಪ್ರಭಾವಿತನಾದ ಹೈಸ್ಕೂಲ್ ವಿದ್ಯಾರ್ಥಿಯೊಬ್ಬ, ಆತನ ಇನಿಷಿಯಲ್ಸ್ ಸಹ H.M. ಇದ್ದುದರಿಂದ ತನ್ನನ್ನೂ ಎಚ್. ಎಮ್. ಎಂದೇ ಕರೆದುಕೊಳ್ಳತೊಡಗಿದ. ಆತನ ಗೆಳೆಯರೂ ಇವನನ್ನು ಇದೇ ಹೆಸರಿನಿಂದ ಕರೆಯತೊಡಗಿದಾಗ ಆತ ಖುಷಿಯಿಂದ ಉಬ್ಬಿಹೋದ. ಆದರೆ ಕೆಲದಿನಗಳ ನಂತರದಲ್ಲಿಯೇ ಈತನನ್ನು ಎಚ್.ಎಮ್. ಎಂದು ಕರೆದಾಗ ಸಿಡಿಮಿಡಿಗೊಳ್ಳತೊಡಗಿದ. ಕಾರಣ ಕೇಳಿದಾಗ ತಿಳಿದಿದ್ದಿಷ್ಟು– ಈತನ ಗೆಳೆಯರು ಈತನನ್ನು ಹೀಗೆಂದು ಸಂಬೋಧಿಸುತ್ತಿದ್ದರೇನೋ ಸರಿಯೇ! ಆದರೆ ಈತನ ಬೆನ್ನಹಿಂದೆ ಇವರು ಎಚ್.ಎಮ್.ಗೆ ನೀಡುತ್ತಿದ್ದ ವಿವರಣೆ – ಹಾಫ್ ಮ್ಯಾಡ್. ಇದು ಬಾಯಿಂದ ಬಾಯಿಗೆ ಹರಡಿ ಎಚ್.ಎಮ್.ನ ಕಿವಿಗೂ ಬಿದ್ದಿತು.

ಹೆಸರುಗಳ ಲೋಕ ಯಾರಿಗಾದರೂ ವಿಸ್ಮಯ ಹುಟ್ಟಿಸುವಂಥದ್ದು. ಈ ಲೋಕದ ಮುಚ್ಚಳ ಬಿಚ್ಚಿ ಹಣಿಕಿಹಾಕುವ ಹವಣಿಕೆ ಬೇಕು. ಈ ಲೋಕವನ್ನು ತಾಳ್ಮೆ, ಕುತೂಹಲದಿಂದ ಉತ್ಖನನಮಾಡುತ್ತ ಸಾಗುವ ಎದೆಗಾರಿಕೆ ಬೇಕು. ಇದು ಈ ಲೋಕದ ಅಂತರಂಗದಲ್ಲೇನೇನು ಇದೆ ಎಂಬುದನ್ನು, ಮೇಲ್ನೋಟಕ್ಕೆ ಕಾಣಬರುವುದನ್ನು ತಿಳಿಯಪಡಿಸುವ ಒಂದು ಲಘುಬರಹ ಮಾತ್ರ.

**ಡಾ|| ಅನಿಲ ಕಮತಿ**
ಯಕ್ಸಂಬಾ - ೫೯೧ ೨೪೪

# ಗಾಂಧೀ

ಗಾಂಧೀ ಎನ್ನುವುದು ಮಂತ್ರವೇ
ಗಾಂಧೀ ಎನ್ನುವುದು ತಂತ್ರವೇ
ಅಲ್ಲ, ಗಾಂಧೀ ಎನ್ನುವುದು
ನೊಂದ ಮನಗಳ ದೀನದಲಿತರ ಸತ್ಯ.

ಗಾಂಧೀ ಎನ್ನುವುದು ತ್ಯಾಗವೇ
ಗಾಂಧೀ ಎನ್ನುವುದು ವೇದವೇ
ಅಲ್ಲ, ಗಾಂಧೀ ಎನ್ನುವುದು
ವಿಶ್ವವನ್ನೇ ಸೆಳೆದುಕೊಂಡ ಶಕ್ತಿ,
ದಬ್ಬಾಳಿಕೆಯಿಂದ ಮುಕ್ತಿಮಾಡಿದ ಯುಕ್ತಿ.

ಗಾಂಧೀ ಎನ್ನುವುದು ಹಟವೇ
ಗಾಂಧೀ ಎನ್ನುವುದು ಛಲವೇ, ಅಲ್ಲ,
ಗಾಂಧೀ ಎನ್ನುವುದು ಭಾರತೀಯರ ಬಲ.
ಭಾರತಕ್ಕೆ ಸ್ವಾತಂತ್ರ್ಯ ನೀಡಿದ ಛಲ!

**ಜಿ. ಎಂ. ರೇಖಾ**
ಮೊದಲ ಬಿ.ಎಸ್ಸಿ. ವಿದ್ಯಾರ್ಥಿನಿ, ಕೇರಾಫ್ ಡಿ. ರಾಮನಮಲಿ
ಆಚಾರ್ಯ ಬಡಾವಣೆ, ಹರಪನಹಳ್ಳಿ






# ಭಯೋತ್ಪಾದನೆಯ ವಿರುದ್ಧ ಬುಷ್ ಸಮರದ ವೈಖರಿ

**ಭ**ಯೋತ್ಪಾದನೆಯ ವಿರುದ್ಧ ಅಮೆರಿಕಾದ ಅಧ್ಯಕ್ಷ ಜಾರ್ಜ್ ಬುಷ್ ಸಮರ ಸಾರಿ ೫ ವರ್ಷ ಮುಗಿಯಿತು. ಈ ಕಾಲಾವಧಿಯಲ್ಲಿ ಅಮೆರಿಕಾಗೆ ಮುಖಭಂಗವಾಗಿದೆಯೇ ಹೊರತು ಭಯೋತ್ಪಾದನೆಯ ಉಪಟಳವೇನೂ ಕಡಿಮೆಯಾಗಲಿಲ್ಲ, ಬದಲಾಗಿ ಹೆಚ್ಚಾಗಿದೆ. ಸೆಪ್ಟೆಂಬರ್ ೧೧, ೨೦೦೧ರಂದು ಬಲಾಢ್ಯ ಅಮೆರಿಕಾವನ್ನು ತಲ್ಲಣಗೊಳಿಸಿದ ಭಯೋತ್ಪಾದಕರ ದಾಳಿ ಅದರ ಅಲಂಘನೀಯತೆಯನ್ನು ಪೊಳ್ಳಾಗಿಸಿದ್ದಲ್ಲದೆ, ಸೊಕ್ಕು ಮುರಿಯಿತು. ಇದರಿಂದ ಪಾಠ ಕಲಿಯುವುದು ಬಿಟ್ಟು ಅಮೆರಿಕಾದ ಆಡಳಿತಗಾರರು ಮತ್ತಷ್ಟು ದುಸ್ಸಾಹಸದಲ್ಲಿ ತೊಡಗಿದರು. ಎಲ್ಲ ಅಂತಾರಾಷ್ಟ್ರೀಯ ನಿಯಮಗಳನ್ನು, ಪ್ರಪಂಚದ ಜನಾಭಿಪ್ರಾಯವನ್ನು ಕಡೆಗಣಿಸಿ ಅವರು ದುರಾಕ್ರಮಣದಲ್ಲಿ ತೊಡಗಿದರು. ಅದರ ಪರಿಣಾಮವಾಗಿ ಇಂದು ಪ್ರಪಂಚದ ಜನರು ಭಯೋತ್ಪಾದನೆಯ ಭೀತಿಯ ನೆರಳಿನಲ್ಲಿ ಜೀವಿಸಬೇಕಾಗಿಬಂದಿದೆ. ಐದು ವರ್ಷಗಳಾದ ಮೇಲೆ ಅಮೆರಿಕಾದ ಜನರೇ ಇದನ್ನು ಅರಿತುಕೊಳ್ಳುತ್ತಿದ್ದಾರೆ. ಬುಷ್ ಆಡಳಿತೆಯ ನೀತಿಗಳಿಗೆ ಅಮೆರಿಕನ್ನರ ಬೆಂಬಲ ತೀವ್ರವಾಗಿ ಕುಸಿದಿದೆ. ಅವಿವೇಕಿ ಬುಷ್‌ನ ಮೂರ್ಖತನದ ನೀತಿಗಳಿಗೆ ದಾಸಾನುದಾಸನಂತೆ ಬೆಂಬಲವಾಗಿ ನಿಂತ ಬ್ರಿಟಿಷ್ ಪ್ರಧಾನಿ ಟೋನಿ ಬ್ಲೇರ್ ಅಧಿಕಾರ ಕಳೆದುಕೊಳ್ಳುವ ಅಂಚಿನಲ್ಲಿದ್ದಾನೆ.

ಸೆಪ್ಟೆಂಬರ್ ೧೧ರ ನಂತರ ಒಸಾಮ ಬಿನ್ ಲಾಡೆನ್‌ನ ಅಲ್ ಖೈದಾ ಸಂಘಟನೆಯನ್ನು ನಿರ್ನಾಮಗೊಳಿಸುವ ಉದ್ದೇಶದಿಂದ ಅಫ್ಘಾನಿಸ್ತಾನದ ಮೇಲೆ ದಾಳಿ ನಡೆಸಿ ಆಕ್ರಮಿಸಿಕೊಂಡರೂ ಅಮೆರಿಕಾಗೆ ಲಾಡೆನ್ ಚಳ್ಳೆಹಣ್ಣು ತಿನ್ನಿಸಿ ಕೈಗೆ ಸಿಗದೆ ಸತಾಯಿಸುತ್ತಿದ್ದಾನೆ. ಇದೊಂದು ಕಡೆಯಾದರೆ ಅಲ್ಲಿ ಬುಷ್ ಸ್ಥಾಪಿಸಿರುವ 'ಪ್ರಜಾಪ್ರಭುತ್ವ' ಸರಕಾರ ಅಮೆರಿಕನ್ ಸೈನ್ಯ ಬಲದಿಂದ ಉಸಿರಾಡುತ್ತಿದೆ. ರಾಜಧಾನಿಯಾದ ಕಾಬೂಲಿನ ಹೊರಗೆ ಸರಕಾರದ ಆಡಳಿತೆಯ ಸುಳಿವು ಕಾಣುವುದು ಕಷ್ಟ. ಗಡಿಪ್ರದೇಶಗಳಲ್ಲಿ ಹಿಂದಿನ ತಾಲಿಬಾನ್ ಬೆಂಬಲಿಗರದೇ ಅಟ್ಟಹಾಸ. ಸುಮಾರು ಮೂರು ದಶಕಗಳಿಂದ ಯುದ್ಧದ ವಾತಾವರಣದಲ್ಲೇ ಬದುಕಿ ಉಳಿದು ಜೀವಿಸುತ್ತಿರುವ ಆಫ್ಘನ್ ಜನತೆಗೆ ವಿಮೋಚನೆಯೇ ಇಲ್ಲವಾಗಿದೆ. ಅಭಿವೃದ್ಧಿಯನ್ನೆ ಕಾಣದೆ ಕಡುಬಡತನದಲ್ಲಿ ಮುಳುಗಿರುವ, ಪರ್ವತಗಳಿಂದಾವೃತವಾಗಿರುವ ಅಫ್ಘಾನಿಸ್ತಾನ ಇಂದು ವಿದೇಶೀ ಸೈನ್ಯವನ್ನು ಸಾಕಬೇಕಾಗಿಬಂದಿರುವುದು ಅಮೆರಿಕಾ ಈ ದೇಶಕ್ಕೆ ಕೊಟ್ಟಿರುವ ಬಳುವಳಿ.

ಭಯೋತ್ಪಾದನೆಯ ವಿರುದ್ಧ ಸಮರದ ಮೊದಲ ಆಹುತಿ ಅಫ್ಘಾನಿಸ್ತಾನವಾದರೆ ಎರಡನೆಯದು ಇರಾಕ್. ಸುಳ್ಳು ಆರೋಪ ಹೊರಿಸಿ ನಡೆಸಿದ ಮಾರಣಹೋಮ ಇದು. ಮೂರು ವರ್ಷದ ಮೇಲಾದರೂ ಮುಗಿಯದ ಯುದ್ಧ. ಬುಷ್‌ಗೆ ಇದು ಇನ್ನೊಂದು ವಿಯೆಟ್ನಾಮ್ ಆಗುತ್ತಿದೆ. ಪ್ರತಿದಿನ ಇಲ್ಲಿ ಹತ್ತಾರುಮಂದಿ ಅಮಾಯಕ ಜನ ಸಾವಿಗೀಡಾಗುತ್ತಿದ್ದಾರೆ. ಸಹಸ್ರಾರು ಇರಾಕಿ ಜನರನ್ನು ಆಹುತಿ ತೆಗೆದುಕೊಂಡಿರುವ ಈ ಯುದ್ಧದಲ್ಲಿ ಈವರೆಗೆ ೨೫೦೦ಕ್ಕೂ ಹೆಚ್ಚು ಮಂದಿ ಅಮೆರಿಕನ್ ಯೋಧರು ಸತ್ತಿದ್ದಾರೆ. ಅಮೆರಿಕಾದ ಬೊಕ್ಕಸದಿಂದ ಬಿಲಿಯಗಟ್ಟಲೆ ಹಣ ವಿನಿಯೋಗವಾಗಿದೆ. ಪ್ರಪಂಚದ ಮೇಲೆ ಅಧಿನಾಯಕತ್ವ ಸ್ಥಾಪಿಸಲು ಬಯಸಿರುವ ಅಮೆರಿಕಾ ಎಂಥ ಪಾತಕವನ್ನೂ ಎಸಗಲು ಹಿಂಜರಿಯದು ಎನ್ನುವುದಕ್ಕೆ ಇರಾಕಿ ವಿದ್ಯಮಾನ ಸಾಕ್ಷಿ. ಭಯೋತ್ಪಾದನೆಗೂ ಇರಾಕಿಗೂ ಯಾವ ಸಂಬಂಧವೂ ಇರಲಿಲ್ಲ ಎನ್ನುವುದು ಸ್ಪಷ್ಟವಾಗಿ ತಿಳಿದಿದ್ದರೂ ಬುಷ್‌ಗೆ ಬೇಕಾಗಿದ್ದುದು ಇರಾಕಿನಲ್ಲಿ ಕೈಗೊಂಬೆ ಸರಕಾರವನ್ನು ಸ್ಥಾಪಿಸುವುದು. ಅಂತಹ ಗುರಿಯಿಟ್ಟಿದ್ದರೂ ಫಲ ದೊರಕದೇ ಹೋಗಿದೆ. ದಿನೇ ದಿನೇ ಪರಿಸ್ಥಿತಿ ಹದಗೆಟ್ಟು ಅಂತರ್ಯುದ್ಧದ ಭೀತಿ ದೇಶವನ್ನಾವರಿಸಿದೆ. ಬುಷ್ ಸಿದ್ಧಾಂತಕ್ಕೆ ಭಾರಿ ಪೆಟ್ಟುಬಿದ್ದಿದೆ.

ಮಾನವ ಹಕ್ಕುಗಳನ್ನು ಎತ್ತಿಹಿಡಿಯುವ ಏಕೈಕ ಪ್ರತಿಪಾದಕ ತಾನು ಎಂದು ಬೀಗುತ್ತ, ಇತರ ದೇಶಗಳ ಮೇಲೆ ಮಾನವ ಹಕ್ಕುಗಳ ಉಲ್ಲಂಘನೆ ಆರೋಪ ಹೊರಿಸುತ್ತಿದ್ದು, ಸ್ವಯಂ ನೇಮಿತ ಪೊಲೀಸನಂತೆ ವರ್ತಿಸುತ್ತಿದ್ದ ಅಮೆರಿಕಾದ ಪೊಳ್ಳುತನ ಈಗ ಬಯಲಾಗಿದೆ. ಭಯೋತ್ಪಾದನೆಯ ವಿರುದ್ಧ ಸಮರದ ಹೆಸರಿನಲ್ಲಿ ಅಮೆರಿಕಾದಲ್ಲಿ ಮಾನವ ಹಕ್ಕುಗಳ ಉಲ್ಲಂಘನೆ ಯಥೇಚ್ಛವಾಗಿ ಸಾಗಿದೆ. ಸಾವಿರಾರು ಜನ ನಿರುಪದ್ರವಿಗಳು ಅಮೆರಿಕಾದ ಕಾರಾಗೃಹಗಳಲ್ಲಿ ವಿಚಾರಣೆ ಇಲ್ಲದೆ ಕೊಳೆಯುತ್ತಿದ್ದಾರೆ. ಗ್ವಾಂಟೆನಾಮೊ ಕೊಲ್ಲಿಯಲ್ಲಿರುವ ಕಾರಾಗೃಹ ಮತ್ತು ಇರಾಕಿನ ಅಬುಗ್ರೈಬ್ ಕಾರಾಗೃಹಗಳಲ್ಲಿ ನಡೆದಿರುವ ದೌರ್ಜನ್ಯ, ಅಮಾನವೀಯ ಕ್ರೌರ್ಯ ನಾಗರಿಕ ಜಗತ್ತನ್ನು ದಿಗ್ಭ್ರಮೆಗೊಳಿಸಿವೆ. ಅಮೆರಿಕಾದ ದುಷ್ಕೃತ್ಯಗಳೆಲ್ಲ ಈ ಐದು ವರ್ಷಗಳಲ್ಲಿ ಸಂಪೂರ್ಣವಾಗಿ ನಗ್ನಗೊಂಡಿವೆ. ಭಯೋತ್ಪಾದನೆ ವಿರುದ್ಧ ಸಮರದಲ್ಲಿ ಕೊಚ್ಚಿ ಹೋಗಿರುವುದು ಮಾನವ ಹಕ್ಕುಗಳು. ಇದು ಬುಷ್ ನೀಡಿರುವ ಕಾಣಿಕೆ !

ಇಷ್ಟಾದರೂ ಅಮೆರಿಕಾ ಆಡಳಿತ ತನ್ನ ದುಷ್ಟ ನೀತಿಯನ್ನು ಮುಂದುವರಿಸುತ್ತಿದೆ. ಇರಾನಿನ ಮೇಲೆ ದಾಳಿ ನಡೆಸಲು ತುದಿಗಾಲಲ್ಲಿ ನಿಂತಿದೆ. ಇಡೀ ಮಧ್ಯಪ್ರಾಚ್ಯದಲ್ಲಿ ಏಕಾಧಿಪತ್ಯ ಸ್ಥಾಪಿಸುವ ಸನ್ನಾಹ ನಡೆಸುತ್ತಿದೆ. ಇಸ್ರೇಲಿನ ಅಟ್ಟಹಾಸ, ದುರಾಕ್ರಮಣ ನೀತಿಗಳಿಗೆ ಬೆಂಬಲ ನೀಡುತ್ತಿರುವ ಅಮೆರಿಕಾ ಈ ಪ್ರದೇಶದಲ್ಲಿ ಅಸ್ಥಿರತೆಯನ್ನು ಹೆಚ್ಚಿಸಿದೆ. ಅಧ್ಯಕ್ಷ ಬುಷ್ ಭಯೋತ್ಪಾದನೆಯನ್ನು ಹತ್ತಿಕ್ಕುವುದಿರಲಿ, ತಾನೇ ಅತಿದೊಡ್ಡ ಭಯೋತ್ಪಾದಕನಾಗಿದ್ದಾನೆ. ಭಯೋತ್ಪಾದನೆಯ ವಿರುದ್ಧ ಸಮರ ನಿಜವಾಗಿಯೂ ಅಮೆರಿಕಾದ ಅಧಿನಾಯಕತ್ವದ ವಿರುದ್ಧ ಸಮರವಾದಾಗ ಅರ್ಥಪೂರ್ಣವಾಗುತ್ತದೆ. ಮಧ್ಯಪ್ರಾಚ್ಯದಿಂದ ಕೈ ತೆಗೆಯಬೇಕೆಂದು ಅಮೆರಿಕಾದ ಆಡಳಿತೆಯ ಮೇಲೆ ಜನತೆ ಒತ್ತಾಯ ತರುವುದು ನಿಜವಾದ ಸಮರವಾಗುತ್ತದೆ. ಜಾಗತೀಕರಣದ ಹೆಸರಿನಲ್ಲಿ ಬಡರಾಷ್ಟ್ರಗಳನ್ನು ಆರ್ಥಿಕ ದಾಸ್ಯಕ್ಕೆ ದೂಡುತ್ತಿರುವ ಬಹುರಾಷ್ಟ್ರೀಯ ಸಂಸ್ಥೆಗಳ ವಿರುದ್ಧ ಹೋರಾಟ ನಡೆಸುವುದು ಭಯೋತ್ಪಾದನೆಯ ವಿರುದ್ಧ ನಿಜವಾದ ಸಮರವಾಗಿರುತ್ತದೆ. ಸ್ವಹಿತ ಸಾಧನೆಗಾಗಿ ಇತರ ದೇಶಗಳ ವ್ಯವಹಾರದಲ್ಲಿ ತಲೆತೂರಿಸುವ ಅಮೆರಿಕಾದ ನೀತಿ ಬದಲಾಗುವವರೆಗೆ ಭಯೋತ್ಪಾದನೆಯ ವಿರುದ್ಧ ಸಮರ ಯಶಸ್ವಿಯಾಗದು. ಅದು ಬಿಟ್ಟು ಬುಷ್ ಕಂಪನಿ ಏನೇ ಎಗರಾಡಿದರೂ ಅದು ಗಾಳಿಯೊಂದಿಗೆ ಗುದ್ದಾಟವೇ ಸರಿ.

# ಬಲೂಚಿಸ್ತಾನ-ಪಾಕಿಸ್ತಾನಕ್ಕೆ ನುಂಗಲಾರದ ತುತ್ತು

**ಭಾ**ರತ-ಪಾಕಿಸ್ತಾನ ಸಂಬಂಧಗಳ ಸುಧಾರಣೆಗಾಗಿ ಮಾತುಕತೆಗಳು ಸಫಲಗೊಂಡು, ಸ್ಪಷ್ಟರೂಪ ತಳೆಯುವುದೇನೋ ಎಂದು ತೋರಿದಾಗ ಏನಾದರೊಂದು ಅಡ್ಡಿ ಹಿನ್ನಡೆ. ಇದು ಒಂದು ತರಹ ಪುನರಾವರ್ತನೆಯಾಗುತ್ತಲೇ ಬಂದಿದೆ. ಇದಕ್ಕೆ ಕಾರಣಗಳನ್ನು ಪಟ್ಟಿ ಮಾಡುವುದು ಕಷ್ಟವೇನಲ್ಲ. ಮುಖ್ಯವಾದ ಒಂದು ಕಾರಣ ಭಯೋತ್ಪಾದನೆಯ ದುಷ್ಕೃತ್ಯ. ಇತ್ತೀಚೆಗೆ ಮುಂಬಯಿ ರೈಲಿನಲ್ಲಿ ನಡೆದ ಸರಣಿ ಬಾಂಬು ಸ್ಫೋಟ, ನಾಸಿಕ್ ಬಳಿ ಮಲೆಗಾಂವ್‌ನಲ್ಲಿ ನಡೆದ ಬಾಂಬು ಸ್ಫೋಟ ಮಾತುಕತೆಗಳ ಮುಂದುವರಿಕೆಗೆ ಸಾಕಷ್ಟು ಅಡಚಣೆ ತಂದಿವೆ. ರಾಜಕೀಯವಾಗಿ ಎರಡೂ ಕಡೆ ಗಟ್ಟಿನಿರ್ಧಾರ, ಇಚ್ಛಾಶಕ್ತಿ ಇದ್ದಲ್ಲಿ ಈ ಅಡ್ಡಿಯ ನಿವಾರಣೆ ಸಾಧ್ಯವಾದೀತು. ಈಗ ಇದರ ಮೇಲೆ ಪಾಕಿಸ್ತಾನದ ಬಲೂಚಿಸ್ತಾನ ಪ್ರಾಂತದಲ್ಲಿ ಭುಗಿಲೆದ್ದಿರುವ ಆಕ್ರೋಶವೂ ಕೂಡ ಭಾರತ-ಪಾಕಿಸ್ತಾನ ಮಾತುಕತೆಗಳ ಮೇಲೆ ಪರಿಣಾಮ ಉಂಟುಮಾಡುವ ಅನುಮಾನವಿದೆ. ಅಲ್ಲಿನ ಪ್ರತಿಭಟನೆಗಳಿಗೆ ಭಾರತದ ಪ್ರಚೋದನೆ ಇದೆ ಎಂಬ ನಂಬಿಕೆ ಪಾಕಿಸ್ತಾನದ ಕೆಲ ವಲಯಗಳಲ್ಲಿ ಕೇಳಿಬರುತ್ತಿದೆ. ಇಂಥ ಅನಿರೀಕ್ಷಿತತೆಗಳನ್ನು ಮೀರಿ, ಅವನ್ನು ಬದಿಗಿರಿಸಿ ಮುಂದುವರಿಯುವುದು ಒಳ್ಳೆಯ, ಪಕ್ವ ಮುತ್ಸದ್ದಿತನವಾಗಿರುತ್ತದೆ. ಎರಡೂ ದೇಶಗಳ ಮುಖಂಡರುಗಳು ಈ ಮಾರ್ಗದಲ್ಲಿ ಮುಂದುವರಿಯುವುದು ಸೂಕ್ತವಾಗಿರುತ್ತದೆ.

ಪಾಕಿಸ್ತಾನದ ಅಫ್ಘನ್ ಗಡಿಯಲ್ಲಿರುವ ಬಲೂಚಿಸ್ತಾನ ಪ್ರಾಂತ ಮೊದಲಿನಿಂದಲೂ ಪಾಕಿಸ್ತಾನಕ್ಕೆ ಕಂಟಕವಾಗಿಯೇ ಇದೆ. ಯಾವುದೇ ಅಭಿವೃದ್ಧಿ ಕಾರ್ಯ ಕಾಣದೆ ಇರುವ ಈ ಪ್ರಾಂತದ ಜನತೆಗೆ ಕೇಂದ್ರಾಡಳಿತೆಯ ವಿರುದ್ಧ ಆಕ್ರೋಶ ಇದ್ದೇ ಇದೆ. ಸಿಂಧಿ, ಪಂಜಾಬಿ ಹಾಗೂ ಪಾಕಿಸ್ತಾನಿ ಮಿಲಿಟರಿಯ ದಬ್ಬಾಳಿಕೆ, ಶೋಷಣೆಗಳಿಗೆ ಈಡಾಗಿರುವ ಭಾವನೆ ಬಲೂಚಿ ಜನರಲ್ಲಿ ಬೇರೂರಿದೆ. ಆಗಾಗ್ಗ ಆಕ್ರೋಶ ಭುಗಿಲೆದ್ದು ಪ್ರತಿಭಟನೆಗಳು ಜರುಗಿವೆ. ಪ್ರತ್ಯೇಕ ಬಲೂಚಿಸ್ತಾನ ಸ್ಥಾಪನೆಯ ಬೇಡಿಕೆಯೂ ಬಲವಾಗಿಯೇ ಇದೆ. ಈಗ ಅದಕ್ಕೆ ಮತ್ತಷ್ಟು ಪ್ರಚೋದನೆ ದೊರೆತಿದೆ. ಮುಂದಿನ ದಿನಗಳಲ್ಲಿ ಅದು ಪಾಕಿಸ್ತಾನಕ್ಕೆ ನುಂಗಲಾರದ ತುತ್ತಾಗಲು ಸಾಕು.

ಇತ್ತೀಚೆಗೆ ಪಾಕಿಸ್ತಾನಿ ಸೇನೆ ನಡೆಸಿದ ಕಾರ್ಯಾಚರಣೆಯಲ್ಲಿ ಬಲೂಚಿ ಜನರ ನಾಯಕ ನವಾಬ್ ಅಕ್ಬರ್ ಖಾನ್ ಬಗೂಟಿ ಸಾವಿಗೀಡಾದ್ದು ಜನರ ಆಕ್ರೋಶವನ್ನು ಇಮ್ಮಡಿಗೊಳಿಸಿದೆ. ಮೂರು ದಿನಗಳು ಸತತವಾಗಿ ಉಗ್ರವಾದ ಪ್ರತಿಭಟನೆ ಬಲೂಚಿಸ್ತಾನದಲ್ಲಿ ಜರುಗಿ ಜನ ಜೀವನವನ್ನು ಅಸ್ತವ್ಯಸ್ತಗೊಳಿಸಿತು. ಪಾಕಿಸ್ತಾನದ ಎಲ್ಲ ವಿರೋಧ ಪಕ್ಷಗಳೂ ಬಗೂಟಿಯ ಮೇಲಿನ ದಾಳಿಯನ್ನು ಖಂಡಿಸಿ ಪ್ರತಿಭಟಿಸಿವೆ. ಪಾಕಿಸ್ತಾನದ ಅಧ್ಯಕ್ಷ ಜನರಲ್ ಮುಷರಫ್ ನೀಡಿದ ಸಮಜಾಯಿಷಿಯಿಂದ ಏನೂ ಪ್ರಯೋಜನವಾಗಿಲ್ಲ. ಆಡಳಿತದ ಚುಕ್ಕಾಣಿ ಹಿಡಿದು ಏಳು ವರ್ಷ ಮುಗಿಸಿರುವ ಮುಷರಫ್ ಮುಂದಿನ ವರ್ಷ ಚುನಾವಣೆ ಎದುರಿಸಬೇಕಾಗಿದೆ. ಸೇನಾಧಿಪತಿ ಸ್ಥಾನ, ಅಧ್ಯಕ್ಷಗಿರಿ ಎರಡಕ್ಕೂ ಅಂಟಿಕೊಂಡಿರುವ ಮುಷರಫ್‌ಗೆ ಯಾವುದಾದರೂ ಒಂದು ಸ್ಥಾನವನ್ನಾರಿಸಿಕೊಳ್ಳಬೇಕೆಂದು ಸೇನಾಧಿಕಾರಿಗಳಿಂದಲೇ ಬಲವಾದ ಒತ್ತಾಯವಿದೆ. ಬಲೂಚಿಸ್ತಾನದ ಪರಿಸ್ಥಿತಿಯಿಂದಾಗಿ ಮುಷರಫ್ ರಾಜಕೀಯ ಭವಿಷ್ಯ ಇಕ್ಕಟ್ಟಿನಲ್ಲಿ ಸಿಕ್ಕಿದೆ. ಇದರಿಂದ ಪಾಕಿಸ್ತಾನದ ಜನರ ಗಮನವನ್ನು ಬೇರೆಡೆ ತಿರುಗಿಸಲು ಭಾರತದ ವಿರುದ್ಧ ಏನಾದರೂ ದುಸ್ಸಾಹಸದಲ್ಲಿ ಅವರು ತೊಡಗಬಹುದು ಎಂಬ ಗುಮಾನಿಯೂ ಇದೆ. ಈ ಎಲ್ಲ ಬೆಳವಣಿಗೆಗಳನ್ನು ಎಚ್ಚರದಿಂದ ಗಮನಿಸಿ ಭಾರತ ತನ್ನ ಮುಂದಿನ ಹೆಜ್ಜೆ ಇರಿಸಬೇಕಾಗಿದೆ, ಸಂಬಂಧಗಳ ಸುಧಾರಣೆಗೆ ಪ್ರಯತ್ನಿಸಬೇಕಾಗಿದೆ.

ಸೀಯಾರ್ಕೆ, 'ಚೌಬೀನ', ಬನಶಂಕರಿ ಮೂರನೇ ಹಂತ, ಕತ್ತಿಗುಪ್ಪೆ, ಬೆಂಗಳೂರು - [illegible]



# ಗ್ರಹಗಳಿಲ್ಲದ ಆಕಾಶ

ಅಕ್ಟೋಬರ್ ತಿಂಗಳ ಸಂಜೆಯ ಆಕಾಶದಲ್ಲಿ ಪ್ರಕಾಶಮಾನವಾದ ಗ್ರಹಗಳಿಗೆ ಬರ ಉಂಟಾಗಲಿದೆ. ಇದುವರೆವಿಗೂ ಸಂಜೆಯ ಆಕಾಶದಲ್ಲಿ ಸ್ಫುಟವಾಗಿ ಬೆಳಗುತ್ತಿದ್ದ ಗುರುಗ್ರಹ ದಿಗಂತದ ಅಂಚಿಗೇ ಸರಿದಿದೆ. ಮಂಗಳವಂತೂ ಕಳೆದ ತಿಂಗಳೇ ಕಾಣದಂತಾಗುವಷ್ಟು ಕ್ಷೀಣವಾಗಿ ಸಂಜೆಗೆಂಪಿನಲ್ಲಿ ಕರಗಿಹೋಗಿತ್ತು. (ಆದರೂ ಕೆಲವು ಕಿಡಿಗೇಡಿಗಳು ಆಗಸ್ಟ್ ೨೭ರಂದು ಅತಿ ಪ್ರಕಾಶಮಾನವಾಗಿ ಕಾಣಲಿದೆ ಎಂದು ತಪ್ಪು ಮಾಹಿತಿಯನ್ನು ಇ-ಮೇಲ್, ಎಸ್.ಎಂ.ಎಸ್. ಮೂಲಕ ಪ್ರಚಾರ ಮಾಡಿದ್ದರು. ಈ ಬಗ್ಗೆ ನಭಾವಲೋಕನದಲ್ಲಿ ಸೂಚನೆಯನ್ನೂ ಕೊಡಲಿಲ್ಲ ಎಂದು ಬಿಜಾಪುರದಿಂದ ಓದುಗರೊಬ್ಬರು ದೂರವಾಣಿಯಲ್ಲಿ ದೂರಿದ್ದರು.) ಒಟ್ಟಿನಲ್ಲಿ ಸಂಜೆಯ ಆಕಾಶ ಗ್ರಹಗಳಿಂದ ತಿರಸ್ಕೃತವಾಗಿದೆ, ಎನ್ನಬಹುದು. ಪ್ಲೂಟೋದ 'ಉಚ್ಚಾಟನೆ' ಸುದ್ದಿಯಾದ ಮೇಲೆ ಗ್ರಹ ಎಂಬ ಪದಕ್ಕೊಂದು ವೈಜ್ಞಾನಿಕ ವ್ಯಾಖ್ಯೆ ಸಿಕ್ಕಿದೆ. ಈ ಪ್ರಕಾರ ಯುರೇನಸ್, ನೆಪ್ಚೂನ್‌ಗಳೆರಡೂ ಸಂಜೆಯಲ್ಲೇ ಕಾಣುತ್ತವೆ. ಆದರೂ ಬರಿಗಣ್ಣಿಗೆ ಕಾಣದ ಇವುಗಳನ್ನು ನಾವೇನು ಗಣನೆಗೆ ತಂದುಕೊಳ್ಳಬೇಕಾಗಿಲ್ಲ.

ಯುರೇನಸ್ ಗ್ರಹವನ್ನಾದರೂ ನೋಡಲೇಬೇಕು ಎಂದು ದೂರದರ್ಶಕ ಸಜ್ಜು ಮಾಡಿಟ್ಟುಕೊಂಡವರಿಗೆ ೪ರ ರಾತ್ರಿ – ೫ರ ಬೆಳಗಿನ ಜಾವದವರೆಗೆ ಒಳ್ಳೆಯ ಅವಕಾಶವಿದೆ. ಚಂದ್ರನ ಆಸುಪಾಸನ್ನು ಗಮನಿಸುತ್ತಿದ್ದರೆ ಸಾಕು. ಜೋಡಿ ಎಂದು ಭ್ರಮಿಸಬಹುದಾದ ಎರಡು ಚುಕ್ಕೆಗಳು ಬೆಳಗಿನ ಜಾವ ಚಂದ್ರದ ಸಮೀಪಕ್ಕೆ ಸರಿಯುವುದನ್ನು ಅಥವಾ ಚಂದ್ರ ಅವುಗಳ ಸಮೀಪಕ್ಕೆ ಸರಿಯುವುದನ್ನು ಕಾಣಬಹುದು. ಇವುಗಳಲ್ಲೊಂದು ಲ್ಯಾಂಬ್ಡಾ ಅಕ್ವೇರಿಯಸ್–ಶತಭಿಷ. ಇನ್ನೊಂದು ಯುರೇನಸ್. ಚಂದ್ರ ಇದನ್ನು ಮರೆ ಮಾಡುವ ಆಚ್ಛಾದನೆಯ ನೋಟ ನಮಗಿಲ್ಲ.

ಗ್ರಹಗಳಿಲ್ಲದ ಕೊರತೆಯನ್ನು ತುಂಬಲು ಬುಧ ಪ್ರಯತ್ನಿಸಲಿದೆ. ಇದುವರೆಗೂ ಬೆಳಗಿನ ಜಾವ ಕಾಣಿಸುತ್ತಿದ್ದ ಅದು ಈಗ ಸಂಜೆಯ ಆಕಾಶಕ್ಕೆ ಕಾಲಿಟ್ಟಿದೆ. ಆದರೆ ಸಂಜೆಗೆಂಪಿನಲ್ಲಿ ಅಡಗುವ ಅದನ್ನು ಪತ್ತೆ ಮಾಡುವುದು ಸವಾಲೇ ಸರಿ. ಗುರುಗ್ರಹದ ಜೊತೆಗೂಡಿ 'ನಾವಿಲ್ಲಿದ್ದೇವೆ' ಎಂದು ಘೋಷಿಸಿದರೂ ಹುಡುಕುವುದು ಕಷ್ಟ. ೧೭ರಂದು ಗರಿಷ್ಠ ಎತ್ತರದಲ್ಲಿ ಕಂಡಾಗ ಒಂದು ಅವಕಾಶ ದೊರಕುತ್ತದೆ. ೨೪ರ ಸಂಜೆ ಸೂರ್ಯಾಸ್ತವಾದ ತಕ್ಷಣವೇ ಗಮನಿಸಿದರೆ ಬಾಲಚಂದ್ರನೂ ಇವುಗಳ ಜೊತೆಗೂಡುವುದರಿಂದ ಪತ್ತೆ ಯಶಸ್ವಿಯಾಗಬಹುದು.

*೨೪ರ ಸಂಜೆ ಪಶ್ಚಿಮ ದಿಕ್ಕಿನ ನೋಟ. ಬಾಲಚಂದ್ರನ ಪಕ್ಕದ ಚುಕ್ಕೆಯೇ ಜ್ಯೇಷ್ಠಾ. ಕೆಳಗಿನ ಎರಡು ಪ್ರಕಾಶಮಾನ ಚುಕ್ಕೆಗಳು ಬುಧ ಮತ್ತು ಗುರು.*

ಬೆಳಗಿನ ಆಕಾಶದಲ್ಲಿ ಪೂರ್ವದಲ್ಲಿ ವಿರಾಜಮಾನವಾಗಿದ್ದ ಬೆಳ್ಳಿ ಕೂಡ ದಿಗಂತದ ಅಂಚಿಗೆ ಸರಿದು ಅಲ್ಲಿಯೂ ಕೊರತೆಯನ್ನು ತಂದಿಟ್ಟಿದೆ. ಸೂರ್ಯೋದಯಕ್ಕೆ ಸ್ವಲ್ಪ ಮುಂಚೆ ಕಾಣುವ ಇದು ಅರುಣರಾಗದಲ್ಲಿ ಕಾಣದಂತಾಗಿಬಿಡುತ್ತದೆ. ಮುಂದಿನ ತಿಂಗಳಿಂದ ಸಂಜೆಯ ಆಕಾಶಕ್ಕೆ ಬರುವ ಸನ್ನಾಹದಲ್ಲಿದೆ. ಇನ್ನೊಂದು ಗ್ರಹ ಮಂಗಳ ಸಂಜೆಯಿಂದ ಮುಂಜಾವಿಗೆ ಜಾರಲಿದೆ. ಒಟ್ಟಿನಲ್ಲಿ ಇವೆರಡೂ ಸೂರ್ಯನೊಡನೇ ಉದಯಿಸಿ ಕಂತುತ್ತವೆ. ನಮಗಂತೂ ನೋಡಲು ಸಿಗುವುದಿಲ್ಲ.

ಶನಿಗ್ರಹ ಮಾತ್ರ ಈ ಗುಂಪುಗಾರಿಕೆಯಿಂದ ದೂರ ಉಳಿದು ಬೆಳಗಿನ ಜಾವ ಸ್ಫುಟವಾಗಿ ಕಾಣುತ್ತದೆ. ಸಂಜೆಯ ಆಕಾಶ ಗ್ರಹಗಳಿಲ್ಲದೇ ಭಣಗುಟ್ಟಿದರೂ ಆಕಾಶಗಂಗೆಯ ಸೌಂದರ್ಯ ಈ ಕೊರತೆಯನ್ನು ನೀಗಿಸುತ್ತದೆ. ವೃಶ್ಚಿಕ-ಧನು ರಾಶಿಗಳ ಭಾಗದಲ್ಲಿ ಹರಡಿಕೊಂಡಿರುವ ಭಾಗವಂತೂ ಅತ್ಯಂತ ಸುಂದರವಾದದ್ದು. ದೂರದರ್ಶಕ ದುರ್ಬೀನುಗಳ ಮೂಲಕ ನೋಡಿದಿರಾದರೆ ನೆಬ್ಯುಲಗಳು, ನಕ್ಷತ್ರಗುಚ್ಛಗಳು ಕಾಣುತ್ತವೆ. ಈ ಗಂಗೆ ಮುಂದೆ ಉತ್ತರಕ್ಕೆ ಹರಿಯುತ್ತದೆ. ಸಿಗ್ನಸ್ (ರಾಜಹಂಸ), ಲೈರಾ (ವೀಣಾ) ಮತ್ತು ಅಕ್ವಿಲಾ (ಗರುಡ) ಪುಂಜಗಳ ನಡುವೆ ಹಾಯುತ್ತದೆ. ಮುಂದೆ ಕುಂತಿ (ಕಾಸಿಯೋಪಿಯಾ)ಯ ವರೆಗೂ ಸಾಗುತ್ತದೆ.




ಪೂರ್ವದ ಅಂಚಿನಲ್ಲಿ ಕಾಣುವ ತ್ರಿಕೋಣವೇ ಮೇಷರಾಶಿ. ಪೆಗಸಸ್ (ನಕುಲ) ಚೌಕದಿಂದ ಅದನ್ನು ಗುರುತಿಸಬಹುದು. ಹುಣ್ಣಿಮೆಯಂದು ಚಂದ್ರ ಈ ತ್ರಿಕೋಣದ ನೇರಕ್ಕೆ ಇರುತ್ತದೆ. ಅಲ್ಲಿಯ ಪ್ರಖರ ನಕ್ಷತ್ರ ಅಶ್ವಿನಿ. ಆದ್ದರಿಂದ ಈ ತಿಂಗಳ ಹೆಸರು ಆಶ್ವಯುಜ. ಈ ತಿಂಗಳಲ್ಲಿ ಉಲ್ಕೆಗಳು ಹೆಚ್ಚು. ಹ್ಯಾಲೀ ಧೂಮಕೇತುವಿನ ತುಣುಕುಗಳು ಭೂಮಿಯತ್ತ ಧಾವಿಸುವುದೇ ಇದಕ್ಕೆ ಕಾರಣ. ೨೧ರಂದು ಗರಿಷ್ಠ ಮುಟ್ಟುವ ಈ ಉಲ್ಕಾವೃಷ್ಟಿಗೆ ಓರಿಯನಿಡ್ಸ್ ಎಂದೇ ಹೆಸರು. ಒರ್ರೈಯನ್ (ಮಹಾವ್ಯಾಧ) ಪುಂಜದಿಂದ ಉಲ್ಕೆಗಳು ಹೊರಟಂತೆ ಕಾಣುತ್ತವೆ.

## ಖಗೋಳ ದಿನಚರಿ

ಅಕ್ಟೋಬರ್ ೫ ಯುರೇನಸ್ ಚಂದ್ರನಿಂದ ಅರ್ಧಡಿಗ್ರಿ ಅಂತರದಲ್ಲಿ* (ಆಚ್ಛಾದನೆ ಕಾಣುವುದಿಲ್ಲ)
೬ ಚಂದ್ರ-ಭೂಮಿ ದೂರ ಕನಿಷ್ಠ
೭ ೦೮:೪೩ಕ್ಕೆ ಹುಣ್ಣಿಮೆ
೧೪ ಚಾಂದ್ರಮಾಸದ ಕೊನೆಯ ಪಾದ
೧೬ ಚಂದ್ರ-ಶನಿ ನಡುವೆ ೨ಡಿಗ್ರಿ ಅಂತರ*
೧೭ ಬುಧಗ್ರಹ ಗರಿಷ್ಠ ಎತ್ತರದಲ್ಲಿ*
೧೯ ಚಂದ್ರ-ಭೂಮಿ ದೂರ ಗರಿಷ್ಠ
೨೧ ಓರಿಯನಿಡ್ಸ್ ಉಲ್ಕಾವೃಷ್ಟಿ
೨೨ ಅಮಾವಾಸ್ಯೆ ೧೦:೪೪ಕ್ಕೆ
ಚಂದ್ರನ ಪಕ್ಕ ಶುಕ್ರ-ಮಂಗಳ (ಕಾಣುವುದಿಲ್ಲ)
೨೩ ಮಂಗಳ ಗ್ರಹದ ಯುತಿ
೨೪ ಚಂದ್ರ, ಬುಧ, ಗುರು ಒಟ್ಟಾಗಿ ಕಾಣುವುವು*
೨೫ ಮಂಗಳ-ಶುಕ್ರ ಜೋಡಿ (ಕಾಣುವುದಿಲ್ಲ)
ಬುಧ-ಗುರು ಜೋಡಿ*
ಚಂದ್ರ-ಜ್ಯೇಷ್ಠಾ ಜೋಡಿ*
೨೮ ಬುಧಗ್ರಹದ ಹಿನ್ನಡೆ ಆರಂಭ
೨೯ ಚಾಂದ್ರಮಾಸದ ಮೊದಲ ಪಾದ
ನವೆಂಬರ್ ೧ ಯುರೇನಸ್ ಆಚ್ಛಾದನೆ
೫ ಹುಣ್ಣಿಮೆ

* ಛಾಯಾಗ್ರಹಣಕ್ಕೆ ಉತ್ತಮ ಅವಕಾಶ

ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

# ಸ್ವಾತಂತ್ರ್ಯೋತ್ತರ ಕಾಲದ ದಲಿತರ ಸ್ಥಿತಿಗತಿ

ವಿಜಯ ಆರ್. ಕಾಂಬಳೆ

ಪುರೋಹಿತಶಾಹಿ ವರ್ಗದ ದಬ್ಬಾಳಿಕೆಯಿಂದಾಗಿ ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ಶೈಕ್ಷಣಿಕವಾಗಿ ನೂರು ಅಡಿ ದೂರ ಅಂತರದಲ್ಲಿದ್ದ ದಲಿತ ಜನಾಂಗ ಭಾರತ ಸ್ವಾತಂತ್ರ್ಯಾನಂತರ ಸ್ವಲ್ಪದರಮಟ್ಟಿಗೆ ಕಟ್ಟಿದ ಉಸಿರು ಬಿಡುವಂತಾಗಿತ್ತು. ತಮ್ಮ ವರ್ಗವೊಂದನ್ನು ಬಿಟ್ಟು ಉಳಿದೆಲ್ಲ ಭಾರತದ ಜನಾಂಗಕ್ಕೆ ಮೇಲಿನ ಯಾವ ಸೌಲಭ್ಯಗಳೂ ದೊರೆಯಬಾರದೆಂಬ ದೃಷ್ಟಿಯಿಂದ ಅದನ್ನು ವ್ಯವಸ್ಥಿತ ರೀತಿಯಲ್ಲಿ ಪುರೋಹಿತ ವರ್ಗ ನೋಡಿಕೊಳ್ಳುತ್ತಿತ್ತು. ಅವರಲ್ಲಿ ಯಾವ ರೀತಿಯ ಕ್ರೂರ ರಾಕ್ಷಸಿ ಪ್ರವೃತ್ತಿ ಬೆಳೆದಿತ್ತೆಂದರೆ, ನಿಜತತ್ವಜ್ಞಾನ, ನಿಜಸಾಹಿತ್ಯದ ತಿಳುವಳಿಕೆಯು ತನ್ನೊಬ್ಬನಿಗೆ ಮಾತ್ರ ಗೊತ್ತಿರಬೇಕೆಂಬುದು.

ಜಾತೀಯತೆಯಾಗಲಿ, ದಲಿತರ ಇನ್ನಿತರ ಕ್ಷೇತ್ರಗಳಲ್ಲಿ ಅಸಮಾನತೆಯಾಗಲಿ, ಬಹುಕಾಲದಿಂದಲೂ ಭಾರತೀಯ ಸಮಾಜದ ಪ್ರತಿಯೊಂದು ಕ್ಷೇತ್ರದಲ್ಲಿ ಹಾಗೆಯೇ ಉಳಿದುಕೊಂಡುಬಂದದ್ದನ್ನು ಕಾಣಬಹುದು. ರಾಮಾಯಣ, ಮಹಾಭಾರತ, ಗೀತೆ ಮುಂತಾದ ಹಿಂದು ಧಾರ್ಮಿಕ ಗ್ರಂಥಗಳಲ್ಲಿಯೂ ಸಹ ಶೋಷಣೆ ಬೆರೆತಿರುವದು ನಮ್ಮೆಲ್ಲರ ಗಮನಕ್ಕೆ ಬಂದ ವಿಷಯವೇ ಆಗಿದೆ. ಮಾನವತಾಪರ ಸಂಸ್ಕೃತಿಯ ನೇತಾರರಾದ, ಚಿಂತಕರಾದ ಮಹಾತ್ಮಾ ಜೋತಿಬಾ ಫುಲೆ, ಶಾಹು ಮಹಾರಾಜ್, ಕಬೀರ್, ಲೋಹಿಯಾ, ರಾಮಸ್ವಾಮಿ ಪೆರಿಯಾರ್, ಡಾ|| ಅಂಬೇಡ್ಕರ್ ಮುಂತಾದ ಮಹಾನ್ ಚಿಂತಕರು ಕೂಡ ಬದುಕಿನ ಅಸಮಾನತೆಗೆ, ಜಾತೀಯತೆ ಮೂಲದ ಅವಮಾನಕ್ಕ ತುತ್ತಾಗಿದ್ದಾರೆ. ಕಾರಣವಾಗಿಯೇ ತಮಗಾದ ಅವಮಾನ, ಶೋಷಣೆ, ಕಷ್ಟ-ನಷ್ಟ ತಮ್ಮ ಕೆಳವರ್ಗದ ಜನಾಂಗಕ್ಕೆ ಆಗಬಾರದೆಂದು ಅರಿತು ಅವರಿಗೆ ಸಮಾನತೆಯ ಹಕ್ಕುಗಳನ್ನು, ಶೋಷಣಾರಹಿತ ಬದುಕನ್ನು ಪೂರೈಸಿಕೊಡುವಲ್ಲಿ, ಅವರನ್ನು ಸಮಾನತೆಯ ಹಂತಕ್ಕೆ ತರಲು ಹಗಲಿರುಳು ಶ್ರಮಿಸಿದವರಾಗಿದ್ದಾರೆ.

ಆರ್ಥಿಕ ಪರಿಸ್ಥಿತಿಯಿಂದ ಈ ಜನಾಂಗ ಅತಿ ಕೆಳದರ್ಜೆಯ ಸ್ಥಿತಿಯಲ್ಲಿದ್ದುದರಿಂದ ಬದುಕಲು ದುಃಸ್ಥಿತಿಯಾಗಿತ್ತು. ಮೇಲ್ವರ್ಗದವರ ಗುಲಾಮಗಿರಿಯಲ್ಲಿಯೇ ಜೀವನ ನೂಕುವ ಗಳಿಗೆಯಲ್ಲಿದ್ದರು. ಇದಕ್ಕೆ ಕಾರಣ ದಲಿತರಲ್ಲಿಯ ದುರ್ಬಲ ಆರ್ಥಿಕ ಪರಿಸ್ಥಿತಿ; ಮೇಲ್ವರ್ಗದವರಲ್ಲಿ ಸಂಗ್ರಹಣೆಯಾದ ಅಪಾರ ಸಂಪತ್ತು. ಈ ಎಲ್ಲ ಕಾರಣಗಳಿಂದ ದಲಿತರು ಕತ್ತಲೆಯ ಜೀವನವನ್ನು ಕಳೆಯುವಂಥ ಪರಿಸ್ಥಿತಿಯಲ್ಲಿದ್ದರು.

ಇದೆಲ್ಲವನ್ನು ಅರಿತ ಈ ಮೇಲೆ ಹೆಸರಿಸಿದ ಮಹಾನ್ ಮಾನವತಾವಾದಿಗಳು ದಲಿತರ ಉದ್ಧಾರಕ್ಕಾಗಿ ಸಾಕಷ್ಟು ಶ್ರಮಿಸಿದರು. ದಲಿತರು ಕಷ್ಟ ಸಂಕೋಲೆಗಳಿಂದ ಹೊರಬರಬೇಕಾದರೆ, ಅವರು ಮೇಲ್ವರ್ಗದವರ ಗುಲಾಮಗಿರಿಯಿಂದ ಮುಕ್ತವಾಗಬೇಕಾದರೆ, ಅವರಿಗೆ ಸಮಾಜದಲ್ಲಿ ಸ್ವತಂತ್ರವಾಗಿ ಬಾಳಲು ಅವರದೇ ಆದಂಥ ಪ್ರಾತಿನಿಧ್ಯ ಕಲ್ಪಿಸಿಕೊಡುವದು ಬಹಳ ಮುಖ್ಯವೆಂದು ಮನಗಂಡರು. ಅದಕ್ಕಾಗಿಯೇ ರಾಜಕೀಯ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಹೀಗೆ ಹಲವಾರು ರಂಗಗಳಲ್ಲಿ ಮೀಸಲಾತಿಯನ್ನು ಸೃಷ್ಟಿಸಿದರು. ಈ ಎಲ್ಲ ರಂಗಗಳಿಂದ ದೊರೆಯಬೇಕಾದ ಸವಲತ್ತುಗಳು ಸಮಾಜದಲ್ಲಿ ಯಾರು ದಲಿತರೆಂದು ಬಹಿಷ್ಕೃತರಾಗಿದ್ದರೋ ಅವರೆಲ್ಲರಿಗೂ ಅನ್ವಯವಾಗುವಂತೆ ಡಾ|| ಅಂಬೇಡ್ಕರ್ ಮತ್ತು ಇತರರು ರಾಜ್ಯಾಂಗ ರಚನೆಯ ವೇಳೆಯಲ್ಲಿ ಜಾರಿಗೆ ಬರುವಂತೆ ಮಾಡಿದರು. ಈ ಮೀಸಲಾತಿಯ ಅವಧಿಯು ೧೦ ವರ್ಷಗಳ ಅವಧಿಯವರೆಗೆ ಮುಂದುವರೆಯಲಿ ಎಂದು ಆವಾಗಲೇ ಜಾರಿಯಾದದ್ದು; ನಂತರ ಅದು ೧೦-೧೦ ವರ್ಷಗಳಂತೆ ಮತ್ತೆ ಮುಂದುವರೆಯಿತು. ೧೦ ವರ್ಷಗಳ ಅವಧಿಯಲ್ಲಿ ದಲಿತರಿಗೆ ಕೊಟ್ಟ ಮೀಸಲಾತಿಯು ಸಾಲಲಾರದು; ಶತಮಾನಗಳಿಂದ ಶೋಷಣೆಗೊಳಗಾದ ಅವರಿಗೆ ಇನ್ನೂ ಮೀಸಲಾತಿಯ ಜರೂರತೆ ಇರುವದನ್ನು ಗಮನದಲ್ಲಿಟ್ಟುಕೊಂಡು ಮೀಸಲಾತಿಯನ್ನು ಮುಂದುವರೆಸಿದರು. ಅದು ಇನ್ನೂ ಜಾರಿಯಲ್ಲಿದೆ.

೧೦ ವರ್ಷಗಳು ಆದ ನಂತರವೇ ಮೀಸಲಾತಿಯನ್ನು ಮೊಟಕುಗೊಳಿಸುವಲ್ಲಿ ಹೊಂಚುಹಾಕಿದ ಕೆಲವು ದುಷ್ಟ ರಾಜಕೀಯ ಶಕ್ತಿಗಳು, ಇಡೀ ಭಾರತದಲ್ಲಿ ಶೇಕಡಾ ೧೫ರಷ್ಟಿದ್ದ ದಲಿತರನ್ನು ಈ ವಿಷಯದಲ್ಲಿ ವಿರೋಧಿಸಿದರೆ ತಮಗೆ ಉಳಿಗಾಲವಿಲ್ಲವೆಂದು ಅರಿತು ಮೀಸಲಾತಿ ವಿರೋಧಿಸುವುದನ್ನು ಆವಾಗಲೇ ಕೈಬಿಟ್ಟಿದ್ದರು. ಹೀಗಾಗಿ ದಲಿತರು ಬಲಿಷ್ಠರಾಗಿ, ಸಶಕ್ತರಾಗಿ ಸಮಾಜದಲ್ಲಿ ಮೀಸಲಾತಿಯ ಅವಕಾಶ ಬಳಕೆಯಲ್ಲಿದ್ದು ೫೦ ವರ್ಷಗಳಾದರೂ ಹಳ್ಳಿಗಳಲ್ಲಿ ಬದುಕುವ ದಲಿತ ಜನಾಂಗವನ್ನು ಮೀಸಲಾತಿಯಡಿಯ ಸವಲತ್ತುಗಳು ಸಮರ್ಪಕವಾಗಿ ಮುಟ್ಟಿಲ್ಲ. ಇದರಿಂದಾಗಿ ಹಳ್ಳಿಗಾಡಿನ ದಲಿತರಲ್ಲಿ ಸಾಕಷ್ಟು ಸಮಸ್ಯೆಗಳು ತುಂಬಿತುಳುಕಾಡುತ್ತಿವೆ. ಬಡತನ, ಮೂಢನಂಬಿಕೆ, ಅನಕ್ಷರತೆ, ನಿರುದ್ಯೋಗಗಳಿಂದಾಗಿ ಸರ್ಕಾರವು ತಮಗಾಗಿ ಸೃಷ್ಟಿಸಿರುವ ಸವಲತ್ತುಗಳ ಬಗೆಗೆ ತಿಳಿದುಕೊಳ್ಳುವಲ್ಲಿ ಅವರಿಗೆ ತಿಳುವಳಿಕೆ ಇಲ್ಲ. ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ ಕಡ್ಡಾಯ ಶಿಕ್ಷಣದ ಬಗೆಗೆ ಮಾಹಿತಿ ಇಲ್ಲದೇ ಇರುವುದು ಮತ್ತು ಈ ಬಗೆಯ ಸಾಕಷ್ಟು ಕಾರಣಗಳಿಂದಾಗಿ ಹಳ್ಳಿಯ ದಲಿತರ ಸ್ಥಿತಿ ಇನ್ನೂ ಸುಧಾರಣೆಯಾಗಿಲ್ಲ. ಇಂಥ ಸಮಸ್ಯೆಗಳನ್ನು ನೀಗಿಸಬೇಕಾದರೆ ಸರ್ಕಾರವು ಸಾಕಷ್ಟು ಬಂಡವಾಳ ಹಾಗೂ ನಿಯತ್ತಿನ ಶ್ರಮವನ್ನು ಅಲ್ಲಿ ಬಳಸಬೇಕಾಗಿದೆ.



ಬಾಳಬೇಕಾದರೆ ಮೀಸಲಾತಿಯ ಅವಶ್ಯಕತೆ ಇನ್ನೂ ಇದೆ.

ವಿಶ್ವ ಹಣಕಾಸು ಸಂಸ್ಥೆಗಳು ಭಾರತದಲ್ಲಿನ ಬಡತನ, ಅನಕ್ಷರತೆಯನ್ನು ಹೋಗಲಾಡಿಸುವ ಸಲುವಾಗಿ ಕೋಟಿಗಟ್ಟಲೆ ಹಣವನ್ನು ವ್ಯಯಿಸುತ್ತಿವೆ. ಜೊತೆಗೆ, ಇಲ್ಲಿನ ಆರೋಗ್ಯ, ಪ್ರಾದೇಶಿಕ ಬೆಳವಣಿಗೆಗಳನ್ನು ಸುಧಾರಿಸಲು ಅವಿರತ ಪ್ರಯತ್ನಗಳನ್ನೂ ಮಾಡುತ್ತಿವೆ. ಆದರೆ ತಲುಪಬೇಕಾದ ಅವಕಾಶಗಳು ಅಲಕ್ಷಿತ ಸಮುದಾಯಗಳಿಗೆ ಸರಿಯಾಗಿ ತಲುಪುತ್ತಿಲ್ಲ. ನಮ್ಮ ಯೋಜನೆಗಳ ಕರಡು ಪ್ರತಿಯ ಹೇಳಿಕೆಗಳು ಸಾರ್ವಜನಿಕವಾಗಿ ದಲಿತರ ಮೇಲೆ ಹಾಯ್ದುಹೋಗುತ್ತವೆಯೇ ಹೊರತು, ಅವರ ಆಗಬೇಕಾಗಿದ್ದ ಏಳ್ಗೆಗೆ ಅವು ಬಂದು ಮುಟ್ಟುವುದಿಲ್ಲ. ಕಾರಣ ದಲಿತ ಸಮುದಾಯಗಳು ರಾಜಕೀಯ ಅಧಿಕಾರವನ್ನು ಪಡೆಯುವುದು ಅತಿ ಅವಶ್ಯಕವೆಂದು ಅರಿತು ಈ ನಿಟ್ಟಿನಲ್ಲಿ ಹೋರಾಟ ಮುಂದುವರಿಯಬೇಕಾಗಿದೆ.



## ಬರಲೊಂದು ಬದುಕು

ಗೆಲುದನಿಯು ಬರಲೊಂದು ನುಡಿಯೊಂದ ತರಲಿ
ಬದುಕಿಗೆ ಬಲಬರಲಿ ಬಲಕೊಂದು ಛಲವಿರಲಿ
ಸಾಧಿಸುವ ಬದುಕೊಂದು ಸೋತು ನಿಂತಿರಲು
ಒಡಲಾಳ ದನಿವಡೆದು ಅಡಗಿ ಹುದುಗಿರಲು
ಗೆಲುವು ಬದುಕಾಗಿ ಬದುಕು ಗೆಲುವಾಗಿ
ಬರಲಿ ಬದುಕೊಂದು ಹೊಸ ಬೆಳಕಾಗಿ
ಅರಳು ಹೂಮೊಗ್ಗು ಬಾಡಿ ಉದುರುತಿರೆ
ಕಾಯ ಎಲೆ ಬಿಟ್ಟ ಅಧರಧುರ ದಹಿಸುತಿರೆ
ಮಗು ಅಧರ ಹೂವಾಗಿ ಎದೆಹಾಲ ಜೇನಾಗಿ
ಬರಲಿ ಜೀವನ ಒಂದು ಮಧುವನವಾಗಿ
ಸಗ್ಗದಾ ಸಿರಿಬರಲಿ ಅಗ್ಗದಾ ನಗುತರಲಿ
ನುಗ್ಗಿ ಹರಿಯಲಿ ಹೊಳೆಹಳ್ಳಕೆರೆಬಾವಿ
ಸದ್ದು ಅಡಗುವ ಮುನ್ನ ಮುಗ್ಧ ನಗುಬರಲಿ
ಹಸಿಯಾಗಿ ಹಸಿರಾಗಿ ಬದುಕೊಂದು ಹಸನಾಗಿ

ವಿವೇಕಾನಂದ ಎಸ್. ದೇವಾಂಗಮಠ
ರಜಂಗಳ್ಳ ಪೇಟೆ, ಗುಳೇದಗುಡ್ಡ - ೫೮೭ ೨೦೩,
ಬಾಗಲಕೋಟೆ ಜಿಲ್ಲೆ

ದೇಶದಲ್ಲಿ ಆಳವಾಗಿ ಬೇರುಬಿಟ್ಟಿದ್ದ ಅಸ್ಪೃಶ್ಯತೆಯನ್ನು ಕಿತ್ತೊಗೆದು ಜಾತಿಭೇದವನ್ನು ನಿರ್ಮೂಲನೆಗೊಳಿಸಿ, ಎಲ್ಲ ರಂಗಗಳಲ್ಲಿಯೂ ಸಮಾನತೆಯನ್ನು ತರಲೋಸುಗ ರಾಜಕೀಯದಲ್ಲಿ ಮೀಸಲಾತಿಯ ಅವಶ್ಯಕತೆಯನ್ನು ಅರಿತು, ಅಲ್ಲಿಯೂ ಮೀಸಲಾತಿಯನ್ನು ಜಾರಿಗೊಳಿಸಿದರು. ಮೀಸಲಾತಿಯ ಮುಖಾಂತರ ರಾಜ್ಯ ವಿಧಾನಸಭೆಗಳಿಗೆ ಮತ್ತು ಕೇಂದ್ರ ಲೋಕಸಭೆಗೆ ದಲಿತ ಜನಾಂಗದ ಪ್ರತಿನಿಧಿಗಳನ್ನು ಆಯ್ಕೆ ಮಾಡುವ ಸವಲತ್ತನ್ನು ಒದಗಿಸಿಕೊಟ್ಟರು. ಆದರೆ ದುರಂತವೆಂದರೆ ಪ್ರಾರಂಭದಿಂದಲೂ ದಲಿತ ಅಭ್ಯರ್ಥಿಗಳು ಆಯಾ ಪಕ್ಷದ ಮುಖಂಡರ ಮಾರ್ಗದರ್ಶನದಲ್ಲಿಯೇ ತಮ್ಮೆಲ್ಲ ನಿಷ್ಠೆ, ಪ್ರಾಮಾಣಿಕತೆಗಳನ್ನು ಒತ್ತೆಯಿಟ್ಟು ಬೆಳೆದಿರುತ್ತಾರೆ. ತಮ್ಮ ಜವಾಬ್ದಾರಿ, ತಮ್ಮ ಕರ್ತವ್ಯ, ತಾವು ಯಾರಿಗಾಗಿ ಶ್ರಮಿಸಬೇಕಾಗಿದೆ ಎಂಬುದನ್ನೇ ಮರೆತಿರುತ್ತಾರೆ. ತಮ್ಮ ಜನಾಂಗದ ಬಗ್ಗೆ ಅವರಿಗೆ ಕಳಕಳಿಯೇ ಇರುವುದಿಲ್ಲ. ಆಯಾ ರಾಜಕೀಯ ಪಕ್ಷಗಳ ನಾಯಕರು ಮೇಲ್ವರ್ಗದವರೇ ಇರುವುದರಿಂದ ಅವರು ಹೇಳಿದಂತೆ ಕೇಳಿಕೊಂಡು ಪಕ್ಷದಲ್ಲಿ ಅಥವಾ ಸರ್ಕಾರದಲ್ಲಿ ಮಂತ್ರಿಸ್ಥಾನದ ಮುಲಾಜಿಗಾಗಿ ಕಾಯುತ್ತಿರುತ್ತಾರೆ.

ಈ ಕಾರಣಗಳಿಂದ ರಾಷ್ಟ್ರಮಾನ್ಯತೆ ಪಡೆದಿರುವ ರಾಜಕೀಯ ಪಕ್ಷಗಳು ಹಾಗೂ ಪ್ರಾದೇಶಿಕ ಪಕ್ಷಗಳು ದಲಿತ ಜನಾಂಗದ ಸದಸ್ಯರು ತಮ್ಮ ಪಕ್ಷಕ್ಕೆ ಸೇರುವಂತೆ ಆಸೆ ಹಚ್ಚಿ ಅವರನ್ನು ಪ್ರದರ್ಶಕ ವಸ್ತುಗಳನ್ನಾಗಿ ವ್ಯವಸ್ಥಿತ ರೀತಿಯಲ್ಲಿ ಬಳಸಿಕೊಳ್ಳುತ್ತಾರೆ. ಅದರಂತೆ ಇವರೂ ಸಹ ತಮ್ಮ ಆಸಕ್ತಿಯೆಲ್ಲವನ್ನು ಸಂಪೂರ್ಣವಾಗಿ ತಮ್ಮ ವೈಯಕ್ತಿಕ ಸುಧಾರಣೆ ಮತ್ತು ತಮ್ಮ ವಂಶದ ಸುಧಾರಣೆಯನ್ನು ಮಾಡುವುದರತ್ತ ಗಮನವನ್ನು ಹರಿಸಿರುತ್ತಾರೆ. ಸ್ಪರ್ಧಿಸುವಾಗ ಮೀಸಲಾತಿಯ ಅವಕಾಶಗಳನ್ನು ಸರಿಯಾಗಿ ಬಳಸಿಕೊಂಡು ಸಂಪೂರ್ಣವಾಗಿ ತಮ್ಮ ಬೆನ್ನೆಲುಬಾಗಿ ನಿಲ್ಲುತ್ತೇನೆ ಎಂಬ ಸಾಚಾತನದ ಮಾತುಗಳಿಂದ ಅವರ ಮನವೊಲಿಸಿ, ಮಂತ್ರಿ ಪದವಿಗೇರುತ್ತಾರೆ. ನಂತರ ನಾಮಮಾತ್ರಕ್ಕೆ ಆಗೊಮ್ಮೆ-ಈಗೊಮ್ಮೆ ಎಂಬಂತೆ ಮುಖತೋರಿಸುತ್ತ ಮರೆಯಾಗಿಬಿಡುತ್ತಾರೆ.

''ಈ ಮುಗ್ಧ ಜನರ ಅಜ್ಞಾನ ಇಂದು ಶೋಷಣೆಗೊಳಗಾಗಿದೆಯಲ್ಲದೆ, ಈ ರೀತಿ ಶೋಷಣೆ ಮಾಡುವವರು ಹೆಚ್ಚಿನ ಪ್ರಮಾಣದಲ್ಲಿ ಸವರ್ಣೀಯ ಹಿಂದೂಗಳಾಗಿರದೆ ಯಾರು ತಮ್ಮಷ್ಟಕ್ಕೆ ತಾವು ದಲಿತ ಜನಾಂಗದ ನಾಯಕರೆಂದು ಭಾವಿಸಿಕೊಂಡಿರುತ್ತಾರೋ ಅಂಥ ರಾಜಕೀಯ ತಲೆಹಿಡುಕರಾಗಿದ್ದಾರೆ.'' ಪಕ್ಷಗಳಲ್ಲಿ ಬಲಿತು, ಮೇಲ್ವರ್ಗದವರ ಗುಲಾಮಗಿರಿ ವಿರೋಧಿಸಿ ದಲಿತರ ಪರವಾಗಿ ನಿಂತು ದುಡಿಯುತ್ತಿದ್ದರೆ ಅಂಥವರನ್ನು ತಮ್ಮ ಪಕ್ಷಗಳಿಂದಲೇ ಜಾಲಾಡಿಸಿಬಿಡುವ ಹುನ್ನಾರ ಮಾಡುತ್ತಾರೆ. ಇಂಥ ಕುತಂತ್ರಗಳು ಮೊದಲಿನಿಂದಲೂ ನಡೆಯುತ್ತ ಬಂದಿವೆ. ಈಗಂತೂ ಅಂಥ ನಿದರ್ಶನಗಳು ಸಾಕಷ್ಟಿವೆ. ಈ ಕಾರಣದಿಂದಾಗಿ ಭಾರತವು ಸ್ವಾತಂತ್ರ್ಯ ಪಡೆದು ೫೦ ವರ್ಷಗಳು ಗತಿಸಿದರೂ ಅಲ್ಲಿಂದ ಇಲ್ಲಿಯತನಕ ಮೀಸಲಾತಿಯನ್ನು ಪಡೆಯುತ್ತಬಂದ ದಲಿತ ಜನಾಂಗವೆಲ್ಲ ಇನ್ನೂ ಸುಧಾರಣೆಯ ಹಂತ ತಲುಪದಿರುವುದಕ್ಕೆ ಇಂಥ ಸಾಕಷ್ಟು ಕಾರಣಗಳೇ ತೊಡಕಾಗಿವೆ.

ಹಾಗೆಯೇ ರಾಜಕೀಯ ಪಕ್ಷಗಳು ಅಥವಾ ಅದರಲ್ಲಿಯ ಮೇಲ್ವರ್ಗದ ಧೂರ್ತ ನಾಯಕರು ಜನಾಂಗ-ಜನಾಂಗ, ಜಾತಿ-ಜಾತಿಗಳಲ್ಲಿಯೇ ಏನಾದರೊಂದು ಆಶೆ-ಆಮಿಷ ಮತ್ತು ಸಮಸ್ಯೆಗಳನ್ನು ಸೃಷ್ಟಿಸಿ ಅವರವರಲ್ಲಿಯೇ ಒಡಕು ಹುಟ್ಟಿಸುವಂಥ ಹುನ್ನಾರಗಳನ್ನು ಹೂಡುತ್ತಾರೆ. ಇವು ಕೂಡ ಮೊದಲಿನಿಂದಲೂ ಪಾರಂಪರ್ಯವಾಗಿ ನಡೆಯುತ್ತಾ ಬಂದಿವೆ; ಇವು ಈಗಲೂ ಇವೆ. ಇಲ್ಲದಿದ್ದರೆ ತಾವು ಬೆಳೆಯಲಾರೆವೆಂಬ ಅನುಮಾನ-ಆತಂಕ ಅವರಿಗಿದೆ.

ಹಲವಾರು ವರ್ಷಗಳಿಂದ ಮೀಸಲಾತಿಯು ಅನೇಕ ಮಗ್ಗುಲುಗಳಿಂದ ಚರ್ಚೆಯಾಗುತ್ತಲೇ ಬಂದಿದೆ. ಇನ್ನೂ ಚರ್ಚೆಯಾಗುತ್ತಲೇ ಇದೆ. ವರ್ತಮಾನ ಪತ್ರಿಕೆಗಳಲ್ಲಿ ಜಾತಿಗಳನ್ನು ಪರಿಶಿಷ್ಟ ಜಾತಿಗೆ, ಪರಿಶಿಷ್ಟ ಪಂಗಡಕ್ಕೆ ಅಥವಾ ಪ್ರವರ್ಗ-೧ಕ್ಕೆ ಸೇರಿಸಬೇಕೆಂದು ಮನವಿ, ಧರಣಿ, ಸತ್ಯಾಗ್ರಹಗಳನ್ನು ದಿನಾಲೂ ನೋಡುತ್ತೇವೆ. ಆದರೆ ಇವೇ ಜಾತಿಗಳ ಜನರು ಒಂದಾನೊಂದು ಕಾಲಕ್ಕೆ ಹೊಲೆ-ಮಾದಿಗರನ್ನು ಅಂತರದಿಂದ ಕಾಣುತ್ತಿದ್ದರು. ಆದರೆ ಇದೇ

ಜಾತಿಯನ್ನು ಈಗ ಯಾರೂ ನೋಡುವುದಿಲ್ಲ. ಈ ರೀತಿಯ ವ್ಯವಸ್ಥೆಯು ಮೀಸಲಾತಿಯ ಲಾಭವನ್ನು ಪಡೆಯುವುದಷ್ಟೇ ಆಗಿರದೆ ವ್ಯವಸ್ಥೆಯಲ್ಲಿ ಹೇಗಾದರೂ ಮಾಡಿಕೊಂಡು ಲಾಭಪಡೆದುಕೊಳ್ಳುವ ಹುನ್ನಾರ ಯಾರಿಗಾದರೂ ತಿಳಿಯುತ್ತದೆ. ಡಾ|| ಮೊಗಳ್ಳಿ ಗಣೇಶ ಅವರು ಹೇಳುವಂತೆ, ''ಅನೇಕ ಅಲ್ಪಸಂಖ್ಯಾತ ಜಾತಿಗಳು ಇವತ್ತು ಕೇಳುತ್ತಿರುವುದು ಹೊಲೆ-ಮಾದಿಗರ ಮೀಸಲಾತಿಯ ಪಾಲನ್ನು ಎಂಬುದು ಇಲ್ಲಿನ ಮುಖ್ಯ ಸಂಗತಿ. ಇಲ್ಲಿ ನಿಜವಾದ ದಲಿತರು ಯಾರು ಎಂಬುದೇ ಪರಿಹರಿಸಲಾಗದ ಕಗ್ಗಂಟಾಗಿದೆ. ಜನಸಂಖ್ಯೆಯ ಪ್ರದೇಶ ಮತ್ತು ಉಪಜಾತಿಗಳನ್ನು ಆಧರಿಸಿ ಒಟ್ಟು ಮೀಸಲಾತಿಯನ್ನು ಹಂಚುವ ವಿಧಾನವೇ ಇಂತಹ ಸಮಸ್ಯೆಗಳನ್ನು ತಂದೊಡ್ಡುತ್ತದೆ. ಇದರಲ್ಲಿ ಬಲಿಷ್ಠರಾದವರು ಮಾತ್ರವೇ ಮೀಸಲಾತಿಯನ್ನು ಹಂಚಿಕೊಳ್ಳುತ್ತಾರೆ. ಈ ಹಿನ್ನೆಲೆಯಲ್ಲೇ ಹೊಲೆ-ಮಾದಿಗರ ಮೀಸಲಾತಿಯಲ್ಲೂ ಈ ಚಕಾರಗಳು ಎದ್ದಿರುವುದು.'' ಒಳ ಮೀಸಲಾತಿಯ ಆಮಿಷವನ್ನು ತೋರಿಸಿ ಸೃಷ್ಟಿ ಮಾಡಿದ ಸಮಸ್ಯೆಯು ಇನ್ನೂ ಸಮಸ್ಯೆಯಾಗಿಯೇ ಉಳಿದಿದೆ. ಇದರಿಂದ ಎಡ-ಬಲಗಳೆಂಬ ಪಂಗಡಗಳಾಗಿ ದಲಿತರಲ್ಲಿ ಒಡಕು ಹುಟ್ಟಿ, ಅವರ ನಡುವೆ ಕಲಹಗಳು ಜರುಗುವ ಮಟ್ಟವನ್ನು ಕೂಡ ತಲುಪಿವೆ.



ಕಾರಣವಾಗಿ, ''ಎಷ್ಟೆಲ್ಲಾ ಜನರ ಬೆವರು ನೆತ್ತರಿನ ಹೋರಾಟದೊಂದಿಗೆ, ಕನಸುಗಳೊಂದಿಗೆ ಕಟ್ಟಿದ ದಲಿತ ಶಕ್ತಿಯ ಮರ ಫಲಕೊಡುವ ಹೊತ್ತಿನಲ್ಲಿ ಮರ ಬೆಳೆಸಿದ ಸೋದರರೇ ಪಾಲು ಬೇಡಿ ಟೊಂಗೆಗಳಿಗೆ ಕೊಡಲಿ ಹಚ್ಚಿದರೆ ಹೇಗೆ ಎಂಬುದನ್ನು ಅರಿಯಬೇಕಿದೆ. ದಾಯಾದಿ ಕಲಹದಲ್ಲಿ ಹೊರನಿಂತು ಬಲ ವೃದ್ಧಿಸಿಕೊಳ್ಳುತ್ತಿರುವ ಶತ್ರುವಿನ ಬಗೆಗೂ ಎಚ್ಚರವಹಿಸಬೇಕಿದೆ.'' ಮೋಹನ ನಾಗಮ್ಮನವರ ಅವರ ಈ ಮಾತುಗಳ ಹಿಂದಿನ ಕಾಳಜಿಯನ್ನು ಎಡಬಲ ದಾಯಾದಿಗಳು ತಮ್ಮತಮ್ಮಲ್ಲಿ ರೂಢಿಸಿಕೊಳ್ಳುವುದು ಇಂದಿನ ಅತಿ ಅವಶ್ಯವಾಗಿದೆ. ತಮ್ಮತಮ್ಮಲ್ಲಿಯೇ ಹಚ್ಚಿದ ಬೆಂಕಿಯನ್ನು ಆರಿಸುವ ಪ್ರಯತ್ನ ಮಾಡಿ, ಒಗ್ಗಟ್ಟಾಗಿ ಏಕತೆಯಿಂದ ನಮ್ಮನ್ನು ಬಳಸಿಕೊಂಡು, ನಮ್ಮನ್ನೇ ಶೋಷಿಸುವ ವ್ಯವಸ್ಥೆಯ ವಿರುದ್ಧದ ಹೋರಾಟ ಇಂದಿನ ಅವಶ್ಯಕತೆಯಿದೆ.

ಮೀಸಲಾತಿಯ ಜನಾಂಗದ ಕಾರಣವನ್ನು ಹಚ್ಚಿ ತಮ್ಮ ಉದ್ದೇಶಗಳನ್ನು ತೃಪ್ತಿಪಡಿಸಿಕೊಳ್ಳುವವರೂ ಇದ್ದಾರೆ. ಸರ್ಕಾರದಲ್ಲಿ ಮಂತ್ರಿ ಪದವಿ ಅಥವಾ ಯಾವುದೇ ಹುದ್ದೆ ಸಿಗದಿದ್ದರೆ ಹಿಂದುಳಿದ ದಲಿತ ಜನಾಂಗಕ್ಕೆ ಪೂರೈಸಬೇಕಾದ ಸವಲತ್ತು-ಸಹಕಾರಗಳನ್ನು ಒದಗಿಸಿಲ್ಲ; ಅವರ ಹಿತಾಸಕ್ತಿಗಳನ್ನು ನಿರ್ಲಕ್ಷಿಸಲಾಗಿದೆ, ಅವರಿಗೆ ಅನ್ಯಾಯವಾಗುತ್ತಿದೆ, ಇದು ಖಂಡನೀಯ, ಎಂಬ ಹಲವಾರು ಟೀಕೆಗಳ ಸುರಿಮಳೆಯನ್ನೇ ಸುರಿಸುತ್ತಾರೆ. ಒಂದು ವೇಳೆ ಮಂತ್ರಿಪದವಿ ಸಿಕ್ಕಿದ್ದೇ ಆದರೆ ಹಿಂದುಳಿದವರ, ದಲಿತರ ಹಿತಾಸಕ್ತಿಗಳು ಅವರ ಗಮನಕ್ಕೆ ಬಾರದೇಹೋಗಿರುತ್ತವೆ. ಇದು ಎಲ್ಲಾ ಮಂತ್ರಿ-ಮಹೋದಯರು ಮತ್ತು ವಿರೋಧ ಪಕ್ಷದವರೂ ನಡೆದುಕೊಳ್ಳುವ ರೀತಿಯಾಗಿದೆ. ಮೀಸಲಾತಿಯಡಿಯಲ್ಲಿ ಬದುಕುವ ಜನಾಂಗ ಮೇಲ್ವರ್ಗದ ಬಳಕೆಗೆ ಒಂದು ರೀತಿಯ ಸಾಧನವಾಗಿಬಿಟ್ಟಿದೆ.

ಅವರಿಗೆ ನಿಜಕ್ಕೂ ದಲಿತ ಮತ್ತು ಹಿಂದುಳಿದ ಜನಾಂಗಗಳ ಸಮಸ್ಯೆಗಳ ಬಗ್ಗೆಯಾಗಲಿ, ಅಡ್ಡಿ-ಆತಂಕಗಳ ಬಗ್ಗೆಯಾಗಲಿ ಕಾಳಜಿ ಇಲ್ಲ. ವೇದಿಕೆ ಗಳಲ್ಲಿ, ಸಭೆ-ಸಮಾರಂಭಗಳಲ್ಲಿ ಸಕಲಕಲಾವಲ್ಲಭರಂತೆ ದಲಿತರ ಕಷ್ಟಸುಖದ ಬಗ್ಗೆ ದೊಡ್ಡ ದೊಡ್ಡ ಭಾಷಣ ಬಿಗಿಯುತ್ತಾರೆ. ಇದು ಕೂಡ ಅವರ ವೈಯಕ್ತಿಕ ಹಿತ ಸಾಧಿಸಿ ಕೊಳ್ಳುವ ಒಂದು ರೀತಿಯಾಗಿದೆ. ಕಾರಣವಾಗಿ, ''ಇದಕ್ಕೆ ಉತ್ತರವಾಗಿ ದಲಿತ ಜನಾಂಗದ ಎಲ್ಲಾ ರಾಜಕಾರಣಿಗಳು ಒಂದಾಗಿ ಶಕ್ತಿಯುತವಾದ ಒಂದು ಗುಂಪನ್ನು ಕಟ್ಟಿ ಸಂಪೂರ್ಣ ಸಮಾನತೆಯ ಹಾದಿಯಲ್ಲದಿದ್ದರೂ ಯಾವ ಗುಂಪಿನ ಜೊತೆಗಾದರೂ ವ್ಯಾವಹಾರಿಕವಾಗಿ ಸಂಬಂಧ ಬೆಳೆಸುವ ಸ್ಥಿತಿಗೆ ಬರಬಹುದೆಂದು.'' ಪ್ರೊ|| ಸಿ. ಪಾರ್ವತಮ್ಮ ಅವರ ಈ ನಿರೀಕ್ಷೆಯು ನಿಜವಾದರೆ ದಲಿತರಿಗೆ ಒಳ್ಳೆಯದಾಗುತ್ತದೆ.

ಮೀಸಲಾತಿಯ ಅವಕಾಶ ಬಳಕೆಯಲ್ಲಿದ್ದು ೫೦ ವರ್ಷಗಳಾದರೂ ಹಳ್ಳಿಗಳಲ್ಲಿ ಬದುಕುವ ದಲಿತ ಜನಾಂಗವನ್ನು ಮೀಸಲಾತಿಯಡಿಯ ಸವಲತ್ತುಗಳು ಸಮರ್ಪಕವಾಗಿ ಮುಟ್ಟಿಲ್ಲ. ಇದರಿಂದಾಗಿ ಹಳ್ಳಿಗಾಡಿನ ದಲಿತರಲ್ಲಿ ಸಾಕಷ್ಟು ಸಮಸ್ಯೆಗಳು ತುಂಬಿ ತುಳುಕಾಡುತ್ತಿವೆ. ಬಡತನ, ಮೂಢನಂಬಿಕೆ, ಅನಕ್ಷರತೆ, ನಿರುದ್ಯೋಗಗಳಿಂದಾಗಿ ಸರ್ಕಾರವು ತಮಗಾಗಿ ಸೃಷ್ಟಿಸಿರುವ ಸವಲತ್ತುಗಳ ಬಗೆಗೆ ತಿಳಿದುಕೊಳ್ಳುವಲ್ಲಿ ಅವರಿಗೆ ತಿಳುವಳಿಕೆ ಇಲ್ಲ. ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ ಕಡ್ಡಾಯ ಶಿಕ್ಷಣದ ಬಗೆಗೆ ಮಾಹಿತಿ ಇಲ್ಲದೇ ಇರುವುದು ಮತ್ತು ಈ ಬಗೆಯ ಸಾಕಷ್ಟು ಕಾರಣಗಳಿಂದಾಗಿ ಹಳ್ಳಿಯ ದಲಿತರ ಸ್ಥಿತಿ ಇನ್ನೂ ಸುಧಾರಣೆಯಾಗಿಲ್ಲ. ಇಂಥ ಸಮಸ್ಯೆಗಳನ್ನು ನೀಗಿಸಬೇಕಾದರೆ ಸರ್ಕಾರವು ಸಾಕಷ್ಟು ಬಂಡವಾಳ ಹಾಗೂ ನಿಯತ್ತಿನ ಶ್ರಮವನ್ನು ಅಲ್ಲಿ ಬಳಸಬೇಕಾಗಿದೆ.

ಮತ್ತೊಂದು ಕಡೆ ಅಧಿಕಾರಿಗಳ ಮಕ್ಕಳೂ ಸೇರಿದಂತೆ ಆರ್ಥಿಕವಾಗಿ ಸಬಲರಾದ ಪರಿಶಿಷ್ಟರ ಮಕ್ಕಳು ಮೀಸಲಾತಿಯ ಲಾಭ ಪಡೆದು, ಹಿಂದುಳಿದ ಪರಿಶಿಷ್ಟರ ಮಕ್ಕಳು ವಂಚಿತರಾಗುವಂತಾಗಿದೆ. ಇದನ್ನು ತಪ್ಪಿಸಲು ಒಂದು ತಲೆಮಾರಿಗೆ ಮಾತ್ರ ಮೀಸಲಾತಿಯನ್ನು ನಿಗದಿ ಪಡಿಸುವುದು ಸೂಕ್ತ. ಅಂದರೆ ಯಾರು ಒಮ್ಮೆ ಮೀಸಲಾತಿಯನ್ನು ಪಡೆದಿರುತ್ತಾರೋ ಅವರ ಮಕ್ಕಳಿಗೆ ಮೀಸಲಾತಿಯ ಸೌಲಭ್ಯ ದೊರೆಯಬಾರದು. ಅವರು ಸಾಮಾನ್ಯ ವರ್ಗದಲ್ಲಿಯೇ ಉದ್ಯೋಗ ಮತ್ತು ಶಿಕ್ಷಣ ಪಡೆಯುವಂತಾಗಬೇಕು. ಆಗ ಒಂದಲ್ಲ ಒಂದು ದಿನ ಕಟ್ಟಕಡೆಯ ಕುಟುಂಬಕ್ಕೂ ಮೀಸಲಾತಿಯ ಪ್ರಯೋಜನ ದೊರೆತು ಮೀಸಲಾತಿಗೆ ಅಂತ್ಯ ಹೇಳಬಹುದು.

ಈ ಸಲಹೆಯು ಹೊಸದೇನೂ ಅಲ್ಲ. ದಿ. ದೇವರಾಜ ಅರಸ್ ಅವರು ಮುಖ್ಯಮಂತ್ರಿಯಾಗಿದ್ದಾಗಲೇ ವಿಧಾನಸಭೆಯಲ್ಲಿ ಈ ರೀತಿಯ ಚರ್ಚೆ, ವಾದ ವಿವಾದಗಳು ಆಗಿದ್ದವು. ಕಾರಣವಾಗಿ ಪ್ರಾರಂಭದಲ್ಲಿಯೇ ಡಾ|| ಅಂಬೇಡ್ಕರರು ದಲಿತರು ಸುಧಾರಿಸಿ ಒಂದು ಹಂತಕ್ಕೆ ಬರಬೇಕಾದರೆ ಅವರಿಗೆ ೧೦೦ ವರ್ಷಗಳ ಮೀಸಲಾತಿಯ ಅವಶ್ಯಕತೆಯಿದೆಯೆಂದು ವ್ಯಕ್ತಪಡಿಸಿದಾಗ, ಇವರಿಗಿಂತ ಮೊದಲು ಒಬ್ಬ ೧೦ ವರ್ಷಗಳ ಅವಧಿಯವರೆಗೆ ಮೀಸಲಾತಿಯು ಸಾಕೆಂದು ೩೦ ಜನರ ಸಹಿ ಮಾಡಿಸಿ ಒಪ್ಪಿಸಿದ ಅರ್ಜಿಯನ್ನು ನೋಡಿ ಅಂಬೇಡ್ಕರರು ದಿಗ್ಭ್ರಮೆಗೊಂಡಿದ್ದರು. ಈ ತರಹದ ರಾಜಕೀಯ ಮೀಸಲಾತಿಯನ್ನು ಮಣ್ಣು ಮುಕ್ಕಿಸುವಲ್ಲಿ ಸಂಚುಗಳು ಕಾಲಕಾಲಕ್ಕೆ ನಡೆಯುತ್ತಲೇ ಬಂದಿವೆ.

ಇಂದು ಮೀಸಲಾತಿಯಡಿಯಲ್ಲಿ ಬದುಕುತ್ತಿರುವ ದಲಿತರು, ಭಾರತದಲ್ಲಿ ಬಹುಪಾಲು ಕ್ಷೇತ್ರಗಳಲ್ಲಿ ಬಹುರಾಷ್ಟ್ರೀಯ ಕಂಪನಿಗಳಿಗೆ ಮತ್ತು ವಿದೇಶಿ ಬಂಡವಾಳಕ್ಕೆ ಸ್ವಾಗತಿಸುತ್ತಿರುವ ಸಾಮ್ರಾಜ್ಯಶಾಹಿಯ ವಿರುದ್ಧ ಹೋರಾಡುವ ಅವಶ್ಯಕತೆಯಿದೆ. ಜೊತೆಗೆ ಉದಾರೀಕರಣದ ವಿರುದ್ಧವೂ ಇವರು ಹೋರಾಡುವ ಅವಶ್ಯಕತೆಯಿದೆ. ಮೀಸಲಾತಿಗೆ ಜಾಗತೀಕರಣದ ಕೊಡಲಿಪೆಟ್ಟನ್ನು ತಪ್ಪಿಸಬೇಕಾಗಿದೆ. ಇದರಿಂದ ಸಾರ್ವಜನಿಕ ಕ್ಷೇತ್ರಗಳು ಖಾಸಗಿ ಕ್ಷೇತ್ರಗಳಾಗಿರುವುದರಿಂದ ಅವಕಾಶಗಳೆಲ್ಲವೂ ಖಾಸಗಿ ಮಾಲೀಕರುಗಳ ಕೈವಶವಾಗಿರುವುದರಿಂದ ಸಹಜವಾಗಿ ದಲಿತರು ಇದರಿಂದ ವಂಚಿತರಾಗಿದ್ದಾರೆ.

ಶ್ರೇಣೀಕೃತ ಸಮಾಜದಲ್ಲಿನ ಅವಶ್ಯಕವಾಗಿರುವ ಮೀಸಲಾತಿಯನ್ನು ದಮನ ಮಾಡುತ್ತಿರುವವರ ಬಗ್ಗೆ ಎಚ್ಚರ ವಹಿಸಬೇಕಾಗಿದೆ. ಹಿಂದುಳಿದವರೆಲ್ಲರೂ ಹಸಿವಿನಿಂದ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ತೊಡಕುಗಳಿಂದ, ಅನಕ್ಷರತೆಯಿಂದ ವಿಮುಕ್ತರಾಗಬೇಕಿದೆ. ಜಾಗತೀಕರಣ, ಖಾಸಗೀಕರಣ, ಉದಾರೀಕರಣ ಮತ್ತು ಕಂಪ್ಯೂಟರ್ – ಇವೆಲ್ಲವುಗಳ ನಡುವೆ ನಿಂತು ಹೋರಾಡಬೇಕಾಗಿದೆ. ಪಾರಂಪರಿಕ ಹಳೆಯ ಜಾಡನ್ನು ಬಿಟ್ಟು ಆಧುನಿಕ ಜಗತ್ತಿಗೆ ಅನ್ವಯವಾಗುವಂಥ ನಮ್ಮ ಎಲ್ಲ ಜ್ಞಾನ ದಿಗಂತಗಳನ್ನು ರೂಪಿಸಿಕೊಳ್ಳಬೇಕಾಗಿದೆ.

ವಿಜಯ ಆರ್. ಕಾಂಬಳೆ
ಮಲಪ್ರಭಾ ವಸತಿ ನಿಲಯ, ರೂಂ ನಂ. ೩೪, ಕ.ವಿ.ವಿ. ಧಾರವಾಡ - ೫೮೦ ೦೦೩





**ವರ್ತಮಾನದ ಕಣ್ಣು** (ವೈಚಾರಿಕ ಲೇಖನಗಳು)
ವಿಷ್ಣು ನಾಯ್ಕ
**ಪುಟ : ೧೨೪+೪** **ಬೆಲೆ : ರೂ. ೬೦**
**ಶ್ರೀ ರಾಘವೇಂದ್ರ ಪ್ರಕಾಶನ**, ಅಂಬಾರಕೊಡ್ಲ, ಅಂಕೋಲಾ - ೫೮೧ ೩೧೪ ಉ. ಕ.

ವಿಷ್ಣು ನಾಯಕರು ಕಳೆದ ಆರೇಳು ವರ್ಷಗಳ ಅವಧಿಯಲ್ಲಿ ಬರೆದ ಮೂವತ್ತು ಬಿಡಿ ಲೇಖನಗಳು ಇಲ್ಲಿ ಸಂಕಲಿತಗೊಂಡಿವೆ. ಬೇರೆ ಬೇರೆ ಸಂದರ್ಭಗಳಲ್ಲಿ ಬರೆದ ಲೇಖನಗಳಾದ್ದರಿಂದ ವಸ್ತುವೈವಿಧ್ಯತೆಯಿದೆ. ಕವಿ, ಕಥೆಗಾರ, ವಿಮರ್ಶಕ ಹಾಗೂ ಅಂಕಣಕಾರರಾಗಿಯೂ ಪ್ರಸಿದ್ಧರಾಗಿರುವ ವಿಷ್ಣು ನಾಯಕರ ದೃಷ್ಟಿ ವರ್ತಮಾನದಲ್ಲಿ ಕೇಂದ್ರೀಕೃತವಾಗಿರುವುದು ತಿಳಿದುಬರುತ್ತದೆ. ಆದರೆ ಈ ವರ್ತಮಾನದಲ್ಲಿ ಭೂತದ ಅರಿವು, ಭವಿಷ್ಯದ ಕಾಳಜಿಗಳೂ ಬೆರೆತಿರುತ್ತವೆ ಎಂದೇ ಅವರು ನಂಬಿರುವುದರಿಂದ ಅವರ ವೈಚಾರಿಕ ಲೇಖನಗಳಲ್ಲಿ ಬೇರೆ ಬೇರೆ ಕಾಲಮಾನಗಳು ಅತ್ಯಂತ ಮಾರ್ಮಿಕವಾಗಿ ಸಂಚಲನಗೊಳ್ಳುವ ಬಗೆಯನ್ನು ಗುರುತಿಸಬಹುದು. ವಚನ ಸಾಹಿತ್ಯ, ಶಾಸಕಾಂಗ- ನ್ಯಾಯಾಂಗದ ಸಂಬಂಧಗಳು, ದೇವರು ಮತ್ತು ನಮಸ್ಕಾರ... ಹೀಗೆ ಇನ್ನೂ ಹತ್ತು ಹಲವು ವೈವಿಧ್ಯಗಳು ಈ ಸಂಗ್ರಹದಲ್ಲಿವೆ.



**ಬೆಳಕಿನಾಟ** (ವಿಮರ್ಶೆ) ಡಾ|| ಜಿ. ಬಿ. ಹರೀಶ
**ಪುಟ : ೧೧೨** **ಬೆಲೆ : ರೂ. ೬೦**
**ಸಂಚಯ**, ನಂ. ೧೦೦, ೨ನೇ ಮೈನ್, ೬ನೇ ಬ್ಲಾಕ್, ೩ನೇ ಸ್ಟೇಜ್, ೩ನೇ ಫೇಸ್, ಬನಶಂಕರಿ, ಬೆಂ - ೮೫

ಡಾ|| ಜಿ. ಬಿ. ಹರೀಶರವರ ಮೊದಲ ವಿಮರ್ಶಾ ಸಂಕಲನ ಇದು. ಅವರೇ ಹೇಳಿಕೊಂಡಿರುವಂತೆ 'ಹೊಸಗನ್ನಡದ ನಿರ್ಲಕ್ಷಿತ ನೆಲೆಗಳನ್ನು ಹುಡುಕುವ' ಸಂಕಲನ ಇದಾಗಿದೆ. ಈಗಾಗಲೇ ಸಾಕಷ್ಟು ಚರ್ಚೆಗೊಳಗಾಗಿರುವ ಕೃತಿಗಳ ಮಹತ್ವವನ್ನೇ ಮತ್ತೆ ವ್ಯಾಖ್ಯಾನಕ್ಕೆ ಗುರಿಪಡಿಸುವ ಕಾರ್ಯಬಿಟ್ಟು ಈವರೆಗೆ ಸಾಕಷ್ಟು ಚರ್ಚೆಯಾಗಿಲ್ಲದ ಲೇಖಕರ, ಕೃತಿಗಳ ಮೇಲೆ ಬೆಳಕು ಚೆಲ್ಲಿರುವುದು ಒಂದು ರೀತಿ 'ಬೆಳಕಿನಾಟ'ವಾಗಿ ಕೃತಿಯಾಗಿ ಮೈತಾಳಿದೆ. 'ವಸಾಹತುಶಾಹಿಯ ನೆರಳು-ಬೆಳಕಿನಾಟ : ದೇವಚಂದ್ರನ 'ರಾಜಾವಳಿ ಕಥಾಸಾರ' ಎಂಬ ಲೇಖನದಿಂದ ಪ್ರಾರಂಭವಾಗಿ ಕುಸುಮಾಕರ ದೇವರಗಣ್ಣೂರ, ಶಂಕರ ಮೊಕಾಶಿ ಪುಣೇಕರ, ಆನಂದ ಝುಂಝುರವಾಡ, ಮಧುರ ಚೆನ್ನ – ಹೀಗೆ ಇವರೆಲ್ಲರ ಬಗ್ಗೆ ಎಷ್ಟೊಂದು ವಿವರಗಳೊಂದಿಗೆ ಬರೆದಿದ್ದಾರೆಂದರೆ ಪ್ರತಿಯೊಂದು ಲೇಖನವೂ ಅಧ್ಯಯನ ಯೋಗ್ಯವಾದದ್ದು ಅನಿಸುತ್ತದೆ. ವಿಸ್ಮೃತಿಗೆ ಸರಿಸಲ್ಪಟ್ಟವರನ್ನು ಮತ್ತೆ ಸ್ಮೃತಿಗೆ ತರಿಸುವ ಈ ಸಂಕಲನ ಒಬ್ಬ ಒಳ್ಳೆಯ ವಿಮರ್ಶಕನ ಎಚ್ಚರವನ್ನು ಕಾಪಾಡಿಕೊಂಡಿದೆ.

ಇದ್ರೀಸ್ ಶಾರವರ **ದರವೇಶಿ ಕತೆಗಳು**
ಗೌರಿ ಲಂಕೇಶ್
**ಪುಟ : xiv+೧೦೬** **ಬೆಲೆ : ರೂ. ೯೦**
**ಸಿವಿಜಿ ಪಬ್ಲಿಕೇಷನ್ಸ್**, ನಂ. ೭೦, ೨ನೇ ಮುಖ್ಯರಸ್ತೆ, ಜಬ್ಬಾರ್ ಬ್ಲಾಕ್, ವೈಯಾಲಿಕಾವಲ್, ಬೆಂಗಳೂರು - ೩

ಇದ್ರೀಸ್ ಶಾರವರ 'ಟೇಲ್ಸ್ ಆಫ್ ದಿ ಡರ್ವಿಶಸ್' ಪುಸ್ತಕದ ಕನ್ನಡಾನುವಾದ ಇದು. ಇಲ್ಲಿನ ಕತೆಗಳು ಜೆನ್ ಮತ್ತು ಮುಲ್ಲಾ ನಸ್ರುದ್ದೀನನ ಕತೆಗಳನ್ನು ನೆನಪಿಸುತ್ತವೆ. ಆದರೂ ಇವುಗಳನ್ನು ಅರ್ಥೈಸಿಕೊಳ್ಳಲಿಕ್ಕೆ ಈ ಪುಸ್ತಕಕ್ಕೆ ಮುನ್ನುಡಿ ಬರೆದಿರುವ ರಹಮತ್ ತರೀಕೆರೆಯವರ ಮಾತು ನೆರವಾಗುತ್ತದೆ. 'ನಾವು ಕಂಡದ್ದರ ಕೇಳಿದ್ದರ ಆಚೆ ಸತ್ಯಕ್ಕೆ ಹಲವು ಮುಖಗಳಿರುತ್ತವೆ ಎನ್ನುವುದನ್ನೂ, ಜೀವನದಲ್ಲಿ ಎದುರಾಗುವ ಸಂದಿಗ್ಧಗಳನ್ನೂ ಸೂಚಿಸುತ್ತಿರಬಹುದು. ಆದರೆ ಇವುಗಳಷ್ಟೇ ಮುಖ್ಯವಾದದ್ದು, ಅದು ಕೇಳಿದವರ ಭಾವಕ್ಕೆ ಸಂವೇದನೆಗೆ ತಕ್ಕಂತೆ ಹೊಸ ಹೊಸ ಅರ್ಥಗಳಲ್ಲಿ ಬೆಳೆಯುತ್ತಾ ಹೋಗುವುದು. ಎಲ್ಲ ಸೃಜನಶೀಲ ಕೃತಿಗಳ ಮುಖ್ಯ ಲಕ್ಷಣವಿದು.' ಈ ನಿಟ್ಟಿನಲ್ಲಿ ಕಥೆಗಳನ್ನು ಓದತೊಡಗಿದರೂ ಸಂಪೂರ್ಣ ನಮ್ಮ ಅರ್ಥಗ್ರಹಿಕೆಗೆ ನಿಲುಕುವ ಕಥೆಗಳೆಷ್ಟು ಎಂಬುದನ್ನು ಆಯಾ ಓದುಗರೇ ಖಚಿತಪಡಿಸಿಕೊಳ್ಳಬೇಕಾಗುತ್ತದೆ. ಗೌರಿ ಲಂಕೇಶ್ ಅಚ್ಚುಕಟ್ಟಾಗಿ ಕನ್ನಡಕ್ಕೆ ಅನುವಾದಿಸಿದ್ದಾರೆ.



**ಅಗಣಿತ ಚಹರೆ** (ಕವನಗಳು) ಸಂದೀಪ ನಾಯಕ
**ಪುಟ : ೬೦** **ಬೆಲೆ : ರೂ. ೩೦**
**ಸಂಚಯ**, ನಂ. ೧೦೦, ೨ನೇ ಮೈನ್, ೬ನೇ ಬ್ಲಾಕ್, ೩ನೇ ಸ್ಟೇಜ್, ೩ನೇ ಫೇಸ್, ಬನಶಂಕರಿ ಬೆಂ - ೮೫

ತಮ್ಮೊಳಗಿಂದ ಜಿಗಿದು ಬರುವ ಕವಿತೆಗಳ ಬಗ್ಗೆ, ಆ ಭಾವಪ್ರಪಂಚದ ಬಗ್ಗೆ ಅನೇಕರು ಅನೇಕ ರೀತಿಯಲ್ಲಿ ವ್ಯಾಖ್ಯಾನಿಸುತ್ತಾರೆ. ಹಾಗೆಯೇ ಸಂದೀಪ ನಾಯಕರವರಿಗೆ ಕಾವ್ಯವೆನ್ನುವುದು 'ಮುಟ್ಟಿ ಮಾತನಾಡಿಸಿದರೆ ಫಲಕೊಡುವ ಮಾಂತ್ರಿಕ ವೃಕ್ಷ'ದಂತೆ. ಅವರ ಪ್ರತಿಯೊಂದು ಕವಿತೆಯೂ ಒಂದು ಸುಂದರ ಶಬ್ದಚಿತ್ರ. ಮೊದಲು ಬೆರಗುಹುಟ್ಟಿಸಿ ನಂತರ ಅರ್ಥವ್ಯಾಖ್ಯಾನಕ್ಕೆ ಇಳಿಸುವ ಶಕ್ತಿ ಇಲ್ಲಿನ ಕವನಗಳಿಗಿವೆ. ಒಂದು ಸಾಮಾನ್ಯ ಸಂವೇದನೆ ಕವಿಯೊಬ್ಬನ ವಿಶಿಷ್ಟ ಅಭಿವ್ಯಕ್ತಿಯಲ್ಲಿ ಹೇಗೆ ಜೀವತಾಳಿ ಹೊಸ ರೂಪು ಪಡೆಯುತ್ತದೆ ಎಂಬುದು ಇಲ್ಲಿನ ಎಲ್ಲ ಕವಿತೆಗಳೂ ಮನವರಿಕೆ ಮಾಡಿಸುತ್ತವೆ. ಹಾಗೆಯೇ ಈ ಭಾವ 'ತನಗೂ ಅನಿಸಿತ್ತು' ಎನಿಸುವಂತೆ ಮಾಡುತ್ತವೆ. ಸಂಯಮ ಗುಣ ಇಲ್ಲಿನ ಎಲ್ಲ ಕವಿತೆಗಳಲ್ಲೂ ಅತ್ಯಂತ ಚೆನ್ನಾಗಿ ಹಾಸುಹೊಕ್ಕಾಗಿದೆ. 'ಲಾರಿಯಲ್ಲಿ ಬುದ್ಧ' ನೆನಪಿನಿಂದ ಎಂದಿಗೂ ಮಾಸಿಹೋಗದ ಕವನ. ಎಸ್. ಮಂಜುನಾಥ್ ಈ ಪುಸ್ತಕಕ್ಕೆ ಅರ್ಥಪೂರ್ಣ ಮುನ್ನುಡಿ ಬರೆದಿದ್ದಾರೆ.



**ನೀವೂ ದಾರ ಕಟ್ಟಿ** (ಬಹುಮಾನಿತ ಕತೆಗಳ ಸಂಕಲನ)
ಸಂ. ವಿಷ್ಣು ನಾಯ್ಕ
**ಪುಟ : ೧೪೪+೪** **ಬೆಲೆ : ರೂ. ೭೦**
**ಶ್ರೀ ರಾಘವೇಂದ್ರ ಪ್ರಕಾಶನ**, ಅಂಬಾರಕೊಡ್ಲ, ಅಂಕೋಲಾ - ೫೮೧ ೩೧೪ ಉ. ಕ.

ಕಥೆಗಾರ, ಕಥೆಗಾರ್ತಿಯರಿಂದ ಹೊಸ ಸಂವೇದನೆಯ ಅರ್ಥಪೂರ್ಣ ಕಥೆಗಳನ್ನು ಬರೆಸಲು ವಿವಿಧ ಪತ್ರಿಕೆಗಳು ತಾವು ಹೊರತರುವ ವಾರ್ಷಿಕ ಸಂಚಿಕೆಗಳು ರಾಜ್ಯಮಟ್ಟದ ಕಥಾಸ್ಪರ್ಧೆಗಳನ್ನು ಆಯೋಜಿಸುತ್ತವೆ. ದೀಪಾವಳಿ ವಿಶೇಷಾಂಕ, ಯುಗಾದಿ ವಿಶೇಷಾಂಕ ಹೀಗೆ. ಈ ಸಂಕಲನ 'ಸಕಾಲಿಕ' ಸಾಪ್ತಾಹಿಕ ಪತ್ರಿಕೆ ಏರ್ಪಡಿಸಿದ ರಾಜ್ಯಮಟ್ಟದ ಕಥಾಸ್ಪರ್ಧೆಯಲ್ಲಿ ಆಯ್ಕೆಯಾದ ಹನ್ನೆರಡು ಅತ್ಯುತ್ತಮ ಕಥೆಗಳ ಸಂಕಲನ. ಸಚ್ಚಿದಾನಂದ ಹೆಗಡೆ, ಸುನಂದಾ ಪ್ರಕಾಶ ಕಡಮೆ, ರಘುನಾಥ ಚ. ಹ... ಹೀಗೆ ಹೊಸ ತಲೆಮಾರಿನ ಕಥೆಗಾರರ ಕಥೆಗಳು ಒಂದೊಂದು ದೃಷ್ಟಿಯಿಂದ ಗಮನ ಸೆಳೆಯುತ್ತವೆ. ಕೆಲವರು ಬದುಕನ್ನು ಅರ್ಥೈಸಿಕೊಂಡಿರುವ ರೀತಿ, ಮತ್ತೆ ಕೆಲವರು ಅರ್ಥೈಸಿ ಹೇಳುವ ಬಗೆ, ಹೊಸ ಪ್ರಯೋಗದ ಕಡೆ ಗಮನ ಹರಿಸಿರುವುದು. ಭಾಷೆಯನ್ನು ತುಂಬ ಅಚ್ಚುಕಟ್ಟಾಗಿ ನಿರ್ವಹಿಸಿರುವುದು ಇಲ್ಲಿನ ಕಥೆಗಳಲ್ಲಿ ಕಂಡುಬರುತ್ತದೆ.



**ಜೀವ ಮಿಡಿತದ ಸದ್ದು** (ಕವನಗಳು) ವಿಭಾ
**ಪುಟ : xii+೬೮** **ಬೆಲೆ : ರೂ. ೫೦**
**ಸಂಚಯ**, ನಂ. ೧೦೦, ೨ನೇ ಮೈನ್, ೬ನೇ ಬ್ಲಾಕ್, ೩ನೇ ಸ್ಟೇಜ್, ೩ನೇ ಫೇಸ್, ಬನಶಂಕರಿ, ಬೆಂ - ೮೫

ವಿಭಾ ಕನ್ನಡದ ಪ್ರತಿಭಾವಂತ ಕವಯಿತ್ರಿ. ಜೀವ ಮಿಡಿತದ ಸದ್ದನ್ನು ಆಲಿಸಿ ಕವಿತೆಗಳನ್ನು ಬರೆದು ಭರವಸೆ ಹುಟ್ಟಿಸಿದ್ದ ವಿಭಾರ ಜೀವದ ಮಿಡಿತ ಸ್ಥಗಿತಗೊಂಡದ್ದು ಅತ್ಯಂತ ದುಃಖಕರ. 'ಆಕೆಯಿಂದ ಮತ್ತಷ್ಟು ಅರ್ಥಪೂರ್ಣ ಕವಿತೆಗಳು ಹೊರಬರಲಿ' ಎಂದು ಆಶಿಸಲಾಗದ ಸ್ಥಿತಿ ನಮ್ಮದು. 'ಬಂಧಿ'ಯಾಗಿರುವ ಜಗತ್ತಿನಿಂದ 'ಬಿಡುಗಡೆ'ಯ ಜಗತ್ತಿಗೆ ಬಂದು ಸೇರುವ ತುಡಿತ ಅನೇಕ ಹೆಣ್ಣುಮಕ್ಕಳಿಗೆ ಭರವಸೆಯೇ ಬೆಳಕು. ವಿಭಾರವರು ಈ ಜಗತ್ತನ್ನು ಹೀಗೆ ಅನಾವರಣಗೊಳಿಸುತ್ತಾರೆ: ಅಡುಗೆಮನೆಯ ಒಲೆಯ ಸಂದಿಯಲ್ಲೇ ಬದುಕುತ್ತಿರುವವರಿಗೆ ಹೊರಗೆ ಸೂರ್ಯ ಹುಟ್ಟುವುದು, ಬೆಳಕಿರುವುದು, ಹೊರಗೆ ಹಸುರಿರುವುದು ಎಲ್ಲವೂ ಆಶ್ಚರ್ಯವೇ. ವಿಭಾರ ಶ್ರೇಷ್ಠತೆ ಕಾಣುವುದು ಈ ಬಿಡುಗಡೆಯ ತಾಕಲಾಟವನ್ನು ಮೀರಿ ಬದುಕನ್ನು ಬೇರೆ ಬೇರೆ ಮಗ್ಗುಲುಗಳನ್ನು ಅತ್ಯಂತ ಸುಂದರ ಮತ್ತು ರಮ್ಯವಾಗಿ ನೋಡಿರುವುದು. ವಿಭಾರ ಆತ್ಮ ಇಲ್ಲಿನ ಕವನಗಳಲ್ಲಿದೆ.

**– ಎನ್. ಸಿ. ಮಹೇಶ್**, ಸೇಂಟ್ ಆನ್ಸ್ ವಿಮೆನ್ಸ್ ಪ್ರಥಮ ದರ್ಜೆ ಕಾಲೇಜು,
ನಂ. ೨, ಕೇಂಬ್ರಿಡ್ಜ್ ರಸ್ತೆ, ಹಲಸೂರು, ಬೆಂಗಳೂರು - ೫೬೦ ೦೦೮

# ಅಂತರಂಗದ ಪಿಸುದನಿ

ವಸುಮತಿ ಉಡುಪ



ಬಹಳ ದೊಡ್ಡಮನುಷ್ಯ ಕಣಯ್ಯಾ ನೀನು, ಮಹಾ ಪ್ರಾಮಾಣಿಕ. ಸತ್ಯಸಂಧ. ಸತ್ಯ ಹರಿಶ್ಚಂದ್ರ ಸತ್ತು ನೀನು ಹುಟ್ಟಿದ್ದು ನೋಡು, ಮತ್ತೆ ಹೇಗಿರೋಕೆ ಸಾಧ್ಯ ? ತೆಪ್ಪಗಿದ್ದಿದ್ದರೆ ಏನಾಗುತ್ತಿತ್ತು ? ಜುಜುಬಿ ಹತ್ತು ರೂಪಾಯಿಗೆ ಹೋಟೆಲಿನ ಯಜಮಾನ ಪಾಪರ್ ಆಗುತ್ತಿರಲಿಲ್ಲ. ಅಷ್ಟು ದೂರ ಹೋದವನು ನೆನಪು ಮಾಡಿಕೊಂಡು ವಾಪಸು ಬಂದು, ದುಡ್ಡುಕೊಟ್ಟು ಹೋದೆಯಲ್ಲ, ಗಲ್ಲಾದ ಬಳಿ ಕೂತಿದ್ದ ಆ ದೊಡ್ಡ ಹೊಟ್ಟೆಯ ಉರುಟುರುಟು ಮುಖದಲ್ಲಿ ಸಣ್ಣದೊಂದು ನಗು ಅರಳಿತಾ ? ನಿನ್ನ ಪ್ರಾಮಾಣಿಕತೆಯ ಕುರಿತು ಮೆಚ್ಚುಗೆ ಸುಳಿಯಿತಾ ? ಶುದ್ಧ ಬೆಪ್ಪ ನೀನು. ಲೋಕ ವ್ಯವಹಾರದ ಕುರಿತು ಅಪ್ರಯೋಜಕ. ಬುರ್ನಾಸು. ಈ ಅಮ್ಮಂದಿರ ಬಹುದೊಡ್ಡ ದೌರ್ಬಲ್ಯ ಅಂದರೆ ಹೆತ್ತಮಕ್ಕಳು. ಸಣ್ಣವನಿದ್ದಾಗ ಯಾವತ್ತೋ ಒಂದುವಾರ ಹಿಡಿದ ಜ್ವರ ಬಿಡಲಿಲ್ಲವಂತೆ. ಕಣ್ಣುಬೇಳೆ ಮೇಲೆ ಕೆಳಗೆ ಆಗಿ ಉಸಿರು ಸಿಕ್ಕಿಕೊಂಡಿತ್ತಂತೆ. ಜ್ವರ ನೆತ್ತಿಗೇರಿತ್ತಂತೆ. ಒದ್ದೆ ಬಟ್ಟೆ ಮಡಿಸಿ ಹಣೆಯ ಮೇಲಿಟ್ಟಿದ್ದರೆ ಎಲ್ಲಾ ಸರಿಯಾಗುತ್ತಿತ್ತೇನೋ. ಮೈಮೇಲಿನ ಎಚ್ಚರ ತಪ್ಪಿದ್ದು ಕಂಡು ಅಮ್ಮ ಕೈಕಾಲುಗೆಟ್ಟು ಇಲ್ಲಿನ ದೇವರಿಗೆ ಹರಕೆ ಕಟ್ಟಿಕೊಂಡಳು. ಈ ದೇವರ ಮಹಿಮೆಯಿಂದಲೇ ನಾನು ಸತ್ತು ಸತ್ತು ಬದುಕಿದ್ದು ಅನ್ನುವುದು ಅವಳ ಬಲವಾದ ನಂಬಿಕೆ. ಆಗಲಪ್ಪಾ, ಹೇಳಿಕೊಳ್ಳಲಿ ಹರಕೆ, ಹತ್ತಿರ ಯಾವ ದೇವರೂ ಇರಲೇ ಇಲ್ಲವಾ ? ದೂರದ ದೇವರು ಅಂದರೆ ಮಹಿಮೆ ಜಾಸ್ತಿ ಅಂತ ಅರ್ಥವಾ ? ಇಡೀ ಇಪ್ಪತ್ತೆರಡು ಘಂಟೆ ಮೈಕೈ ನುಗ್ಗಾಗಿಸಿಕೊಂಡು ಪ್ರಯಾಣ ಮಾಡಿ, ಭಾಷೆ ಗೊತ್ತಿಲ್ಲದ ಮತ್ತೊಂದು ರಾಜ್ಯಕ್ಕೆ ಬಂದು ಹೋಟೆಲಿನಲ್ಲಿ ರೂಮು ಮಾಡಿಕೊಂಡು, ಹರಕೆ ತೀರಿಸಿ ಹೋಗುವುದು ಅಂದರೆ ಬಹಳ ಪುರುಸೊತ್ತಾಗಿರಬೇಕು. ಇಂತಾ ಆಚರಣೆಗಳ ಕುರಿತು ನಂಬಿಕೆ ಇರಬೇಕು. ನಂಬಿಕೆ ಇಲ್ಲದೇ ಯಾರದೋ ಬಲವಂತಕ್ಕೆ ಹೋಗುವುದು ಅಂದರೆ ಆ ದಿನ ಮುಂದು ಮುಂದಕ್ಕೆ ಹೋಗುತ್ತಲೇ ಇರುತ್ತದೆ. ನನ್ನ ಮಟ್ಟಿಗೆ ಆಗಿದ್ದೂ ಅದೇ ಅಲ್ಲವಾ ? ನಂಬಿಕೆ ಇದೆ ಅಂದರೆ ಇದೆ, ಇಲ್ಲ ಅಂದರೆ ಇಲ್ಲ. ಒಂಥರಾ ಎಡಬಿಡಂಗಿ. ಏನಾದರೂ ಕಷ್ಟ ಬಂದಾಗ ದೇವರ ನೆನಪು. 'ಕಾಪಾಡಪ್ಪಾ...' ಎನ್ನುವ ವಿನಂತಿ. ಗಮ್ಮತ್ತಾಗಿದ್ದಾಗ ಯಾವ ದೇವರ ಹೆಸರೂ ನಾಲಿಗೆಯಲ್ಲಿ ಸುಳಿಯದು. ಹರಕೆಗೆ ಹನ್ನೆರಡು ವರ್ಷ ಗಡುವು ಉಂಟಂತೆ. 'ಹೋಗ್ಬಾರೋ, ಹರಕೆ ತೀರಿಸಿ ಬಾರೋ' ಅಮ್ಮನ ಹಠ. ಅಪ್ಪನಿಗಾಗಲೀ, ಅವಳಿಗಾಗಲೀ ಅಷ್ಟು ಹೊತ್ತು ಬಸ್ಸಿನಲ್ಲಿ ಕೂತು ಪ್ರಯಾಣ ಮಾಡುವುದು ಅಂದರೆ ಸಾಧ್ಯವೇ ಆಗದ ಮಾತು.

'ನಾನೊಬ್ಬ ಪುಗಸಟ್ಟೆ ಸಿಕ್ಕಿದೀನಿ ಅಂತ ಹರಕೆ ಹೇಳ್ಕೊಂಡ್ಬಿಟ್ಯಾ ? ನಿನ್ಹತ್ರ ಹರಕೆ ಹೇಳ್ಕೋ ಅಂತ ನಾನು ಹೇಳಿದ್ನಾ ? ನೀನು ಹೇಳಿಕೊಂಡ ಹರಕೇನ ನೀನೇ ತೀರಿಸೋದು ಬಿಟ್ಟು ನನ್ನ ತಲೆಗೆ ಯಾಕೆ ಹಚ್ತಿದೀಯಾ ?' ಅಮ್ಮನ ಮೇಲೆ ಗೂಬೆ ಕೂರಿಸಲು ಒಂದೊಂದಲ್ಲ ನೆಪ. ಕೊನೆಗೂ ಹೊರಡುವ ನಿಶ್ಚಯ ಮಾಡಿದಾಗ ಅಮ್ಮನಿಗೆ ಧನ್ಯತಾಭಾವ.

''ಅವನು ಕರೆಸ್ಕೊಳ್ಳೋ ಮನಸ್ಸು ಮಾಡೋವರೆಗೆ 'ಹೋಗ್ತೀನಿ' ಅಂದ್ರೂ ನಿಂಗೆ ಹೋಗೋಕಾಗಲ್ಲ. ಅವನು ಮನಸ್ಸು ಮಾಡಿದ ಅಂದ್ರೆ 'ಹೋಗಲ್ಲ' ಅಂದ್ರೂ ಬಿಡಲ್ಲ...'' ಖುಷಿಯಲ್ಲಿ ಅಮ್ಮ ಒಂದೇ ಸಮ ಮಾತಾಡುವಾಗ,

''ಹಾಗಿದ್ರೆ ನೋಡ್ಳೋಣ್ವಾ ? ಈಗ್ಲೂ ಬೇಕಾದ್ರೆ ಹೋಗೋದನ್ನ ಕ್ಯಾನ್ಸಲ್ ಮಾಡ್ಬಿಡ್ತೀನಿ. ಎಲ್ಲಾ ನನ್ನ ಮರ್ಜಿ. ಏನಂತಿ ?''

''ಮಾರಾಯಾ, ನಿನ್ಹತ್ರ ಮಾತಾಡೋರಿಗೆ ಬುದ್ಧಿ ಇಲ್ಲ. ತಪ್ಪಾಯ್ತು ಅನ್ನು...'' ಅಮ್ಮ ಗದರಿಸಿದ್ದಳು. ಈ ಊರಿಗೆ ಬಂದಿಳಿದಾಗ ಊರ ದೇವರ ಮಹಿಮೆ ಎಷ್ಟು ಪ್ರಖ್ಯಾತವೋ ಆ ಪ್ರಮಾಣದಲ್ಲಿ ಊರು ದೊಡ್ಡದೇನಲ್ಲ ಅನಿಸಿತ್ತು. ಅಂಗಡಿ ಮುಂಗಟ್ಟುಗಳಿಂದ ತೊಡಗಿ ವಸತಿಗೃಹಗಳವರೆಗೆ ಪ್ರತಿಯೊಂದೂ ದೇವಸ್ಥಾನವನ್ನು ಅವಲಂಬಿಸಿದ ವ್ಯವಸ್ಥೆ. ಬಸ್ಸಿಳಿಯುತ್ತಿದ್ದ ಹಾಗೆ ನಕ್ಷತ್ರಿಕನೊಬ್ಬ ಬೆನ್ನುಬಿದ್ದ.

''ರೂಮು ಬೇಕಾ ಸಾರ್ ? ನನ್ನೊತೆ ಬನ್ನಿ ಸಾರ್...''

ದೂರದರ್ಶನದಲ್ಲಿ ಕೇಳಿ ಕೇಳಿ ಕರಗತವಾಗದಿದ್ದರೂ ಸಲೀಸಾಗಿ ಅರ್ಥವಾಗುತ್ತಿದ್ದ ಭಾಷೆ. ವ್ಯಾಕರಣಶುದ್ಧವಲ್ಲದಿದ್ದರೂ ತುಂಡು ತುಂಡಾಗಿ ಉತ್ತರಿಸಲು ಗೊತ್ತಿದ್ದ ಭಾಷೆ. ನಕ್ಷತ್ರಿಕ ತನ್ನಂತಹಾ ಇನ್ನು ಕೆಲವರನ್ನು ಬಾಯಿಬಲದಿಂದ ಹತ್ತಿಕ್ಕಿ ನನ್ನ ಯೋಗಕ್ಷೇಮವನ್ನು ತನ್ನ ಸುಪರ್ದಿಗೆ ಆದಾಗಲೇ ವಹಿಸಿಕೊಂಡುಬಿಟ್ಟಿದ್ದ.

''ಎ.ಸಿ. ರೂಮು ಬೇಕಾ ಸಾರ್ ? ಬರೀ ನಾನೂರು...''

''ಬೇಡ ಮಾರಾಯಾ, ಸಾಧಾರಣದ್ದು ಸಾಕು.''

''ಬೇಕಿದ್ರೆ ಹೇಳಿ ಸಾರ್. ಎ.ಸಿ. ರೂಮನ್ನ ಬರೀ ಮುನ್ನೂರಕ್ಕೆ ಕೊಡಿಸ್ತೀನಿ.''

''ಬೇಡ ಅಂದ್ನಲ್ಲ''

''ಇನ್ನೂರೈವತ್ತಕ್ಕೆ ?''

''ಎಷ್ಟು ಕಡಿಮೇದು ಸಿಕ್ಕುತ್ತೋ ಅದೇ ಸಾಕು. ನಾನೇನು ಪರ್ಮನೆಂಟಾಗಿ ಇಲ್ಲಿರ್ಬೇಕಾ ? ಒಂದು ರಾತ್ರಿ ಕಳೆದುಹೋಗೋಕೆ ಹೇಗಿದ್ರೇನಂತೆ ?''

ನಕ್ಷತ್ರಿಕ ನೂರೈವತ್ತರ ಬಾಡಿಗೆಯ ರೂಮುಗಳಿಂದ ಇಡಿಕಿರಿದ ಗಲ್ಲಿಯ ಕಟ್ಟಡಕ್ಕೆ ಕರೆದುಕೊಂಡು ಹೋದ. ಪ್ರವೇಶದ್ವಾರದ ಸಣ್ಣ ಜಗುಲಿಯಲ್ಲಿ ಎರಡು ಕುರ್ಚಿ, ಒಂದು ಮೇಜು. ಅಂಗೈಯಗಲದ ಜಾಗವನ್ನೂ ಹೇಗೆ ಲಾಭದಾಯಕವಾಗಿ ಬಳಸಿಕೊಳ್ಳಬಹುದೆಂಬ ಜಾಣತನಕ್ಕೆ ಸಾಕ್ಷಿಯೆಂಬಂತೆ ಗಲ್ಲಿಯ ಇಕ್ಕೆಲಗಳಲ್ಲಿ ಎತ್ತರೆತ್ತರಕ್ಕೆ ಏರಿಸಿ ಕಟ್ಟಿದ ಬಾಡಿಗೆಗಿರುವ ಕೋಣೆಗಳ ಸಾಲು ಸಾಲು. ಗಾಳಿ, ಬೆಳಕುಗಳು ಉಸಿರುಗಟ್ಟಿ ಜೀವ ಹಿಡಿದುಕೊಂಡಿರುವ, ಸುತ್ತಿ ಸುಳಿದು ಮೇಲೇರುವ ಮೆಟ್ಟಿಲಪಂಕ್ತಿ. ರೂಮಿನ ಬೀಗ ತೆಗೆಸಿದ ನಕ್ಷತ್ರಿಕ.

''ನೋಡಿ ಸಾರ್, ಹೈಕ್ಲಾಸ್ ಜಾಗ. ಎಡವಿಬಿದ್ದರೆ ದೇವಸ್ಥಾನ. ಮೂರು ಹೊತ್ತಿನ ಪೂಜೆಗೂ ಆರಾಮಾಗಿ ಹೋಗಿಬರಬಹುದ್ದು. ಸೀಜ಼ನ್‌ನಲ್ಲಿ ಇಂತಾ ರೂಮಿಗೆ ಸಾವಿರದವರೆಗೂ ರೇಟಿರುತ್ತೆ ಸಾರ್. ಈಗ ವ್ಯಾಪಾರ ಡಲ್ ಹೊಡೀತಿದೆ'' ತಾರೀಫು ಮಾಡಿದ.

''ಟಿ.ವಿ. ಬೇಕಿದ್ರೆ ಹೇಳಿ ಸಾರ್. ಇನ್ನು ಐವತ್ತು ಕೊಟ್ರೆ ಟಿ.ವಿ. ತಂದಿಡ್ತಾರೆ'' ಸೇರಿಸಿದ. ಆಹಾ ರೂಮೇ, ನಮ್ಮೂರಿನ ಕೊಟ್ಟಿಗೆ ಕೂಡಾ ಇದಕ್ಕಿಂತಾ ಚೊಕ್ಕವಾಗಿರುತ್ತೆ, ಚೆನ್ನಾಗಿರುತ್ತೆ. ಗೋಡೆಗೆ ವತ್ತಿಟ್ಟ ಡಬಲ್ ಕಾಟ್‌ನ ಜಾಗ ಬಿಟ್ಟರೆ ಬದಿಗೆ ಓಡಾಡುವುದಕ್ಕಷ್ಟೇ ಸಾಧ್ಯವಾಗುವ ಸಣ್ಣ ಓಣಿಯಂತಹ ಇಕ್ಕಟ್ಟಿನ ಸ್ಥಳ. ಓಬೀರಾಯನ ಕಾಲದ ಹಾಸಿಗೆ, ಜೂಲು ಬಿಟ್ಟುಕೊಂಡ ಮೇಲ್ವಾಸು. ಗಾರೆ ಕಿತ್ತು ಉದುರುವ ಗೋಡೆ. ಗೋಡೆಯ ತುಂಬೆಲ್ಲಾ ತಗಣೆ ವರೆದ ಕಲೆಗಳು. ಮಬ್ಬುಗತ್ತಲು, ಮುಗ್ಗಲುನಾತ. ಇಷ್ಟೆಲ್ಲಾ ಚೌಕಾಶಿ ಮಾಡಿ ದುಡ್ಡು ಉಳಿಸಿ ಗಂಟುಮಾಡಬೇಕಾದ್ದೇನಿಲ್ಲ. ಇನ್ನೊಂದು ಒಳ್ಳೆಯ ರೂಮಿಗೆ ಕರೆದೊಯ್ಯಲು ಹೇಳಲಾ ? ಒಂದು ರಾತ್ರಿಗೆ ಎಂತಾ ಡೌಲು, ಮಲಗುವುದಕ್ಕಷ್ಟೇ ಇಲ್ಲಿಗೆ ಬರುವುದಲ್ಲವಾ ? ಸಾಕು ಸಾಕು. ದ್ವಂದ್ವ. ಗೆದ್ದದ್ದು

ಮಧ್ಯಮವರ್ಗದ ಮನೋಧರ್ಮ. ಜೇಬಲ್ಲಿ ದುಡ್ಡಿದ್ದರೂ ಸುಖಾಸುಮ್ಮನೆ ಖರ್ಚುಮಾಡಲು ಮನಸ್ಸಾಗದ ಜುಗ್ಗತನ ಅನ್ನಿಸಿಕೊಳ್ಳದ ಹೊಂದಾಣಿಕೆಯ ಸ್ವಭಾವ.

''ಬೇಗ ಬೇಗ ಮುಖ ತೊಳೆದು ರೆಡಿಯಾಗಿ ಬಂದ್ಬಿಡಿ ಸಾರ್. ಇನ್ನೇನು ಬೆಳಗಿನ ಪೂಜೆ ಮುಗಿದುಹೋಗ್ಬಿಡುತ್ತೆ. ಎಷ್ಟೋ ದೂರದಿಂದ ಬಂದಿದೀರಿ. ಮೊದಲು ದೇವರದರ್ಶನ ಮಾಡ್ಬಿಡಿ. ಆಮೇಲೆ ಬೇಕಾದ್ರೆ ರೆಸ್ಟ್ ತಗೊಳ್ಳಿ.''

ಫ್ರೆಷ್ ಆಗಿ ಕೆಳಗಿಳಿದುಹೋದರೆ ಪ್ರವೇಶದ ಬಳಿಯಲ್ಲೇ ಕಾಯುತ್ತಿದ್ದಾನೆ ನಕ್ಷತ್ರಿಕ. ಒಂದೇ ಅವಸರ. ಮಗ್ಗುಲಲ್ಲಿದ್ದ ಪೂಜಾಸಾಮಗ್ರಿಗಳ ಅಂಗಡಿಯಿಂದ ಇಲ್ಲಿನ ದೇವರ ಪೂಜೆಗೆ ಅತ್ಯಗತ್ಯವಾದದ್ದನ್ನು ಅವನೇ ಖರೀದಿಸಿ ದೊಡ್ಡ ಪ್ಲಾಸ್ಟಿಕ್ ಟ್ರೇಯಲ್ಲಿರಿಸಿ ಕೈಗೆ ಕೊಡಲು ಬಂದ.

''ಛೇ, ಛೇ, ಚಪ್ಪಲಿ ತೆಗೀರಿ ಸಾರ್. ಇಲ್ಲೇ ಅಂಗಡೀಲಿ ಇಟ್ಬಿಡಿ.'' ಚಪ್ಪಲಿ ತೆಗೆಸಿ ಮೇಲಿರಿಸಿದ. ಚಪ್ಪಲಿ ಮುಟ್ಟಿದ ಕೈಗೆ ಅಂಗಡಿಯವನ ಬಳಿ ಇದ್ದ ನೀರಿನ ಬಾಟಲಿಯಿಂದ ನೀರು ಸುರುವಿ ಶುದ್ಧ ಮಾಡಿಸಿದ. ''ಹೊತ್ತಾಯ್ತು, ಹೊತ್ತಾಯ್ತು...'' ಅವಸರದಲ್ಲೇ ದುಡ್ಡು ಕೊಡಿಸಿದ. ಟ್ರೇನಲ್ಲಿದ್ದ ವಸ್ತುಗಳಿಗೆ ಇನ್ನೊರೈವತ್ತು ಜಾಸ್ತಿ ಅನಿಸಿದರೂ ಚೌಕಾಶಿಗೆ ಪುರುಸೊತ್ತಿಲ್ಲ. ಅಸಲಿಗೆ ಚೌಕಾಶಿ ಮಾಡಬೇಕೆಂಬುದೂ ತಲೆಗೆ ಹೋಗದಷ್ಟು ಅವಸರಿಸುತ್ತಿದ್ದಾನೆ ಪುಣ್ಯಾತ್ಮ. ಗಲ್ಲಿಯ ತುದಿಗೆ ದೇವಸ್ಥಾನ. ನಾಲ್ಕು ನಿಮಿಷದ ನಡಿಗೆ. ಹೆಬ್ಬಾಗಿಲಿಗೆ ನನ್ನನ್ನು ಮುಟ್ಟಿಸಿ, ತನ್ನ ಸೇವಾರ್ಥ ಇಪ್ಪತ್ತೈದು ರೂಪಾಯಿ ಖುಷಿ ವಸೂಲುಮಾಡಿ, ಅವನು ನನ್ನ ಕೈಬಿಟ್ಟು ಮತ್ತೊಂದು ಬೇಟೆಗೆ ಹೊರಟುಹೋದ. ಸೀಜ಼ನ್ ಅಲ್ಲ ಎಂದು ನಕ್ಷತ್ರಿಕ ಹೇಳಿದ್ದರೂ ದೇವರೆದುರಿನ ಕ್ಯೂ ಫರ್ಲಾಂಗ್ ಉದ್ದ ಇತ್ತು. ಕ್ಯೂನಲ್ಲಿ ಸರತಿ ಹಚ್ಚಿದಾಗ ಮತ್ತೊಮ್ಮೆ ಕೈಲಿದ್ದ ಪೂಜಾವಸ್ತುಗಳ ಮೇಲೆ ಗಮನ. ಸಮಾ ಟೋಪಿ ಹಾಕಿದ್ದಾನೆ. ಹೇಗೆ ಲೆಕ್ಕ ಹಾಕಿದರೂ ನೂರು ರೂಪಾಯಿಗಿಂತಾ ಹೆಚ್ಚೇನಿಲ್ಲ. ದೇವರದರ್ಶನಕ್ಕೆ ಕಾತರಿಸಿ ಎಲ್ಲೆಲ್ಲಿಂದಲೋ ಬಂದವರು ಕಾಸುಕಾಸಿಗೆ ಲೆಕ್ಕ ಹಾಕುವುದಿಲ್ಲ ಎನ್ನುವ ಸಾಮಾನ್ಯಜ್ಞಾನ. ಅವಸರ ಮಾಡಿ ಬುದ್ಧಿ ಮಂಕಾಗಿಸುವ ಚಾತುರ್ಯ. ಕಾರಣಿಕದ ದೇವರ ಕಣ್ಣೆದುರಿನಲ್ಲೇ ಮೋಸದಾಟ. ಇವರಿಗೆಲ್ಲಾ ದೇವರ ಭಯವಿಲ್ಲವೇ ? ಅತಿಬಳಕೆಯಿಂದುಂಟಾದ ಅವಜ್ಞೆಯೇ ? ಸರತಿಯ ಸಾಲಿನಲ್ಲಿ ಇಂಚಿಂಚೇ ಎಂಬಂತೆ ಮುಂದೆ ಸರಿಯುವಾಗ ಭಕ್ತಿಯ ವಿಶ್ವರೂಪದರ್ಶನ. ಜೀವಮಾನದ ಮಹದಾಸೆ ನೆರವೇರಿದ ಸಂಭ್ರಮದಲ್ಲಿ ಕಣ್ಣೀರ್ಗರೆಯುತ್ತಿರುವವರು, ದೇವರ ನಾಮೋಚ್ಚಾರಣೆ ಮಾಡುತ್ತಿರುವವರು, ಯಾರದೋ ಆವೇಶದ ದನಿಗೆ ಜೈಕಾರ ಜೋಡಿಸುತ್ತಿರುವವರು, ಯಾರಿಗೂ ದೇವರ ಇರುವಿಕೆಯಲ್ಲಿ ಕಿಂಚಿತ್ ಸಂಶಯವೂ ಕಾಡುತ್ತಿಲ್ಲ. 'ನಂಬಿಯೂ ನಂಬದಿರುವ ಇಬ್ಬಂದಿ' ಯಾರೂ ಕಾಣುತ್ತಿಲ್ಲ. ನನ್ನಂಥವರ ಸಂಖ್ಯೆ ಕಡಿಮೆ ಇರಬಹುದೇನೋ. ಅಂಥವರು ಇಲ್ಲಿಗೆ ಬರುವುದಿಲ್ಲವೇನೋ. ಸುತ್ತಲಿನ ವಾತಾವರಣದಿಂದ ಪ್ರೇರಿತಗೊಂಡು ಎಂಬಂತೆ ನನ್ನೊಳಗೆ ಶರಣಾಗತ ಭಾವವೊಂದು ತಲೆ ಎತ್ತುತ್ತಿದೆ. ನಾನೂ ಸಮೂಹಸನ್ನಿಗೊಳಗಾಗುತ್ತಿದ್ದೇನೆ. ನನ್ನಲ್ಲೂ ಭಾವೋದ್ರೇಕ. ಸಾರ್ಥಕಕ್ಷಣದ ನಿರೀಕ್ಷೆಯ ತುಡಿತ.




ದೇವರದರ್ಶನವಾಯ್ತು. ಮುಡಿಪು ತಂದಿದ್ದನ್ನು ಹುಂಡಿಗೆ ಹಾಕಿ, 'ನಮೋನ್ನಮಃ' ಎನ್ನುತ್ತಾ ಕಣ್ಣುಜ್ಜಿ ಕೈ ಜೋಡಿಸಿದ್ದಾಯ್ತು. ಪೂಜಾಸಾಮಗ್ರಿಗಳನ್ನು ಒಪ್ಪಿಸಿದ್ದಾಯ್ತು. ಹಿಂದಿನಿಂದ ತಳ್ಳುತ್ತಿದ್ದಾರೆ ಜನ. ಮುಂದಿನಿಂದ 'ಬೇಗ, ಬೇಗ...' ಎನ್ನುತ್ತಾ ಕ್ಷಣವಿರಾಮವಾಗಿ ನಿಂತು ದೇವರನ್ನು ಕಣ್ತುಂಬಿಕೊಳ್ಳುವುದಕ್ಕೂ ಬಿಡದೆ ಅವಸರಿಸುತ್ತಿದ್ದಾರೆ ಭದ್ರತಾ ಸಿಬ್ಬಂದಿ. ಅಮ್ಮನ ಬಹುಕಾಲದ ಇಚ್ಛೆಯನ್ನು ಈಡೇರಿಸಿದ ಸಂತೃಪ್ತಭಾವದಲ್ಲಿ ದೇವಾಲಯದಿಂದ ಹೊರಬಿದ್ದು ಊರೊಳಗೊಂದು ಸುತ್ತು ಹಾಕುವ ಉಮೇದಿನಲ್ಲಿ ಪುಟ್ಟ ಊರಿನ ಗಲ್ಲಿಗಳಲ್ಲಿ ಹೆಜ್ಜೆ ಹಾಕಿದರೆ ಎಲ್ಲೆಲ್ಲೂ ದೇವರ ಹೆಸರನ್ನು ಆಧರಿಸಿ ಬದುಕುತ್ತಿರುವ ಜನ. ಪ್ರತಿ ಅಂಗಡಿಗೂ, ಪ್ರತಿ ಹೋಟೆಲಿಗೂ, ಮನೆಗಳಿಗೂ, ವಸತಿಗೃಹಗಳಿಗೂ, ಕೊನೆಗೆ ದವಾಖಾನೆಗಳಿಗೂ ಮೊದಲು ಊರ ದೇವರ ಹೆಸರು ಸೇರಿಸಿ ಮುಂದೆ ಅವರವರ ಇಚ್ಛೆಗನುಗುಣವಾಗಿ ಕೃಪಾ, ಲೀಲಾ, ವಿಲ್ಲಾ, ದರ್ಶನ ಇತ್ಯಾದಿ ಇತ್ಯಾದಿಗಳ ಜೋಡಣೆ. ಇಲ್ಲಿನ ದೇವರ ನಾನಾ ಭಂಗಿಯ, ನಾನಾ ಲೋಹದ, ಪ್ಲಾಸ್ಟಿಕ್ಕಿನ, ಬಳಪದ ಕಲ್ಲಿನ, ನಾನಾ ಗಾತ್ರದ ವಿಗ್ರಹಗಳು, ವಿವಿಧಾಕಾರದ ಪಟಗಳ ಜೊತೆ ಪೂಜೆಗೆ ಬಳಸುವ ವಿವಿಧ ವಸ್ತುಗಳ ಮಾರಾಟದಂಗಡಿಗಳ ಭರಾಟೆ. ಹೂವು ಹಣ್ಣು, ಕಾಯಿ ಕರ್ಪೂರ, ಅರಿಶಿನ ಕುಂಕುಮ, ಊದುಕಡ್ಡಿ, ಲೋಭಾನ, ದೇವರ ಮಹಿಮೆ ಸ್ತುತಿಸುವ ಭಕ್ತಿಗೀತೆಗಳ ಕ್ಯಾಸೆಟ್‌ಗಳು, ಎಲ್ಲಾ ಅಂಗಡಿಗಳೂ ದೇವರ ಸುತ್ತಲೇ ಗಿರಕಿ ಹೊಡೆಯುತ್ತಿರುವ ಅನುಭವ. ಈ ದೇವರ ಕೃಪಾಕಾಂಕ್ಷಿಗಳಾಗಿ ಬಂದವರಿಗೆ ದಾರಿ ಬದಿಯ ಗಾಡಿಯಲ್ಲೇ ಚಾ, ಕಾಫಿ ಕಾಸಿಕೊಡುವ, ತಿಂಡಿತಿನಿಸು ಮಾರುವ, ಮಂದಿಯ ಗಿಜಿಗಿಜಿ. ಒಬ್ಬ ದೇವರಿಂದ ಸಾವಿರಾರು ಜನ ಹೊಟ್ಟೆಹೊರೆದುಕೊಂಡು ನೆಮ್ಮದಿಯಾಗಿ ಬದುಕುತ್ತಿರುವ ಪವಾಡ. ಕಣ್ಣಿಗೆ ಕಾಣುತ್ತಿರುವ ಈ ಜನ ಮಾತ್ರವಲ್ಲ, ಎಲ್ಲೋ ತರಕಾರಿ, ತೆಂಗಿನಕಾಯಿ, ದವಸಧಾನ್ಯ, ಹೂವು ಹಣ್ಣು ಬೆಳೆಯುತ್ತಿರುವ ರೈತರೂ ತಮ್ಮ ಸಾಮಗ್ರಿಗಳನ್ನು ಇಲ್ಲಿಗೆ ರವಾನಿಸುತ್ತಾ ಬದುಕು ಕಂಡುಕೊಂಡಿದ್ದಾರೆ. ದೇವಸ್ಥಾನದ ಆವರಣದೊಳಗೆ ದೇವರಪ್ರಸಾದ ತಯಾರಿಸುವ, ಪ್ಯಾಕ್ ಮಾಡುವ, ವ್ಯವಸ್ಥಿತವಾಗಿ ಮಾರುವ, ಮತ್ತೊಂದೇ ವ್ಯವಸ್ಥೆ. ಒಟ್ಟಿನಲ್ಲಿ ಇದೊಂದು ಸಾಮ್ರಾಜ್ಯ. ಸ್ಥಳದ ದೇವರು ಮಹಾರಾಜ. ಅವನ ಪರೋಕ್ಷ ಆಳ್ವಿಕೆಯಲ್ಲಿ ಸರಾಗವಾಗಿ ನಡೆಯುತ್ತಿದೆ ಜನಜೀವನ. ದೇವರಿಗೆ ಸಂಬಂಧಿಸಿದ ಇನ್ನೂ ಏನೇನು ವ್ಯವಹಾರಗಳಿವೆಯೋ, ಯಾವ್ಯಾವ ರೀತಿಯಲ್ಲಿ ಎಷ್ಟೆಷ್ಟು ಜನ ಜೀವನೋಪಾಯ ಕಂಡುಕೊಂಡಿದ್ದಾರೋ ನನ್ನಂಥವನ ಯೋಚನೆಗೆ ನಿಲುಕಲೊಲ್ಲದ ಸಂಗತಿ. ಕೇವಲ ಒಂದು ನಂಬಿಕೆಯ ಆಧಾರದ ಮೇಲೆ ಸಾವಿರಾರು ಮಂದಿಯ ಬದುಕಿನ ನೆಲೆಗಟ್ಟು ಭದ್ರವಾಗಿರುವುದರ ಕುರಿತು ಪರಮಾಶ್ಚರ್ಯ.

ನೆತ್ತಿಯ ಮೇಲೆ ಬಿಸಿಲು ಸುಡುತ್ತಿತ್ತು. ಹೊಟ್ಟೆಯೊಳಗೆ ಹಸಿವು ಚುರುಗುಟ್ಟುತ್ತಿತ್ತು. ಆಶ್ಚರ್ಯವೆಂದರೆ ಯಾವ ರಾಜ್ಯದ ಯಾವ ಮೂಲೆಗೇ ಹೋಗಲಿ, ನಮ್ಮ ಕಡೆಯ ಊಟ ಸಿಗುತ್ತದೆ. ಅಂದರೆ ಕಾಲುಗಳು ಅತ್ತ ಎಳೆಯುತ್ತವೆ. ಏನೋ ಆಪ್ತಭಾವ. ಸ್ವಂತ ಊರಿನಲ್ಲಿದ್ದಾಗ ಕಾಡದ ಬಾಂಧವ್ಯ. ಉಡುಪಿ ಹೋಟೆಲು ಸಿಗದಿದ್ದರೂ ನೆರೆಯ ಆಂಧ್ರದ ಗುಂಟೂರು ಭೋಜನಾಲಯದ ಬೋರ್ಡು ಕಣ್ಣಿಗೆ ಬಿತ್ತು. ಸೂರಿಗೆ ಶೀಟ್ ಜೋಡಿಸಿ, ಕೆಳಗೆ ಮೇಜು, ಕುರ್ಚಿ ಇಟ್ಟು ಢಾಬಾದಂತೆ ಮಾಡಿಕೊಂಡಿದ್ದ ವ್ಯವಸ್ಥೆ. ಬೆಂಕಿ ಉಗುಳುತ್ತಿರುವ ಮಾಡು. ಧಗೆ, ಸೆಕೆ, ಒಣಗುತ್ತಿರುವ ಗಂಟಲು. 'ಬಾಟಲಿ ನೀರು ಬಿಟ್ಟು ಮತ್ಯಾವುದೂ ಕುಡೀಬೇಡ' ಅಮ್ಮ ಪದೇ ಪದೇ ಎಚ್ಚರಿಸಿ ಕಳಿಸಿದ್ದಳು. ಬಿಳಿ ಬಾಟಲಿಯಲ್ಲಿ ಮಾರುವ ನೀರು ಎಂದರೆ ಸಂಪೂರ್ಣ ಶುದ್ಧ ಎಂದು ಹಳ್ಳಿಹಳ್ಳಿಯಲ್ಲೂ ನಂಬಿಬಿಟ್ಟಿದ್ದಾರೆ.

ಮೇಜಿನ ಎದುರು ಊಟಕ್ಕೆ ಸಿದ್ಧನಾಗಿ ಕೂತಾಗ ಯಾವುದೋ ಹಳೆ ನೆನಪಿನಿಂದ ಕಚಕುಳಿಯಾಗುತ್ತಿದೆ. ಹೀಗೇ ಪರವೂರಿಗೆ ಹೋಗಿಬಂದ ಒಬ್ಬಾತ ಹವಾ, ನೀರು, ಆಹಾರದ ವ್ಯತ್ಯಾಸದಿಂದ ಜ್ವರ, ಕೆಮ್ಮು ಹತ್ತಿಸಿಕೊಂಡು ಬಂದ. ಅವನಿಂದ ಅವನ ಮನೆಯವರಿಗೆ, ನೆರೆಹೊರೆಯವರಿಗೆ, ಕೊನೆಗೆ ಹಳ್ಳಿಗೆ ಹಳ್ಳಿ ತುಂಬಾ ಕೆಮ್ಮಿನ ಧಡಾಕಿ, ಜ್ವರದ ಮುಲುಕು. 'ಎಲ್ಲಿಂದ್ಲೋ ಬೀಜ ತಂದು ಊರಿಡೀ ಬಿತ್ತಿಬಿಟ್ಟ' ಎಲ್ಲರಿಂದ ಅವನಿಗೆ ಹಿಡಿಶಾಪ.

ಸಪ್ಲೈಹುಡುಗನ ಹತ್ತಿರ ಮೊದಲು ಕೇಳಿದ್ದು ಬಾಟಲಿ ನೀರು. ಅಪ್ರಾಪ್ತ ಮಕ್ಕಳನ್ನು ಕೆಲಸಕ್ಕಿಟ್ಟುಕೊಳ್ಳಬಾರದೆಂಬ ರೂಲ್ಸು ಪಾಲ್ಸು ಇಲ್ಲಿಗೆ ಅನ್ವಯಿಸುವುದಿಲ್ಲವೇನೋ. ಅನ್ವಯಿಸುವಲ್ಲಿಯೂ ಪಾಲಿಸುವವರು ಎಷ್ಟು ಮಂದಿ ? ಸುಮಾರು ಹನ್ನೊಂದು, ಹನ್ನೆರಡರ ವಯಸ್ಸಿನ ಹುಡುಗ ಪುಟಿಯುವ ಚೆಂಡಿನಂತೆ ಓಡಾಡುತ್ತಿದ್ದ. ಹಾಲುಗಲ್ಲದ ಮುಖದಲ್ಲಿ ಎದ್ದುಕಾಣುವ ಮುಗ್ಧತೆ. ಭವಿಷ್ಯದ ಕುರಿತು ಮಕ್ಕಳಿಗೇನು ಗೊತ್ತಿರುತ್ತದೆ ? 'ಬದುಕು ಇರುವುದೇ ಹೀಗೆ' ಎನ್ನುವಂತಾ ಒಂದು ಹೊಂದಾಣಿಕೆಯಲ್ಲಿ ಪಾಲಿಗೆ ಬಂದಿದ್ದನ್ನು ಇಂತಾ ಪುಟ್ಟಮಕ್ಕಳು ಒಪ್ಪಿಕೊಂಡು ಬಿಟ್ಟಿರುತ್ತಾರೆ. ಒಪ್ಪಿಕೊಳ್ಳಲೇಬೇಕಲ್ಲ, ಅಪ್ಪ, ಅಮ್ಮ ಹೇಳಿದ ಮೇಲೆ ?

ಗಲ್ಲಾದ ಮೇಲೆ ನೀರಿನ ಬಾಟಲಿಗಳನ್ನು ಜೋಡಿಸಿದ

೫೮ನೇ ಪುಟಕ್ಕೆ

# ಜಾಗತೀಕರಣ ಮತ್ತು ಶಿಕ್ಷಣ

**ಜಾಗತೀಕರಣ ಮಾರುಕಟ್ಟೆಯಲ್ಲಿ ಈಗ ಶಿಕ್ಷಣವೂ ಒಂದು ಸೇವಾ (Service) ವಿಷಯಕ್ಕೆ ಸೇರಿದೆ. ಹೀಗಾಗಿ ಅದು ಆರೋಗ್ಯ, ಬ್ಯಾಂಕುಗಳಂತೆ ಒಂದು ಸೇವೆಯ ವಿಷಯವೇ ಆದುದರಿಂದ ಇದು ಸಹ ಮುಕ್ತ ಮಾರುಕಟ್ಟೆಯಲ್ಲಿ ಸ್ಪರ್ಧಿಸಬೇಕಾಗುತ್ತದೆ. ಇಂಥ ಮುಕ್ತ ಮಾರುಕಟ್ಟೆಯನ್ನು ಎದುರಿಸಲು ಸಿದ್ಧರಾಗಲು ೨೦೦೫ನೇ ಇಸವಿಯವರಿಗೆ ಎಲ್ಲಾ ಸಹಿ ಮಾಡಿದ ದೇಶಗಳಿಗೆ ಗಡುವು ನೀಡಲಾಗಿತ್ತು. ಉಳಿದ ರಾಷ್ಟ್ರಗಳು ಎಚ್ಚೆತ್ತುಕೊಂಡು ಅನಿವಾರ್ಯ ಶತ್ರುವನ್ನು ಎದುರಿಸಲು ಸಜ್ಜಾದವು. ಆದರೆ ನಾವಿನ್ನೂ ಎದ್ದುನಿಲ್ಲಲು ಪ್ರಯತ್ನಿಸುತ್ತಿದ್ದೇವೆ. ನಾವಿನ್ನೂ ಅಂತರರಾಷ್ಟ್ರೀಯ ಶಿಕ್ಷಣ ಸೇವಾ ಸಂಬಂಧಪಟ್ಟ ವಿಷಯಕ್ಕೆ (IESP) ಸಹಿ ಹಾಕಬೇಕಾಗಿದೆ. ಇದಕ್ಕೆ ಸಹಿ ಮಾಡಿದ ದೇಶಗಳು ನಮ್ಮ ದೇಶಕ್ಕೆ ಬರುವ ಎಲ್ಲಾ ವಿದೇಶಿ ವಿಶ್ವವಿದ್ಯಾನಿಲಯಗಳಿಗೆ ಅಥವಾ ಕಾಲೇಜುಗಳಿಗೆ ಒಂದು ಮಾರ್ಗದರ್ಶಕ ಸೂತ್ರವನ್ನು ರಚಿಸಬೇಕಾಗುತ್ತದೆ.**

**ಡಾ॥ ಜಯಪ್ರಕಾಶ ಮಾವಿನಕುಳಿ**

ಕಳೆದ ಎರಡು ದಶಕಗಳಿಂದ ಶಿಕ್ಷಣ ಕ್ಷೇತ್ರದಲ್ಲಿ ಭಾರತೀಯರು ತುಂಬಾ ಸಂದಿಗ್ಧ ಸನ್ನಿವೇಶವನ್ನು ಎದುರಿಸುತ್ತಿದ್ದಾರೆ. ಕೆಲವರಿಗೆ ಇದು ಪ್ರಗತಿಯ ಆಶಾ ಮೆಟ್ಟಿಲುಗಳು; ಇನ್ನು ಕೆಲವರಿಗೆ ಇದು ಭಾರತೀಯ ಪರಂಪರೆಯ ಅವಸಾನದ ಮೆಟ್ಟಿಲುಗಳು. ನಮಗೆ ಇಷ್ಟವಿರಲಿ ಬಿಡಲಿ ಉದ್ಯಮದ ಭರಾಟೆಯಿಂದ ವಿವಿಧ ಸರಕುಗಳು ಎಲ್ಲ ಕಡೆ ತುಂಬಿ ಕೊಳ್ಳುತ್ತಿವೆ ; ವ್ಯವಸಾಯವನ್ನು ಉದ್ಯಮ ರೀತಿಯಲ್ಲಿ ಮಾಡಲು ತಾಂತ್ರಿಕ ಸಲಕರಣೆಗಳನ್ನು ತಯಾರಿಸಲಾಗಿದೆ. ಪ್ರವಾಸೋದ್ಯಮ ಗಣನೀಯವಾಗಿ ವಿದೇಶಿಯರ ಆಗಮನದಿಂದಾಗಿ ಹೆಚ್ಚಾಗಿದೆ. ಇದಕ್ಕೆಲ್ಲವೂ ಪೂರಕವೆಂಬಂತೆ ಶಿಕ್ಷಣ ಸಂಸ್ಥೆಗಳು ಮತ್ತು ಸಾರಿಗೆ ಸಂಪರ್ಕದಲ್ಲಿ ತೀವ್ರ ರೀತಿಯ ಬದಲಾವಣೆಗಳಾಗಿವೆ. ಇದೆಲ್ಲದರ ಒಟ್ಟು ಪರಿಣಾಮವಾಗಿ ಶಿಕ್ಷಣ ಮತ್ತು ಶಿಕ್ಷಣದ ಆಡಳಿತಕ್ಕೆ ಹೊಸ ರೀತಿಯ ಸವಾಲು ಎದುರಾಗಿದೆ. ಯಾಕೆಂದರೆ, ಜಾಗತೀಕರಣ ಮನೆಯ ಹೆಬ್ಬಾಗಿಲು ದಾಟಿ ನಡುಮನೆಗೆ ಬಂದುಬಿಟ್ಟಿದೆ.

ಶಿಕ್ಷಣ ನಮ್ಮ ದೇಶಕ್ಕೆ ಹೊಸದಲ್ಲ. ನಮಗೆ ಪರಂಪರೆಯೇ ಇದೆ. ಕ್ರಿ.ಪೂ. ೨೫೦೦ರ 'ವೇದದಲ್ಲಿ ಬರುವ ಶುಲ್ಬಸೂತ್ರಗಳು', 'ಶತಪಥ ಬ್ರಾಹ್ಮಣ' ಇವುಗಳಲ್ಲಿ ಗಣಿತ, ಕಾಲ, ನಕ್ಷತ್ರಗಳ ಚಲನೆ ಇನ್ನಿತರ ವಿಷಯಗಳ ಬಗ್ಗೆ ಪ್ರಸ್ತಾಪ ಮಾಡಲಾಗಿದೆ. ಪ್ರಾಚೀನ ಭಾರತೀಯ ಶಿಕ್ಷಣವು ಕುಟುಂಬದ ಕುಶಲತೆಯನ್ನು, ಯೋಗ, ಶಿಸ್ತು, ಸಂಯಮ, ವಿಧೇಯತೆ, ಔದಾರ್ಯತೆ, ಪರೋಪಕಾರ, ಆತ್ಮವಿಶ್ವಾಸ, ರಾಷ್ಟ್ರಭಕ್ತಿ ಇವುಗಳ ಬಗ್ಗೆ ಹೆಚ್ಚು ಒತ್ತು ನೀಡುತ್ತಿದ್ದವು. ಆದರೆ ವಿದೇಶಿಯರ ಪದೇ ಪದೇ ದಾಳಿಯಿಂದಾಗಿ ಭಾರತೀಯ ಶಿಕ್ಷಣ ಪರಂಪರೆಗೆ ಭಾರಿ ಹಿನ್ನಡೆಯಾಯಿತು. ಈಗ ನೇರವಾಗಿ, ಸರ್ಕಾರ ಸಮ್ಮತವಾಗಿ ಜನರಿಗೆ ಬೇಕೋ ಬೇಡವೋ ಬೇರೆ ವಿಚಾರಗಳನ್ನು, ಜಾಗತೀಕರಣವನ್ನು ನಾವು ಒಳಕ್ಕೆ ಬಿಟ್ಟುಕೊಂಡಿದ್ದೇವೆ.

ಜಾಗತೀಕರಣವೆಂದರೆ ಜಗತ್ತಿನ ಗಡಿಗಳನ್ನು ತೊಡೆದು ಹಾಕಿ, ರಾಷ್ಟ್ರವೆಂಬ ಭೌಗೋಳಿಕ ಪರಿಕಲ್ಪನೆಯನ್ನು ಹಾದು ಜಗತ್ತಿನ ಎಲ್ಲ ಪ್ರದೇಶಗಳನ್ನು ಮುಕ್ತವಾಗಿ ಮಾಡುವುದು. ಮೇಲುನೋಟಕ್ಕೆ ಇದು ವಿಶ್ವಮಾನವ ಪ್ರಜ್ಞೆಯನ್ನು ಅರಳಿಸುವ ಮಾರ್ಗವೆಂದುಕೊಂಡರೂ ಇದನ್ನು ಎಲ್ಲ ರಾಷ್ಟ್ರಗಳೂ ಎಚ್ಚರದಿಂದ ನೋಡದಿದ್ದರೆ ಇಡೀ ರಾಷ್ಟ್ರವು ಶಕ್ತಿಯುತ ಶ್ರೀಮಂತ ರಾಷ್ಟ್ರದ ವಸಾಹತು ಆಗುವ ಸಂಭವವೇ ಹೆಚ್ಚಾಗಿರುತ್ತದೆ. ವಸಾಹತು ದೇಶಗಳು ಸ್ವಾತಂತ್ರ್ಯದ ಬಾವುಟದಡಿಯಲ್ಲಿ ಶ್ರೀಮಂತ ರಾಷ್ಟ್ರಗಳ ಹಗಲನ್ನು ಸ್ವರ್ಗ ಮಾಡಲು ತಮ್ಮ ಸುಂದರ ರಾತ್ರಿಗಳನ್ನು ಕಳೆದುಕೊಳ್ಳುತ್ತವೆ. ಇಂಥ ಎಚ್ಚರ ಇಲ್ಲದಿದ್ದರೆ ಜಾಗತೀಕರಣವು ನಮ್ಮನ್ನು ಸ್ವರ್ಗಕ್ಕೆ ಕರೆದುಕೊಂಡು ಹೋಗುವ ರಹದಾರಿಯೆಂದು ಮೈಮರೆತರೆ ಮೆಕ್ಸಿಕೋ ರಾಷ್ಟ್ರ ಬೆಳೆಯದೇ ಅದರ ಪಕ್ಕದಲ್ಲಿರೋ ಅಮೆರಿಕಾ ಮಾತ್ರ ಬೆಳೆದು ಸಂಪನ್ನವಾದಂತೆ ಆಗುತ್ತದೆ.

ಜಾಗತೀಕರಣದ ಮುಖ್ಯ ಉದ್ದೇಶ ಆರ್ಥಿಕ ಪರಿಭಾಷೆಯಲ್ಲಿದೆ. ಜಗತ್ತಿನ ಸಂಪತ್ತನ್ನು ದೇಶದ ಸಂಪತ್ತಿನೊಡನೆ ಸಮೀಕರಿಸುವುದು, ಮುಕ್ತವಲಯವನ್ನು ನಿರ್ಮಿಸುವುದು, ಯಾವುದು ನಮ್ಮ ದೇಶದೊಳಗೆ ಬರಬೇಕು, ಬರಬಾರದು, ಆಮದು ರಫ್ತು ಇವುಗಳ ಮೇಲೆ ಇರುವ ರಾಷ್ಟ್ರದ ಸಾರ್ವಭೌಮ ಅಧಿಕಾರವನ್ನು ಕ್ಷೀಣಿಸಿ ಒಂದು ಬಹು ದೊಡ್ಡ ಒಪ್ಪಂದಕ್ಕೆ ಬರುವುದು. ಆಗ ಅಲ್ಲಿ ದೇಶಿ ವಿದೇಶಿ ಪ್ರಶ್ನೆ ಬರುವುದಿಲ್ಲ. ಕೇವಲ ವಸ್ತು ವಿನ್ಯಾಸ, ಬೆಲೆ, ನಾಜೂಕು, ಬಾಳಿಕೆ, ಇಂಥದರ ಮೇಲೆ ಕೊಳ್ಳುವ-ಕೊಡುವ ವ್ಯಾಪಾರದ ನೀತಿಯಾಗಿರುತ್ತದೆ. ಆದುದರಿಂದ ಇಲ್ಲಿ ಉದಾರೀತನ ಮುಖ್ಯವಾಗಿರುತ್ತದೆ. ದೇಶದ ಬಾಗಿಲುಗಳು ತೆಗೆಯುತ್ತವೆ. ಗಟ್ಟಿಗನಾದವನು ಮೊದಲು ಓಡೋಡಿಬಂದು ಎಲ್ಲ ದೇಶದಲ್ಲೂ ತನ್ನ ಕೈಚಳಕ ತೋರಿಸಬಹುದು. ಶಕ್ತಿ ಇದ್ದವನು ಬದುಕುತ್ತಾನೆ; ಸೋತವರು ಹೆಸರು ಇಲ್ಲದಂತೆ ನಾಶವಾಗುತ್ತಾರೆ. ಭಾರತ ಸರ್ಕಾರ ೧೯೯೧ರಲ್ಲಿ ವಿಶ್ವಬ್ಯಾಂಕ್ ಒತ್ತಡದಿಂದ ಹೊಸ ಆರ್ಥಿಕ ನೀತಿಯನ್ನು ಜಾರಿಗೆ ತಂದಿತು. ನೊಬೆಲ್ ಪ್ರಶಸ್ತಿ ವಿಜೇತ ಜೊಸೆಫ್ ಸ್ಟಿಗ್‌ಲಿಡ್ಜ್‌ರ ಪ್ರಕಾರ, ''ಜಾಗತೀಕರಣ ಅಧೀನದ ಮುಕ್ತ ವಲಯಕ್ಕಾಗಿ ದೇಶದ ಅಡೆತಡೆಗಳನ್ನು ತೆಗೆದುಹಾಕಬಹುದು.'' ನಮ್ಮ ದೇಶದ ರಿಸರ್ವ್ ಬ್ಯಾಂಕ್ ಗೌರ್ನರ್ ಆಗಿದ್ದ ರಂಗರಾಜನ್‌ರವರ ಪ್ರಕಾರ, ''ಜಾಗತೀಕರಣವೆಂದರೆ ಎಲ್ಲ ರಾಷ್ಟ್ರಗಳ ಆರ್ಥಿಕ ವಲಯವನ್ನು ಒಗ್ಗೂಡಿಸಿ, ವಿಚಾರ, ತಾಂತ್ರಿಕತೆ, ಬಂಡವಾಳ, ಜನರು, ಸರಕುಗಳ ಅನಿರ್ಬಂಧಿತ ವಿನಿಮಯ.''

ಇಂಥ ಅಡಚಣೆಯಿಲ್ಲದೆ ಪ್ರಾಚೀನರು ಜ್ಞಾನಶಾಖೆಗಳತ್ತ ವಲಸೆ ಹೋಗುತ್ತಿದ್ದುದು ಹೊಸ ವಿಷಯವಾಗಿಲ್ಲ. ಜ್ಞಾನದಾಹಿಗಳಿಗೆ ಕಾನೂನು ಯಾವತ್ತೂ ಅಡಚಣೆ ಉಂಟುಮಾಡಿರಲಿಲ್ಲ. ತಕ್ಷಶಿಲ (ಕ್ರಿ.ಪೂ. ೧೮೦೦ - ೧೫೦೦), ನಲಂದ (ಕ್ರಿ.ಶ. ೫ನೇ ಶತಮಾನ) ಶಿಕ್ಷಣ ಕೇಂದ್ರಗಳು ಭಾರತದೆಡೆಗೆ ಚೀನಾ, ಜಪಾನ್, ಕೊರಿಯ, ಟಿಬೆಟ್, ಮಂಗೋಲಿಯ, ಶ್ರೀಲಂಕಾ ಮತ್ತಿತರ ಕಡೆಗಳಿಂದ ಜನರನ್ನು ಆಕರ್ಷಿಸಿದ್ದು ಅಪೂರ್ವ ಪೂರ್ವ ದಾಖಲೆ. ಆದುದರಿಂದ ಜಾಗತೀಕರಣವೆಂಬ ಈ ಹೊಸ ಮಾಯೆ ಬರುವುದಕ್ಕಿಂತ ಮುಂಚಿತವಾಗಿಯೇ ನಮ್ಮದು ತೆರೆದ ದೇಶವಾಗಿತ್ತು. ಬ್ರಿಟಿಷರೂ ಸಹ ಮೊದಲಿಗೆ ಮೂರು ವಿಶ್ವವಿದ್ಯಾನಿಲಯಗಳನ್ನು (ಕಲ್ಕತ್ತ, ಬೊಂಬಾಯಿ ಮತ್ತು ಮದ್ರಾಸ್) ಆರಂಭ ಮಾಡಿದರೂ ಇದರ ಉದ್ದೇಶ ವಸಾಹತುಶಾಹಿ ಆಸಕ್ತಿಗಳನ್ನು ರಕ್ಷಿಸುವುದು ಮಾತ್ರ ಆಗಿತ್ತು. ಅವರ ಉದ್ದೇಶ ಜ್ಞಾನ ಪ್ರಸರಣವಾಗಿರಲಿಲ್ಲ. ಅಕ್ಷರಸ್ಥ ಸಮಾಜದ ನಿರ್ಮಾಣವಾಗಿರಲಿಲ್ಲ. ಬ್ರಿಟಿಷ್ ರಾಜ್ಯವನ್ನು ಬಲಿಷ್ಠಗೊಳಿಸುವುದು ಮಾತ್ರವಾಗಿತ್ತು. ನೊಬೆಲ್ ಪ್ರಶಸ್ತಿ ವಿಜೇತ ಅಮರ್ತ್ಯ ಸೇನ್‌ರ ಪ್ರಕಾರ, ''ಬ್ರಿಟಿಷರು ಪ್ರಾಥಮಿಕ ಶಾಲೆಗಳನ್ನು ಸ್ಥಾಪಿಸಲು ಉತ್ಸುಕರಾಗಿರಲಿಲ್ಲ. ಭಾರತದಲ್ಲಿ ಮಾತ್ರ ಅವರಿಗೆ ಬೇಕಾದ್ದು ಉನ್ನತ ಕಾಲೇಜುಗಳು ಮಾತ್ರ.''

ಸ್ವಾತಂತ್ರ್ಯ ಬಂದ ಮೇಲೆ ಉನ್ನತ ಶಿಕ್ಷಣಲೋಕ ಬಹುವ್ಯಾಪಿಯಾದಾಗ ಸ್ವಾಭಾವಿಕವಾಗಿಯೇ ಅದು ತನ್ನ ಘನತೆಯನ್ನು ದಕ್ಷತೆಯನ್ನು ಕಳೆದುಕೊಳ್ಳಲಾರಂಭಿಸಿತು. ರಾಷ್ಟ್ರಾಧ್ಯಕ್ಷರಾದ ಎ.ಪಿ.ಜೆ ಅಬ್ದುಲ್ ಕಲಾಂರ ಹೇಳಿಕೆ ಪ್ರಕಾರ ಉನ್ನತ ಶಿಕ್ಷಣ ಮುಗಿಸಿ ಹೊರಬರುವವರು ಪ್ರತೀ ವರುಷ ೩೦ ಲಕ್ಷ ಪದವೀಧರರು. ಇದರ ಪರಿಣಾಮವಾಗಿ ೧೯೫೦-೫೧ರಲ್ಲಿ ಶೇಕಡಾ ೦.೬೪ ಖರ್ಚಾಗುತ್ತಿದ್ದುದು ೨೦೦೨-೦೬ರ ಹೊತ್ತಿಗೆ ಶೇಕಡಾ ೪.೧೧ರಷ್ಟಾಗಿದೆ. ಆದರೆ ನಮ್ಮ ಗುರಿ ೬ರಷ್ಟು!

೧೯೯೪ರಲ್ಲಿನ ಗ್ಯಾಟ್‌ನ ಬದಲಿಗೆ ೧೯೯೫ ಜನವರಿ ೧ರಂದು ವಿಶ್ವವ್ಯಾಪಾರ ಸಂಸ್ಥೆ (WTO) ಅಸ್ತಿತ್ವಕ್ಕೆ ಬಂತು. ಇದರ ಪ್ರಕಾರ ೧೬೧ ಸೇವಾ ಚಟುವಟಿಕೆಗಳು ಮತ್ತು ೧೨ ವಿಶೇಷ ಸೇವೆಗಳಿಗೆ ಹೊಸ ನಿಯಮ ಅನ್ವಯವಾಗುವುದು. ಇದರಲ್ಲಿ ಶಿಕ್ಷಣವೂ ಒಂದು. ಎಲ್ಲಾ ದೇಶದ ಶಿಕ್ಷಣ ಸಂಸ್ಥೆಗಳನ್ನು ಒಂದೇ ದೃಷ್ಟಿಯಲ್ಲಿ ಒಂದೇ

ಕಾನೂನಿನಲ್ಲಿ ಕಾಣುವುದು. ಶಿಕ್ಷಣಕ್ಷೇತ್ರದಲ್ಲಿ ಇನ್ನೂ ಮುಖ್ಯವಾಗಿ ಅಂತರ್‌ದೇಶೀಯ ಸೇವಾಸೌಲಭ್ಯ (ದೂರಶಿಕ್ಷಣಕ್ಕಾಗಿ ಇಂಟರ್‌ನೆಟ್, ಬುಕ್ಸ್, ಶಿಕ್ಷಣದಡಿ ಇನ್ನಿತರ ಸಾಹಿತ್ಯಗಳ ಮುಕ್ತ ವಿನಿಮಯ), ವಿದೇಶಿ ಶಿಕ್ಷಣ ಸೇವೆ (ತನ್ನ ದೇಶದಿಂದಲೇ ಫೀಜು ಕಟ್ಟಿ ಓದುವುದು) ಶಿಕ್ಷಕರ ವಿನಿಮಯ ಇನ್ನಿತರೆ.

ಉನ್ನತ ಶಿಕ್ಷಣವನ್ನು ಪರಿಗಣಿಸಿ ನೋಡಿದರೆ ಅದು ಜಗತ್ತಿನಲ್ಲೇ ಮೂರನೇ ದೊಡ್ಡದು ನಮ್ಮ ದೇಶ. ಇದರ ಪರಿಣಾಮವಾಗಿ ಸರ್ಕಾರದ ಆಯವ್ಯಯ ಕಡಿಮೆಯಾಗಿ ಖಾಸಗೀಕರಣವಾಗುವುದು ಅನಿವಾರ್ಯವಾಯಿತು. ಇಷ್ಟಾದರೂ ಜಾಗತೀಕರಣದ ಭಾಷೆ ಎಂದರೆ ವಿವಿಧ ಮೂಲಗಳಿಂದ ಶಿಕ್ಷಣವನ್ನು ಕಲಿಯುವುದು, ತಂಡ ತಂಡವಾಗಿ ಕೆಲಸ ಮಾಡುವುದು, ಹೊಂದಿಕೊಳ್ಳುವುದು, ವಿಷಯಪ್ರಾವೀಣ್ಯತೆ ಹೀಗೆ... ಸುದ್ದಿ ಮತ್ತು ಸಂಪರ್ಕಗಳು ಬಹುಮುಖ್ಯವಾಗಿವೆ. ಬೇಗ ಸಂಪರ್ಕಿಸಿ ಬೇಗ ಸುದ್ದಿ-ಜಾಣತನವನ್ನು ಯಾವನು ಪಡೆಯುತ್ತಾನೋ ಆತನೇ ವಿಜಯೀ ಮನುಷ್ಯ.

ದೇಶದ ಗಾತ್ರಕ್ಕೆ ಹೋಲಿಸಿದರೆ ನಮ್ಮಲ್ಲಿರುವ ವಿಶ್ವವಿದ್ಯಾಲಯಗಳು ತುಂಬಾ ಕಡಿಮೆ ಪ್ರಮಾಣದಲ್ಲಿವೆ. ವಿದೇಶಕ್ಕೆ ಹೋಲಿಸಿದರೆ ಇದು ಏನೂ ಅಲ್ಲ. ಭಾರತದಲ್ಲಿ ೨೦೦೨ರಲ್ಲಿ ಯು.ಜಿ.ಸಿ. ವರದಿ ಪ್ರಕಾರ ೨೧೩ ವಿಶ್ವವಿದ್ಯಾನಿಲಯಗಳು ಮತ್ತು ೫೨ ಡೀಮ್ಡ್ ವಿಶ್ವವಿದ್ಯಾನಿಲಯಗಳಿದ್ದರೆ, ಸಣ್ಣ ಸಣ್ಣ ರಾಷ್ಟ್ರಗಳಾದ ಜಪಾನ್‌ನಲ್ಲಿ ೬೮೪ ವಿಶ್ವವಿದ್ಯಾಲಯಗಳು (೫೧೨ ಖಾಸಗಿ), ಅಮೆರಿಕಾದಲ್ಲಿ ೨೩೬೪ (ಖಾಸಗಿ ೧೭೫೨), ಬ್ರಿಟನ್‌ನಲ್ಲಿ ೧೦೪ ವಿಶ್ವವಿದ್ಯಾಲಯಗಳು ಮತ್ತು ೨೩೧ ಸ್ವಾಯತ್ತ ಸಂಸ್ಥೆಗಳು ಇವೆ.

ಜರ್ಮನಿಯಲ್ಲಿ ೩೩೦ ವಿಶ್ವವಿದ್ಯಾನಿಲಯಗಳಿವೆ. ನಮ್ಮ ದೇಶದ ವಿಶ್ವವಿದ್ಯಾನಿಲಯಗಳು ತಮ್ಮ ಸಂಯೋಜನೆಯಲ್ಲಿರುವ ಅಸಂಖ್ಯಾತ ಕಾಲೇಜುಗಳನ್ನು ನೋಡಿಕೊಳ್ಳುವುದರಲ್ಲಿಯೇ ತಮ್ಮ ಎಲ್ಲಾ ಶಕ್ತಿಯನ್ನು ವ್ಯಯ ಮಾಡುತ್ತಿವೆ. ಆಂಧ್ರ ವಿಶ್ವವಿದ್ಯಾನಿಲಯಕ್ಕೆ ೪೦೫ ಕಾಲೇಜುಗಳು, ಉಸ್ಮಾನಿಯಕ್ಕೆ ೩೯೦, ಅಣ್ಣಾ ವಿಶ್ವವಿದ್ಯಾನಿಲಯಕ್ಕೆ ೨೩೨, ಕರ್ನಾಟಕದಲ್ಲೇ ಬೆಂಗಳೂರು ವಿಶ್ವವಿದ್ಯಾನಿಲಯಕ್ಕೆ ೩೭೫ ಕಾಲೇಜುಗಳು ಸಂಯೋಜನೆಗೆ ಒಳಗೊಂಡಿವೆ. ಒಂದು ವಿಶ್ವವಿದ್ಯಾನಿಲಯ ಹೀಗೆ ಸಂಯೋಜನೆ ಕೆಲಸದಲ್ಲಿ ಬಹುಕಾಲ ತೊಡಗಿಕೊಂಡಾಗ ಸ್ವಾಭಾವಿಕವಾಗಿಯೇ ಇದು ಸಂಶೋಧನೆ ಇನ್ನಿತರ ಶೈಕ್ಷಣಿಕ ಕೆಲಸಗಳನ್ನು ಸಂಪೂರ್ಣವಾಗಿ ತಿಂದುಹಾಕುತ್ತದೆ. ಹೀಗೆ ನಮ್ಮ ವಿಶ್ವವಿದ್ಯಾನಿಲಯಗಳು ಈ ಸಂಯೋಜನೆಯ ಹೆಣಭಾರದಿಂದ ಹೂತುಹೋಗುತ್ತವೆ. ಇನ್ನು ಶೈಕ್ಷಣಿಕ ವ್ಯಾಯಾಮವನ್ನು ಮಾಡುವುದಾದರೂ ಹೇಗೆ ?

ನಮ್ಮ ದೇಶಕ್ಕೆ ೨೦೦೫ನೇ ಇಸವಿ ಶಿಕ್ಷಣದ ದೃಷ್ಟಿಯಿಂದ ತುಂಬಾ ಮಹತ್ವದ ವರುಷ. ರಾಷ್ಟ್ರೀಯ ಪ್ರಗತಿಗೂ ಮತ್ತು ಶಿಕ್ಷಣಕ್ಕೂ ಒಂದು ಅನನ್ಯ ಅವಿನಾಭಾವ ಸಂಬಂಧ ಇದೆ ಎಂಬುದು ಜಗತ್ತಿನ ಅನೇಕ ರಾಷ್ಟ್ರಗಳಿಗೆ ತಿಳಿದ ನಂತರ ನಮ್ಮ ದೇಶದ ಆಡಳಿತಗಾರರು, ಸರ್ಕಾರದವರು ತಮ್ಮ ಕುಂಭಕರ್ಣ ನಿದ್ರೆಯಿಂದ ಎಚ್ಚೆತ್ತಿದ್ದಾರೆ. ಅನಕ್ಷರಸ್ಥ ಸಮಾಜವನ್ನು ಜ್ಞಾನಸಮಾಜ (Knowledge Society)ದೆಡೆಗೆ ನಡೆಸುವ ದಾರಿ ಶಿಕ್ಷಣ ಮಾತ್ರ ಎಂಬುದು ಬಹಳ ತಡವಾಗಿಯಾದರೂ ಅರ್ಥವಾಗಿದೆ. ಆದುದರಿಂದ ಶಿಕ್ಷಣಕ್ಕೆ ನೇರ ಸಂಬಂಧಿಸಿದ ಶಿಕ್ಷಣ ಮಸೂದೆ, ಶಾಲಾ ಶಿಕ್ಷಣ ಪಠ್ಯಕ್ರಮ ರಾಷ್ಟ್ರೀಯ ಸಮಿತಿ ಎಲ್ಲಾ ರಭಸದಲ್ಲಿ ಆರಂಭವಾಗಿವೆ.

ಮಾನವ ಸಂಪನ್ಮೂಲ ಇಲಾಖೆಗೆ ಗೊತ್ತಿರಬೇಕು.



## ಕೊಳಲ ನುಡಿಸುವವರು



ಅವನ ಕೊಳಲು
ದೊಡ್ಡ ಹೋರಿಯ ಹಿಂಗಾಲ ತೊಡೆ ಮೂಳೆ
ಯಿಂದ ಕಡಿದು ತೆಗೆದದ್ದು
ಥಣ್ಣನೆಯ ಬೆಟ್ಟ ತಪ್ಪಲಿನಲ್ಲಿ
ಮೆರಗು ಪಡೆದದ್ದು
ಸೂರ್ಯನ ಬಿಸಿಲಿನಲ್ಲಿ ಪಳಗಿಸಿದ್ದು

ಅವಳ ಕೊಳಲು
ಸುಳಿಗಾಳಿಗೆ ನಡುಗುವ ದಂಟಿನಿಂದ ಕಡಿದು
ಹರಿವ ನದಿಯ ದಂಡೆ ಉಸುಕಿನಲ್ಲಿ
ಪಳಗಿಸಿದ್ದು
ಬೆಳದಿಂಗಳ ಕನಸುಗಳಲ್ಲಿ
ಅದ್ದಿ ತೆಗೆದದ್ದು

ಸಂಜೆಯ ಅಂತರಾಳಗಳಲ್ಲಿ
ಅವರು ಒಟ್ಟಾಗಿ ಕೊಳಲ ನುಡಿಸುವಾಗ
ಆಕಾಶದ ಗೂಡುದೋಣಿ ಬೋರಲಾಗಿ
ಪ್ರಳಯದಿಂದ ಅವರನ್ನು ರಕ್ಷಿಸುತ್ತದೆ

ಆದರೆ ಈ ಶೋಕಗೀತೆಗಳು
ವಾಯುದೇವತೆಗಳನ್ನು, ಭೂದೇವತೆಗಳನ್ನು
ವನದೇವತೆಗಳನ್ನು
ಈ ಮಣ್ಣದೇವತೆಗಳನ್ನು ಮುಟ್ಟುತ್ತವೆಯೇ ?

ಅವನ ಕೊಳಲು
ಹೊಸ ರಾಗಗಳನ್ನು ತೇಲಿಸಿದಂತೆ
ಕಿವಿಗೆ ಹುಚ್ಚುದನದ ಪಾದಾಘಾತಗಳು
ಕೇಳಿಸುತ್ತವೆ

ಮರುಭೂಮಿಯ ಕಡೆಗೆ
ಆರ್ಭಟಿಸಿ ನಡೆಯುವ ಮತ್ತು
ಹಿಂದಕ್ಕೆ ಬರುವ ಉನ್ಮತ್ತ ಹೆಜ್ಜೆ ಸಪ್ಪಳ
ಹಸಿವು ಬಾಯಾರಿಕೆಗಳಿಂದ
ಸುಟ್ಟು ಆಯಾಸಗೊಂಡು
ಹಣ್ಣಿಲ್ಲದ, ನೆರಳಿಲ್ಲದ
ಕನಿಷ್ಠ ಎಲೆಗಳೂ ಇಲ್ಲದ
ಮರದ ಬುಡದಲ್ಲಿ ಬಿದ್ದಿದೆ.

ಅವಳ ಕೊಳಲು
ಹಾರುವ ಹಕ್ಕಿಯ ಭಾರಕ್ಕೆ ಬಾಗುವ ದಂಟು
ರೆಕ್ಕೆ ಬಡಿಯುತ್ತಿದೆ ಹಕ್ಕಿ ತಲ್ಲಣಿಸಿ
ಇದು ಆಟಕ್ಕಾಗಿ ಮಕ್ಕಳು ಬಲೆಬೀಸಿ
ಕೆಡವಿದ ಹಕ್ಕಿಯಲ್ಲ

ಗುಂಪುಕಳೆದು ಒಂಟಿಯಾದ ಹಕ್ಕಿ
ಹರಿವ ನದಿ ನೀರಿನಲ್ಲಿ
ತನ್ನ ಪ್ರತಿಬಿಂಬ ನೋಡುತ್ತಿದೆ
ಸಮಾಧಾನಕ್ಕಾಗಿ

ಅವನ ಕೊಳಲು
ಮತ್ತು ಅವಳದು
ಕಳೆದುಹೋದ ಕಾಲಕ್ಕಾಗಿ ಪರಿತಪಿಸುತ್ತಿದೆ
ತಮ್ಮ ವಿಷಾದ ಗೀತೆಗಳಲ್ಲಿ

ಆಫ್ರಿಕಾ ಮೂಲ : ಜೇನ್ ಜೋಸೆಫ್ ರಾಖಿಯರಿವೆಲೋ
ಕನ್ನಡಕ್ಕೆ : ಎನ್: ವೆಂಕಟಕೃಷ್ಣ
ನಂ. ೧೮೭೭, ಕಠಾರಿಪಾಳ್ಯ, ಕೋಲಾರ - ೫೬೩ ೧೦೧

ನಮ್ಮ ದೇಶದಿಂದ ವಿದೇಶಕ್ಕೆ ತೆರಳಿ ಶಿಕ್ಷಣ ಕಲಿಯಲು ಪ್ರತಿ ವರುಷ ಭಾರತೀಯ ವಿದ್ಯಾರ್ಥಿಗಳು ೯ ಸಾವಿರ ಕೋಟಿ ಖರ್ಚುಮಾಡುತ್ತಿದ್ದಾರೆ. ಇದು ೨೦೧೫ಕ್ಕೆ ೪೦ ಸಾವಿರ ಕೋಟಿಯಷ್ಟು ಹೆಚ್ಚಾಗುವ ನಿರೀಕ್ಷೆ ಇದೆ. ಈ ಸಮಸ್ಯೆಯನ್ನು ಹೇಗೆ ಎದುರಿಸಬಹುದು ಎಂಬುದು ಈ ಜಾಗತೀಕರಣದ ಹೊಸ್ತಿಲಲ್ಲಿ ಮುಖ್ಯ ಸವಾಲಾಗಿದೆ.

ಜಾಗತೀಕರಣ ಮಾರುಕಟ್ಟೆಯಲ್ಲಿ ಈಗ ಶಿಕ್ಷಣವೂ ಒಂದು ಸೇವಾ (Service) ವಿಷಯಕ್ಕೆ ಸೇರಿದೆ. ಹೀಗಾಗಿ ಅದು ಆರೋಗ್ಯ, ಬ್ಯಾಂಕುಗಳಂತೆ ಒಂದು ಸೇವೆಯ ವಿಷಯವೇ ಆದುದರಿಂದ ಇದು ಸಹ ಮುಕ್ತ ಮಾರುಕಟ್ಟೆಯಲ್ಲಿ ಸ್ಪರ್ಧಿಸಬೇಕಾಗುತ್ತದೆ. ಇಂಥ ಮುಕ್ತ ಮಾರುಕಟ್ಟೆಯನ್ನು ಎದುರಿಸಲು ಸಿದ್ಧರಾಗಲು ೨೦೦೫ನೇ ಇಸವಿಯವರಿಗೆ ಎಲ್ಲಾ ಸಹಿ ಮಾಡಿದ ದೇಶಗಳಿಗೆ ಗಡುವು ನೀಡಲಾಗಿತ್ತು. ಉಳಿದ ರಾಷ್ಟ್ರಗಳು ಎಚ್ಚೆತ್ತುಕೊಂಡು ಅನಿವಾರ್ಯ ಶತ್ರುವನ್ನು ಎದುರಿಸಲು ಸಜ್ಜಾದವು. ಆದರೆ ನಾವಿನ್ನೂ ಎದ್ದುನಿಲ್ಲಲು ಪ್ರಯತ್ನಿಸುತ್ತಿದ್ದೇವೆ. ನಾವಿನ್ನೂ ಅಂತರರಾಷ್ಟ್ರೀಯ ಶಿಕ್ಷಣ ಸೇವಾ ಸಂಬಂಧಪಟ್ಟ ವಿಷಯಕ್ಕೆ (IESP) ಸಹಿ ಹಾಕಬೇಕಾಗಿದೆ. ಇದಕ್ಕೆ ಸಹಿ ಮಾಡಿದ ದೇಶಗಳು ನಮ್ಮ ದೇಶಕ್ಕೆ ಬರುವ ಎಲ್ಲಾ ವಿದೇಶಿ ವಿಶ್ವವಿದ್ಯಾನಿಲಯಗಳಿಗೆ ಅಥವಾ ಕಾಲೇಜುಗಳಿಗೆ ಒಂದು ಮಾರ್ಗದರ್ಶಕ ಸೂತ್ರವನ್ನು ರಚಿಸಬೇಕಾಗುತ್ತದೆ. ಇಂಥಾ ಪ್ರಾದೇಶಿಕ ನಿಯಮ (Domestic Education Service Providers) ಮಾಡಬೇಕಾಗುತ್ತದೆ. ಹೀಗಾಗಿ ಮುಕ್ತ ಮಾರುಕಟ್ಟೆ ಎಂದರೆ ಜಗತ್ತಿನ ಯಾವುದೇ ದೇಶದ ಯಾವುದೇ ವಿಶ್ವವಿದ್ಯಾನಿಲಯ ಅಥವಾ ಕಾಲೇಜು ತೆರೆಯಬೇಕಾದರೆ ಆಯಾ ದೇಶದ ಪ್ರಾದೇಶಿಕ ನಿಯಮವನ್ನು ಪರಿಪಾಲಿಸಬೇಕಾಗುತ್ತದೆ. ಇಂಥ ಪ್ರಾದೇಶಿಕ ನಿಯಮವನ್ನು ಪರಿಪಾಲಿಸದಿದ್ದರೆ ಅಂಥಾ ವಿಶ್ವವಿದ್ಯಾನಿಲಯ ಅಥವಾ ಕಾಲೇಜು ಬೇರೆ ದೇಶದಲ್ಲಿ ಶಾಖೆಯನ್ನು ತೆರೆಯುವಂತಿಲ್ಲ. ಆದರೆ ಬಹಳ ಮುಖ್ಯ ವಿಷಯವೆಂದರೆ ಪ್ರಾದೇಶಿಕ ನಿಯಮವು ಬರಿಯ ವಿದೇಶಿಗಳಲ್ಲದೆ ಆಯಾ ದೇಶದ ಕಾಲೇಜು ಅಥವಾ ವಿಶ್ವವಿದ್ಯಾನಿಲಯಕ್ಕೂ ಅನ್ವಯಿಸುತ್ತದೆ. ಇಲ್ಲಿ, ವಿದೇಶಿ ಅಥವಾ ದೇಶಿ ಎಂದು ಬೇರೆ ಮಾಡುವಂತಿಲ್ಲ. ಮುಕ್ತ ಮಾರುಕಟ್ಟೆ ಎಂದರೆ ಭೇದ ಭಾವ ಇಲ್ಲದ ಮಾರುಕಟ್ಟೆ. ಇದೇ ಜಾಗತೀಕರಣದ ಸ್ವಾರಸ್ಯ. ಆದಕಾರಣ ವಿಶ್ವದ ಮೂರನೇ ದರ್ಜೆಯ ಕಾಲೇಜು ಅಥವಾ ವಿಶ್ವವಿದ್ಯಾನಿಲಯವೂ ಸಹ ಇಲ್ಲಿ ತ್ರಿಬಣ್ಣದ ಬೋರ್ಡು ಹಾಕಿ, ಬಾಡಿಗೆ ಕಟ್ಟಡ ಹಿಡಿದು, ವರ್ಣಮಯ ಕರಪತ್ರ ಹಂಚಿದರೆ ಕಕ್ಕಾಬಿಕ್ಕಿಯಾದ ಭಾರತದ ಯುವಜನರನ್ನು ದಾರಿತಪ್ಪಿಸಲು ಸಾಕಾಗುತ್ತದೆ. ಹೀಗೆ ಅಮಾಯಕ ವಿದ್ಯಾರ್ಥಿಗಳನ್ನು ತಮ್ಮ ಬಣ್ಣದ ಬಲೆಗಳಿಗೆ ತಮ್ಮ ಹೊಸ ಬಗೆಯ ಕೋರ್ಸಿನ ಹೆಸರಿನಲ್ಲಿ ಆಕರ್ಷಿಸುವುದು ಇಂಥ ಒಂದು ಭಾರತೀಯ ಪ್ರಾದೇಶಿಕ ನಿಯಮವನ್ನು ಮಾಡಿಕೊಂಡಿಲ್ಲದಿರುವುದರಿಂದ. ನಾಳೆ ಇಂಥ ವಿದೇಶಿ ಶಿಕ್ಷಣ ಸಂಸ್ಥೆಗಳು ಎಲ್ಲ ಹಣ ತಿಂದುಹಾಕುವ ಭಾರತದ ಜನಪ್ರಿಯ ಬ್ಲೇಡ್ ಸಂಸ್ಥೆಯಾದರೆ ಯಾರನ್ನೂ ಯಾರೂ ಕೇಳುವಂತಿಲ್ಲ. ನಾಳೆ ಇಂಥ ವಿದೇಶಿ ಶಿಕ್ಷಣ ಸಂಸ್ಥೆಗಳು ನಮ್ಮ ಸಮಾಜವನ್ನು ಮಂಗಮಾಡಿದರೆ, ನಮ್ಮ ಈಗಿನ ಅಜಾಗರೂಕತೆಗಾಗಿ ನಾಳೆ ತುಂಬಾ ಬೆಲೆ ಕಟ್ಟಬೇಕಾಗುತ್ತದೆ. ನಾವು ವಿಶ್ವ ಮಾರುಕಟ್ಟೆ ಸಂಸ್ಥೆಯ ನಿಯಮಕ್ಕೆ ಸಹಿ ಹಾಕಿರದಿದ್ದರೆ ಜಗತ್ತಿನ ಉಸಾಬರಿಗಳನ್ನು ಮರೆತು ಕೂರಬಹುದಿತ್ತು: ಈಗ ಅಮೆರಿಕಾ ಪಕ್ಕಕ್ಕೆ ಕ್ಯೂಬಾ ದೇಶವಿರುವಂತೆ. ಇದಕ್ಕೆ ಅಪಾರ ಅಧ್ಯಯನ ಬೇಕು ; ಅಚಲ ನಾಯಕತ್ವ ಬೇಕು ; ರಾಜಕೀಯ ಇಚ್ಛಾಶಕ್ತಿ ಬೇಕು.

ನಮ್ಮ ದೇಶದ ಸಮಗ್ರ ಶಿಕ್ಷಣಕ್ಕೆ ಪೂರ್ವ ಕಾಯಕಲ್ಪ ನೀಡೋಣ ಎಂದರೆ ಅದು ಸಾಮಾನ್ಯ ಮಾತಲ್ಲ. ಶಿಕ್ಷಣಕ್ಕೆ ನಾವು ಜಿ.ಡಿ.ಪಿ. (GDP)ಯ ಶೇಕಡಾ ೬ರಷ್ಟು ಖರ್ಚು ಮಾಡಬೇಕಾದರೆ ಎಲ್ಲೆಲ್ಲಿಂದಲೋ ಹಣ ಒಟ್ಟುಮಾಡಬೇಕಾಗುತ್ತದೆ. ಆದರೆ ಅದೇ ಮುಂದುವರಿದ ರಾಷ್ಟ್ರಗಳಲ್ಲಿ ಇದು ತುಂಬಾ ಹೆಚ್ಚಾಗಿದೆ (ಉದಾಹರಣೆಗೆ, ಅಮೆರಿಕಾ). ಆದರೆ ಇದೇ ಒಂದು ಮಾನದಂಡವಲ್ಲ. ಈ ರೀತಿ ಹಣ ಹೆಚ್ಚು ಖರ್ಚು ಮಾಡಿದವರು ಶಿಕ್ಷಣದಲ್ಲಿ ಭಾರಿ ಸಾಧನೆ ಮಾಡಿದ್ದಾರೆಂದೇನಿಲ್ಲ. ಉದಾಹರಣೆಗೆ, ದಕ್ಷಿಣ ಕೋರಿಯಾದಲ್ಲಿ ಶೇಕಡಾ ೩.೨, ಜಪಾನ್‌ನಲ್ಲಿ ೩.೮, ಚೀನಾದಲ್ಲಿ ೨.೬ ಶಿಕ್ಷಣಕ್ಕಾಗಿ ಖರ್ಚು ಮಾಡಲಾಗುತ್ತಿದೆ. ಆದರೆ, ಈ ದೇಶದಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಸಾಧಿಸಿದ ಸಾಧನೆ ನೋಡಿದರೆ ಅಚ್ಚರಿ ಮೂಡುತ್ತದೆ. ಆದುದರಿಂದ ಹಣವನ್ನು ಎಷ್ಟು ಮೀಸಲಾಗಿಟ್ಟಿದ್ದೇವೆ ಎನ್ನುವುದಕ್ಕಿಂತ ಎಷ್ಟು ರಚನಾತ್ಮಕವಾಗಿ ಖರ್ಚು ಮಾಡುತ್ತೇವೆ ಎಂಬುದು ಬಹುಮುಖ್ಯ. ಇಲ್ಲದಿದ್ದರೆ ಆಕರ್ಷಕ ಯೋಜನೆಯ ಹೆಸರಿನಲ್ಲಿ ಸಾಮೂಹಿಕ ಹಣ ಪೂರ್ತಿ ಚರಂಡಿಯ ಪಾಲಾಗುತ್ತದೆ.

ಪ್ರಸಿದ್ಧ ವಿದ್ವಾಂಸರಾದ ಗೀತ ಗಾಂಧಿಯವರು ೧೯೯೬ರಲ್ಲಿ ಉತ್ತರ ಪ್ರದೇಶದಲ್ಲಿ ಶಿಕ್ಷಣದ ಬಗ್ಗೆ ಒಂದು ಸಂಶೋಧನೆ ನಡೆಸಿದರು. ಅವರ ಪ್ರಕಾರ ಖಾಸಗಿ ಅನುದಾನ ರಹಿತ ಶಾಲೆಗಳಲ್ಲಿ ಒಂದು ವರ್ಷಕ್ಕೆ ಒಬ್ಬನಿಗೆ ೯೯ ರೂ. ಖರ್ಚಾದರೆ, ಖಾಸಗಿ ಅನುದಾನ ಶಾಲೆಯಲ್ಲಿ ವರ್ಷಕ್ಕೆ ೧೮೨೬ ರೂ. ಮತ್ತು ಸರ್ಕಾರಿ ಶಾಲೆಗಳಲ್ಲಿ ೨೦೦೮ ರೂ. ಖರ್ಚಾಗುತ್ತವೆ ಎನ್ನುವ ವಿಸ್ಮಯ ಸಂಗತಿಯನ್ನು ಹೊರಗೆಡಹಿದರು. ಆದರೆ ಕಲಿಕೆಯಲ್ಲಿ ಇದು ತದ್ವಿರುದ್ಧವಾಗಿದೆ.

ಜಡ್ಡುಗಟ್ಟಿ ಕೊಳೆತುಹೋಗುತ್ತಿರುವ ಸಮಾಜವನ್ನು ಸರಿದಾರಿಗೆ ತರುವುದು ಹೇಗೆ ಎಂದು ಚಿಂತಿಸುವಾಗ ಎಲ್ಲಾ ಕಡೆ ವಿಶ್ವವಿದ್ಯಾನಿಲಯವನ್ನು ತೆರೆದು ದೇಶದ ಸಾರೋದ್ಧಾರವನ್ನು ಸಾಧಿಸಬಹುದೆಂಬ ಭ್ರಮೆಯಲ್ಲಿ ಕೆಲವು ಸರ್ಕಾರಗಳು ಖಾಸಗಿ ವಿಶ್ವವಿದ್ಯಾನಿಲಯಗಳನ್ನು ಸ್ಥಾಪಿಸಲು ಅನುಮತಿ ನೀಡಿದವು. ಛತ್ತೀಸ್‌ಘಡ್‌ಅನ್ನೇ ನೋಡಿ, ನೂತನ ರಾಜ್ಯಕ್ಕೆ ಕಾಂಗ್ರೆಸ್ ಪಕ್ಷದ ಮುಖ್ಯಮಂತ್ರಿಯವರಾದ ಅಜಿತ್ ಜೋಗಿಯವರು ಸ್ವಯಂ ಘೋಷಿತ ಖಾಸಗಿ ವಿಶ್ವವಿದ್ಯಾನಿಲಯ ಸ್ಥಾಪಿಸಲು ಅವಕಾಶ ನೀಡುವ 'ಖಾಸಗಿ ವಿಶ್ವವಿದ್ಯಾಲಯ ಅಧಿನಿಯಮ'ವನ್ನು ೨೦೦೨ರಲ್ಲಿ ತಂದರು. ಇದರ ಪ್ರಕಾರ ಸರ್ಕಾರ ಕೇವಲ ಸಮ್ಮತಿಸಿ ಪ್ರಕಟಣೆ ಹೊರಡಿಸಿದರೆ ದೇಶದ ಯಾವುದೇ ಸ್ಥಳದಿಂದ ವಿದ್ಯಾರ್ಥಿಗಳನ್ನು ಸೇರಿಸಿಕೊಂಡು ಪದವಿ ನೀಡುವ ಖಾಸಗಿ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಲು ಖಾಸಗಿಯವರಿಗೆ ಅಧಿಕಾರ ನೀಡಬಹುದು. ಸರ್ಕಾರವೇ ನೇರವಾಗಿ ಹೀಗೆ ವಿಶ್ವವಿದ್ಯಾನಿಲಯಕ್ಕೆ ಲೈಸೆನ್ಸ್ ನೀಡಬಹುದಾದರೆ ಏನೇನು ಅನಾಹುತಗಳಾಗಬಹುದು! ಇದರ ಪರಿಣಾಮ ಏನಾಯಿತು ಎಂದರೆ ೧೧೨ ಖಾಸಗಿ ವಿಶ್ವವಿದ್ಯಾನಿಲಯಗಳು ಸ್ಥಾಪನೆಗೊಂಡು ಒಂದು ಕ್ರಾಂತಿಯನ್ನೇ ಉಂಟುಮಾಡಿತು ಅಜಿತ್ ಜೋಗಿ ಸರ್ಕಾರ. ಇಡೀ ಶಿಕ್ಷಣ ಲೋಕ ಬೆಚ್ಚಿಬಿದ್ದಿದ್ದು ಆಗ. ಇದರ ಪ್ರತಿನಿಧಿಯಂತೆ ಆಕ್ರೋಶಗೊಂಡ ಶಿಕ್ಷಣ ತಜ್ಞ ಪ್ರೊ॥ ಯಶ್‌ಪಾಲ್ ಅವರು ಇಂಥ ಕ್ರಮದ ವಿರುದ್ಧ ಸರ್ವೋಚ್ಚ ನ್ಯಾಯಾಲಯಕ್ಕೆ ಮೊರೆ ಇಟ್ಟರು. ನ್ಯಾಯಾಲಯ ಸರ್ಕಾರದ ಇಂಥ ಕ್ರಮದ ವಿರುದ್ಧ ತೀರ್ಪು ನೀಡಿ ಎಲ್ಲಾ ಖಾಸಗಿ ವಿಶ್ವವಿದ್ಯಾನಿಲಯಗಳನ್ನು ಸ್ಥಾಪಿಸುವ ಸರ್ಕಾರದ ಆದೇಶವನ್ನು ವಜಾ ಮಾಡಿತು. ಇದರ ಪರಿಣಾಮವೇನೆಂದರೆ, ನೋಂದಾಯಿಸಿಕೊಂಡ ೩೦ ಸಾವಿರ ವಿದ್ಯಾರ್ಥಿಗಳು ಮತ್ತು ನೇಮಕಾತಿ ಹೊಂದಿದ ೧೦೦೦ ಶಿಕ್ಷಕರು ಕಂಗಾಲಾಗಿ ರಸ್ತೆಯ ಮೇಲೆ ಬಿದ್ದರು. ಈಗ ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ಇಲಾಖೆಯು ಸುಪ್ರೀಮ್ ಕೋರ್ಟಿನ ತೀರ್ಪಿನ ಅನಾಹುತವನ್ನು ಗಮನಿಸಿ ವಿಶ್ವವಿದ್ಯಾನಿಲಯ ಧನಸಹಾಯ ಆಯೋಗ ಸಮ್ಮತಿಸಿದ ವಿಶ್ವವಿದ್ಯಾನಿಲಯಕ್ಕೆ ಈ ವಿದ್ಯಾರ್ಥಿಗಳನ್ನು ಸೇಪರ್ಡೆಗೊಳಿಸಲು ಪರಿಹಾರ ಕಂಡುಹಿಡಿಯುತ್ತಿದೆ.

ನಮ್ಮ ದೇಶದ ವಿರೋಧಾಭಾಸದ ಸಂಗತಿ ಎಂದರೆ ಇಲ್ಲಿನ ಜನಸಂಖ್ಯೆಯ ಶೇಕಡಾ ೩೫ರಷ್ಟು ಜನರಿಗೆ ಬರೆಯಲು ಬರುವುದಿಲ್ಲ. ಆದರೆ ಜಗತ್ತಿನ ತಾಂತ್ರಿಕ ಕೌಶಲ್ಯದ ಮಾರುಕಟ್ಟೆಯಲ್ಲಿ ನಮ್ಮ ದೇಶದವರದೇ ಮೇಲುಗೈ! ಜಗತ್ತು ನಮ್ಮ ಕಡೆ ನೋಡುತ್ತಿದೆ. ಯಾಕೆಂದರೆ, ಭಾರತದಲ್ಲಿ ಜಗತ್ತಿನ ಶೇಕಡಾ ೨೦ರಷ್ಟು ಜನರು ೨೪ ವರುಷದಿಂದ ಕೆಳಗಿನವರು, ಶೇಕಡಾ ೫೦ರಷ್ಟು ಭಾರತೀಯರು ತಮ್ಮ ಕೆಲಸ ಮಾಡುವ ವಯಸ್ಸಿನಲ್ಲಿದ್ದಾರೆ. ಮೂರನೇ ಒಂದರಷ್ಟು ಜನರು ೧೪ ವರುಷದಿಂದ ಕೆಳಗಿನವರು. ಒಂದು ಹೇಳಿಕೆಯ ಪ್ರಕಾರ ೨೦೨೦ರಲ್ಲಿ ಭಾರತ ಅತ್ಯಂತ ಕಿರಿಯ ದೇಶವಾಗಲಿದೆ. ಅಂದರೆ ಭಾರತದಲ್ಲಿ ಜಗತ್ತಿನ ಒಟ್ಟು ಜನಸಂಖ್ಯೆಯ ಯುವಕರಿಗಿಂತ ಹೆಚ್ಚು ಯುವಕರು ನಮ್ಮದೇ ದೇಶದಲ್ಲಿರುತ್ತಾರೆ. ಅವರೆಲ್ಲರನ್ನೂ ಸದೃಢಗೊಳಿಸಲು ಶಿಕ್ಷಣ ಯಜ್ಞದ ಸಂಕಲ್ಪವಾಗಬೇಕಾಗಿದೆ.

ಡಾ॥ ಜಯಪ್ರಕಾಶ ಮಾವಿನಕುಳಿ
ಪ್ರೊಫೆಸರ್, ಮಹಾವೀರ ಕಾಲೇಜ್, ಮೂಡುಬಿದಿರೆ - ೫೬೪ ೧೯೬

## ಗುನ್ಯಾ

ಈಗ
ಎಲ್ಲೆಲ್ಲೂ
ಚಿಕೂನ್, ಟೊಮ್ಯಾಟೊ
ಮಂಕಿ ಗುನ್ಯಾ
ಹಾವಳಿ
ಇದರಿಂದ
ಅಸಲಿ – ನಕಲಿ
ವೈದ್ಯರಿಗೆ
ಭಾರಿ
ಬಳುವಳಿ

ಮಲ್ಲೇಶ ಡಿ. ಎಚ್.
ಶಿಕ್ಷಕರು, 'ದುರ್ಗಾಸುತ', ಜವಳಿಗಲ್ಲಿ, ಗದಗ - ೫೮೨ ೧೦೧

# ಆದಿ ದೈವ ಲೆಕ್ಕಿಸಿರಿ ಅನಾದಿ ದೈವ ತನ್ನಿಮಾನಿಗ

**'ಹೊಸತು' ಜುಲೈ ೨೦೦೫ರ ಸಂಚಿಕೆಯಲ್ಲಿ ಶ್ರೀಮತಿ ಕೆ. ಸಾವಿತ್ರಿಯವರು 'ತನ್ನಿಮಾನಿಗ' ಬಗ್ಗೆ ಬರೆದ ಲೇಖನವನ್ನು ಪ್ರಕಟಿಸಲಾಗಿತ್ತು. ಅದನ್ನು ಕುರಿತು ಮುಂದುವರಿದ ಚರ್ಚೆ ಇಲ್ಲಿದೆ.**

*ಬಡಗು ಗಂಗೆಯಿಂದ ತೆಂಕು ರಾಮೇಶ್ವರದವರೆಗೆ*
*ಮೂಡಲ ಕಾವೇರಿ ಗಟ್ಟದಿಂದ, ಪಡುವಲ ಹೊರಳು ಮರಳಿನವರೆಗೆ,*

*ಕಟ್ಟಿದ ಮನೆ; ತೆರೆದ ಬಾಗಿಲು;*
*ಗಡಿ ಹಾಕಿದ ಜಾಗದಲ್ಲಿ; ನಾಗ ಹೆಡೆಯ ಪಾಡಿಯಲ್ಲಿ*
*ಬೆರ್ಮೆರ ಲಿಂಗ ಗದ್ದುಗೆಯ ಬಳಿ*
*ಬಲಿ ನೇಮ ಪಡೆಯುವ ಸತ್ಯಗಳು ನಾವು*

ಮೇಲಿನ ಪದ್ಯ ಲೆಕ್ಕಿಸಿರಿ ಪಾಡ್ದನದ ಅನುವಾದ. ಬೆರ್ಮೆರು ಗದ್ದುಗೆಯ ಮೇಲೆ ಕುಳಿತರೆ ಆತನ ಪರಿವಾರ ದೈವಗಳಾಗಿ ಕ್ಷೇತ್ರಪಾಲ, ನಂದಿ, ನಾಗ, ರಕ್ತೇಶ್ವರಿ ಖಂಡಿತವಾಗಿ ಇರುತ್ತವೆ. ಇವುಗಳ ಜೊತೆಗೆ ಬೇರೆ ಕೆಲವು ದೈವಗಳು ಇರುತ್ತವೆ. ಈ ಬೆರ್ಮೆರ ಉಗಮಸ್ಥಾನವನ್ನು ಆಲಡೆ ಎಂದು ಕರೆಯುತ್ತಾರೆ. ಆಲ ಎಂದರೆ ನೀರಿರುವ ಪ್ರದೇಶ ಎನ್ನುತ್ತಾರೆ ವಿದ್ವಾಂಸರು. ನಾಗರಾಲ ಎಂಬ ಹೆಸರು ಕರ್ಣಾಟಕದ ಅನೇಕ ಕಡೆ ಇದೆ. ಆಲಡೆ ಎಂದರೆ ಆಳುವ ಎಡೆ ಎಂಬ ಅರ್ಥವೂ ಬರುತ್ತದೆ. ಈ ಅರ್ಥದಲ್ಲಿ ಆಲದ ಬೆರ್ಮೆರ್ ಎಂದರೆ ಆಳುವ ಬೆರ್ಮೆ. ತುಳುನಾಡಿನ ಸೀಮೆ ದೈವಗಳ ಹೆಸರಲ್ಲಿ ಗುತ್ತಿನ ಪಟ್ಟದ ದೈವಗಳ ಹೆಸರಲ್ಲಿ ಅವುಗಳ ಪಟ್ಟದ ಪ್ರತಿನಿಧಿ ಆಡಳಿತ ನಡೆಸುವಂತೆ ಬೆರ್ಮೆರ ಹೆಸರಲ್ಲಿ ಹಿಂದೆ ಆಡಳಿತ ನಡೆದಿರಬೇಕು. ಆಳುಪರೂ ಕೂಡ ಬೆರ್ಮೆರ ಭಕ್ತರಾಗಿದ್ದರು ಎಂಬುದನ್ನು ಶಾಸನಗಳಿಂದ ತಿಳಿಯ ಬಹುದು. ಇಂತಹ ಸ್ಥಳಗಳು ಜಾತಿ ಕುಲ ಎನ್ನದೆ ಒಟ್ಟು ಮಾನವ ಸಮುದಾಯವನ್ನು ಪ್ರತಿನಿಧಿಸುತ್ತವೆ. ಇಂತಹ ಕಡೆಯೇ ಧರ್ಮ ನಡಾವಳಿ, ಧರ್ಮ ಮೆಚ್ಚಿ, ಧರ್ಮ ನೇಮ ನಡೆಯುವುದು. ಇಲ್ಲಿ ಧರ್ಮ ಎಂದರೆ ಇಂಗ್ಲಿಷಿನ religion ಅಲ್ಲ. ಮಾನವನು ಸುಖವಾಗಿ ಬದುಕಲು ಉತ್ತಮ ವಾತಾವರಣ ನಿರ್ಮಿಸುವುದು. ಇದು ಧರ್ಮದ ಪರಿಭಾಷೆ. ಆದ್ದರಿಂದಲೇ ಧರ್ಮ ನಡಾವಳಿ, ಧರ್ಮ ನೇಮ, ಧರ್ಮ ಮೆಚ್ಚಿ – ಇವುಗಳಿಗೆ ಎಲ್ಲ ಧರ್ಮದವರಿಗೂ ಪ್ರವೇಶ ಉಂಟು. ಧರ್ಮ ನಡಾವಳಿ ನಡೆಯುವುದು ಧರ್ಮ ದೈವಗಳಿಗೆ (ಧರ್ಮಸ್ಥಳದ ಧರ್ಮ ನಡಾವಳಿ ಮಹಾ ನಡಾವಳಿ ಅನ್ನಿಸಿಕೊಂಡರೂ ಧರ್ಮ ದೈವಗಳು ಉದ್ದಕ್ಕೂ ಧರ್ಮ ನಡಾವಳಿ ಎಂದೇ ಕರೆದಿವೆ) ಧರ್ಮ ನಡಾವಳಿ, ಧರ್ಮ ನೇಮ, ಧರ್ಮ ಮೆಚ್ಚಿ ಮುಂತಾದ ವಿಶೇಷ ಆಚರಣೆಗಳು ತುಳುನಾಡಿನ ಸ್ಥಳೀಯ ದೈವಗಳಿಗಲ್ಲದೆ ದೇವರಿಗಲ್ಲ. ತುಳುನಾಡಿನ ದೈವಗಳ ಕೆಲಸ ಸತ್ಯಕ್ಕೆ ಚ್ಯುತಿ ಉಂಟಾಗದಂತೆ ಧರ್ಮಕ್ಕೆ ಬಾಧೆಯಾಗದಂತೆ ಎಲ್ಲ ಜನರು ನೆಮ್ಮದಿಯಿಂದ ಬಾಳುವಂತಹ ವಾತಾವರಣ ನಿರ್ಮಿಸುವುದು. ಸ್ಥಳೀಯ (ಆಡಳಿತಾತ್ಮಕ) ದೈವಗಳಿಗೆ ಎಲ್ಲರೂ ಪ್ರಜೆಗಳು. ಆದುದರಿಂದ ಅವರಿಗೆ ಎಲ್ಲರೂ ಸಮಾನರು. ಹಿಂದು, ಮುಸ್ಲಿಮ್, ಕ್ರೈಸ್ತ – ಹೀಗೆ ಎಲ್ಲಾ ಧರ್ಮದವರಿಗೂ ಇಲ್ಲಿ ಪ್ರವೇಶ ಉಂಟು, ಗೌರವ ಉಂಟು. ಎಲ್ಲ ಧರ್ಮ, ಜಾತಿ ವರ್ಗಗಳಿಗೂ ಅಜಲಿನ ಅಧಿಕಾರ ಉಂಟು. ವೈದಿಕ ದೇವಾಲಯಗಳಲ್ಲಿ ಇರುವಂತೆ ಇಲ್ಲಿ ಯಾರಿಗೂ ಪ್ರವೇಶ ನಿರಾಕರಿಸುವುದಿಲ್ಲ. ಯಾರ ಹರಕೆಯನ್ನೂ ನಿರಾಕರಿಸು ವುದಿಲ್ಲ. ಹಾಗೆ ಮಾಡಿದರೆ ಧರ್ಮ ನಡಾವಳಿ, ಧರ್ಮ ಮೆಚ್ಚಿ, ಧರ್ಮ ನೇಮ ತನ್ನ ಅರ್ಥ ಕಳೆದುಕೊಳ್ಳುತ್ತದೆ. ಆಗ ದೈವ ಮುನಿಯುತ್ತದೆ. ತುಳುನಾಡಿಗೆ religion ಪ್ರವೇಶವಾಗುವ ಮೊದಲು ಇದ್ದ ವಾಸ್ತವ ಸ್ಥಿತಿಗೆ ಆದಿ ಬೆರ್ಮೆರ ತಾಣಗಳಲ್ಲಿ ಕೂಡು ಕಟ್ಟುಗಳ ದೈವತಾಣಗಳಲ್ಲಿ ನಡೆಯುವ ಆರಾಧನೆ ಕನ್ನಡಿ ಹಿಡಿಯುತ್ತದೆ. ಬ್ರಾಹ್ಮಣರು ಪೂಜೆಗಾಗಿ ತುಳುನಾಡಿಗೆ ಬಾರದಿರುತ್ತಿದ್ದರೆ ತುಳುನಾಡಿನಲ್ಲಿ ಮೇಲು ಕೀಳು ವರ್ಗ ಇದುವರೆಗೆ ನಾಶವಾಗಿರುತ್ತಿತ್ತು.

○ ಇಂದಿರಾ ಹೆಗ್ಗಡೆ



ತುಳುವರ ಕೂಡುಕಟ್ಟಿನ ಮೂಲ ಸ್ಥಾನಗಳಲ್ಲಿ ಭೂತದ ಕಲ್ಲುಗಳು ಇಂದಿಗೂ ಇವೆ. ಇಲ್ಲಿ ನ್ಯಾಯ ತೀರ್ಮಾನವೂ ನಡೆಯುತ್ತಿದ್ದುದರಿಂದ ಪ್ರಮಾಣ ಕಲ್ಲುಗಳೂ ಇವೆ. ಇಂತಹ ಬೆರ್ಮೆರಿಗೆ ನೇಮ-ಕೋಲ ನಡೆಯುತ್ತವೆ. ಅಂಬೊಡಿ (ಅಂಬಿ+ಇಡಿ)ಯೆಂಬ ಅಣಕು ಯುದ್ಧ ಈಗಲೂ ನಡೆಯುತ್ತಿದೆ. ಈ ಯುದ್ಧವನ್ನು ಪ್ರತಿನಿಧಿಸುವವನು ಕೋಟ್ದಬ್ಬು; ಆಡುವವರು ಅವನ ಸಮಾನ ಜಾತಿಗಳಾದ ಮುಗೇರರು, ಮಾನೆರ್ ಮೂಮಡಾಲರು ಇತ್ಯಾದಿ ಜಾತಿಯವರು. ಆಳುವ ಗುತ್ತು ಬೀಡುಗಳ ಮೂಲದವರು. ಅರಸರು ಅಜಲಿನ ಅಧಿಕಾರ ದವರು ತಮ್ಮ ಆಸನದಲ್ಲಿ ಕುಳಿತಂತೆ, ಕೋಟ್ದಬ್ಬು ದೈವ ಮಾಧ್ಯಮನು ಆಲಡೆಯ ಅಂಬೊಡಿ ಗದ್ದೆಯ ಬಳಿ ಬಂದು ನಿಲ್ಲುತ್ತಾನೆ. ಅಂಬೊಡಿ ಮುಗಿಸಿ ಮರಳುತ್ತಾನೆ.

'ಅತ್ಯಂತ ಪ್ರಾಚೀನ ತೌಳವ ರಾಜಮನೆತನಗಳಿಂದ ಆರಾಧನೆಗೊಂಡ ರಾಜಫಲ ಸಮೃದ್ಧಿ ವಾರ್ಷಿಕ ನವೀಕರಣ ಆಚರಣೆಯೊಂದಿಗೆ ಸಂಬಂಧ ಹೊಂದಿದ್ದ ಬೆರ್ಮೆರ್ ಎನ್ನುವ ದೈವವನ್ನು ಕುರಿತು ಇರುವ ಶಾಸನಗಳ ಉಲ್ಲೇಖ ಅತ್ಯಂತ ಪ್ರಾಚೀನವಾಗಿದೆ. ಸಮಕಾಲೀನ ಮೌಖಿಕ ಐತಿಹ್ಯಗಳು (ಪಾಡ್ದನ) ಮತ್ತು ಪ್ರಾಚೀನ ಶಾಸನಗಳು ಕೆಲವು ವಿಶಿಷ್ಟ ಸಂದರ್ಭಗಳಲ್ಲಿ ತಾಳೆ ಯಾಗುತ್ತವೆ. ಭೂತಾರಾಧನೆಗೆ ಹಿನ್ನೆಲೆಯಾಗಿರುವ ತಾತ್ವಿಕ ಅಂಶಗಳ ಕುರಿತ ಸಾಕಷ್ಟು ಪ್ರಮಾಣದ ಮಾಹಿತಿಗಳು ಉಳಿದುಬಂದಿಲ್ಲ. ಈ ಕೊರತೆಯನ್ನು ನೀಗಿಕೊಳ್ಳಲು ನಾವು ಪಾಡ್ದನಗಳ ಸಹಾಯವನ್ನು ಪಡೆಯಬಹುದು. ಪಾಡ್ದನಗಳಲ್ಲಿ ಬೆರ್ಮೆರ್ ಮೂಲತಃ ರಾಜನಾಗಿದ್ದ ಒಬ್ಬ ವನದೇವತೆ. ಆದರೆ ಆತ ಲೌಕಿಕ ಅರಸನೊಂದಿಗೆ ನಿಕಟ ಸಂಬಂಧವನ್ನು ಹೊಂದಿದ್ದನು. ರಾಜ್ಯದ ಜೀವಕಳೆ, ಸಂಪದಭಿವೃದ್ಧಿ ಹಾಗೂ ನಿಯಾಮಕ ವ್ಯವಸ್ಥೆಗಳನ್ನು ನೇರ್ಪುಗೊಳಿಸಲು ರಾಜನು ಬೆರ್ಮೆರನ್ನು ಆರಾಧಿಸಿ ಸಂತೃಪ್ತಿಗೊಳಿಸಬೇಕಾಗಿತ್ತು. ಬೆರ್ಮೆರ ಆವಾಸಸ್ಥಾನ ಕಾಡು. ಅಲ್ಲಿನ ಪ್ರಾಣಿ ಮತ್ತು ಅಲೌಕಿಕ ಜೀವಿಗಳ ಮೇಲೆ ಈ ವನಾಧಿಪತಿಯ ಹತೋಟಿಯಿಂದಾಗಿ ಇದು ಭಯಾನಕ ಪ್ರದೇಶವಾಗಿದೆ. ಅಲ್ಲಿನ ಪ್ರಾಣಿಗಳಲ್ಲಿ ಸರ್ಪವು ಸಂತಾನಾಭಿವೃದ್ಧಿಗೆ ಸಂಬಂಧಿಸಿದ್ದಾಗಿದೆ. ಈ ವನಾಧಿಪತಿಯು ಮೃತ್ಯುವಿನೊಂದಿಗೂ ಸಂಬಂಧ ಹೊಂದಿದ್ದಾನೆ. ಸಿರಿಪಾಡ್ದನದಲ್ಲಿ ಸಿರಿಯು ಮೊಮ್ಮಕ್ಕಳಾದ ಅಬ್ಬಗದಾರಗೆಯರನ್ನು ಬೆರ್ಮೆರ್ ಕೊನೆಗೊಳಿಸುವ ಮೂಲಕ ತಾನೇ ಆರಂಭಿಸಿದ ಸಂತಾನವನ್ನು ಕೊನೆಗೊಳಿಸಿದಂತಾಯಿತು.' (ಪೀಟರ್ ಜೆ. ಕ್ಲಾಸ್, ತುಳುವ ದರ್ಶನ, ಪುಟ ೧೨೭)

ಇಂತಹ ಬೆರ್ಮೆತಾಣ ಅರ್ಥಾತ್ ದೈವಸ್ಥಾನಗಳ ಒಳಗೆ ಬರಲು ದೇವರಿಗೆ ಮನಸ್ಸಾದುದು ದೇವರ ಸೇವಕರ ಸ್ವಾರ್ಥತನದಿಂದಾಗಿ. ಸ್ಥಳೀಯ ಆರಾಧನಾ ಪರಂಪರೆಯ ಭೂತಾರಾಧನೆಯಲ್ಲಿ ತೀರ್ಥ ಪ್ರಸಾದ ದಕ್ಷಿಣೆ ಇಲ್ಲ. ಬ್ರಾಹ್ಮಣ ಪೂಜೆ ಇಲ್ಲ. ಬ್ರಾಹ್ಮಣ

ಭೋಜನವೂ ಇಲ್ಲ. ದೇವರು ದೈವದ ಗುಡಿ-ಗುಂಡದ ಒಳಗೆ ಬಂದಾಗ ಇಲ್ಲಿಯ ದೈವಗಳು ಬ್ರಾಹ್ಮಣ ದೇವರನ್ನು ಒಳಗೆ ಸ್ವಾಗತಿಸಿ ತಮ್ಮ ಪೀಠ ಬಿಟ್ಟುಕೊಟ್ಟವು. ಅಬ್ರಾಹ್ಮಣ ಅರ್ಚಕರು ಧೂಪ, ದೀಪ ನೈವೇದ್ಯ ನೀಡುವ ಕೆಲಸವನ್ನು ಬ್ರಾಹ್ಮಣರಿಗೆ ಬಿಟ್ಟುಕೊಟ್ಟರು. ಜೈನ ಪ್ರಭಾವ ಇರುವ ಕೆಲವೇ ದೈವಸ್ಥಾನ ಉಳಿದು ಎಲ್ಲೆಡೆ ಪ್ರಾಣಿಬಲಿ ಇದೆ. ಹೀಗಾಗಿ ಆಗಮ ಶಾಸ್ತ್ರ ಪ್ರಕಾರ ಪೂಜೆ ಪ್ರಾರಂಭಿಸಿ ಬ್ರಾಹ್ಮಣರಿಗೆ ಬದುಕಲು ವ್ಯವಸ್ಥೆ ಕಲ್ಪಿಸಿದರು. ನಂದಳಿಕೆಯಲ್ಲಿ ಬೆರ್ಮರು ಶಿವಲಿಂಗದ ಬಲದ ಭಾಗದಲ್ಲಿ ತನ್ನ ಭಕ್ತರಾದ ಅಬ್ಬಗ ದಾರಗರೊಂದಿಗೆ ನೆಲಸಿದ್ದಾರೆ. ಕವತಾರಿನಲ್ಲಿ ಬೆರ್ಮ-ಉಲ್ಲಾಯನ ಜಾಗದಲ್ಲಿ ಮಹಾಲಿಂಗೇಶ್ವರ ಬಂದಿದ್ದಾನೆ. ಹಿರಿಯಡ್ಕದಲ್ಲಿ ಶ್ರೀಚಕ್ರ ಬಂದಿದೆ. ಇಲ್ಲಿ ದೈವಗಳ ಪೀಠವನ್ನು ಬಯಸಿದವರು ಉಡುಪಿ ಅಷ್ಟಮಠದ ಸ್ವಾಮಿಗಳು. ಇಂತಹ ಬದಲಾವಣೆಗಳನ್ನು ತಾವು ತಂದ ಬಗ್ಗೆ ಮಠದ ಸ್ವಾಮಿಗಳು ಒಂದು ಸಭೆಯಲ್ಲೂ ಹೇಳಿದ್ದರು. ಧರ್ಮಸ್ಥಳವೂ ಅವರ ಕೃಪೆಯಿಂದಲೇ ದೇವಸ್ಥಾನ ಆದುದು.

ಕೋಟಿ ಚೆನ್ನಯರ ಪಾಡ್ದನವು 'ಬೆರ್ಮರು ಬೇರೆ ದೇವರು ಬೇರೆ' ಎಂಬುದಾಗಿ ಹೇಳುತ್ತದೆ.

'ಆ ನಾಗೆರ್ಲೆನ್ ಬೆರ್ಮೆರ್ಲೆನ್ ನಿರ್ಮಿರಿಯೆರ್ಯ್ – ದೇವೆರ್ ಎಡ ದಿಕ್ಕಡ್ ಬೆರ್ಮೆರ್ ಬಲ ದಿಕ್ಕಡ್' ಆ ನಾಗಗಳನ್ನು, ಬೆರ್ಮರನ್ನು, ನಿರ್ಮಿಸಿದವರು; ದೇವರು ಎಡದಿಕ್ಕಿನಲ್ಲಿ ಬೆರ್ಮೆರ್ ಬಲ ದಿಕ್ಕಿನಲ್ಲಿ.

ಆದರೂ ದೈವ (ತುಳು ದೈವ ಹಳೆಗನ್ನಡ ದೈವ. ಹೊಸ ಕನ್ನಡ ದೇವರು) ಅರ್ಥಾತ್ ಭೂತಗಳು ಅವಜ್ಞೆಗೆ ಒಳಗಾಗಲಿಲ್ಲ. ತುಳುನಾಡಿನ ನೇಮ, ಕೋಲ, ನಡಾವಳಿಗಳಲ್ಲಿ ವೈದಿಕ ಆಚರಣೆಗಳ ಪ್ರಭಾವ ಇಲ್ಲ. (ಶೀಬರೂರಿನಲ್ಲಿ ಬ್ರಾಹ್ಮಣರೂ ಇರುವುದರಿಂದ ತೀರ್ಥ ಪ್ರಸಾದ ನೀಡಿ ದಕ್ಷಿಣೆ ಪಡೆಯುತ್ತಾರೆ.) ಬಂಗರ ನಂದನೇಶ್ವರ, ಚೌಟರ ಸೋಮೇಶ್ವರ, ಪೊಳಲಿಯ ರಾಜರಾಜೇಶ್ವರಿ, ಕಟೀಲಿನ ದುರ್ಗಾ ಪರಮೇಶ್ವರಿ, ಮಾತ್ರವಲ್ಲ ಗುರುಪುರದ ವೀರಶೈವ ಮಠದಲ್ಲೂ ದೈವಗಳನ್ನು ಉಪೇಕ್ಷಿಸಲಿಲ್ಲ. ಕಾರಿಂಜೆ ಬೆಟ್ಟದ ತುದಿಯಲ್ಲಿ ಶಿವನಿದ್ದರೆ ಸ್ವಲ್ಪ ಕೆಳಗೆ ಪಾರ್ವತಿ ಇದ್ದಾಳೆ. ಅವಳ ಎದುರು ಗೋಪುರದಲ್ಲಿ ಪಿಲಿಚಾಮುಂಡಿಯ ದೈವದ (ಭೂತದ) ಉಯ್ಯಾಲೆ ಇದೆ. ಪಿಲಿಚಾಮುಂಡಿ ಎಂದರೆ ಹುಲಿಯ ಮೇಲೆ ಕುಳಿತ ಚಾಮುಂಡಿ.

ಇಷ್ಟಿದ್ದರೂ ಸಾವಿತ್ರಿಯವರು ಹೇಳುವಂತೆ ತುಳುನಾಡಿನ ಬೆರ್ಮ ಚತುರ್ಮುಖ ಬ್ರಹ್ಮನಾಗಿ ಪರಿವರ್ತನೆ ಆಗಿಲ್ಲ. ಹೆಬ್ರಿಯ ತಾಣದಲ್ಲಿ ಚತುರ್ಮುಖ ಬ್ರಹ್ಮನ ಕಂಚಿನ ಮೂರ್ತಿ ಗುಂಡದ ಹೊರಗೆ ಇದೆ. ತುಳುವಿನ ಬೆರ್ಮರನ್ನು ಚತುರ್ಮುಖ ಬ್ರಹ್ಮ ಮಾಡಿದ್ದೀರಾ ಎಂದು ಅಲ್ಲಿಯ ಪುರೋಹಿತರನ್ನು ಕೇಳಿದಾಗ ಇಲ್ಲ ಎಂದು ಉತ್ತರಿಸಿದ್ದಾರೆ. ಅದು ನಾಲ್ಕು ದಿಕ್ಕನ್ನು ನೋಡುವ ಕಲ್ಪನೆ ಅಷ್ಟೆ ಎಂದರು. ಬಹುಶಃ ಮುಂದೆ ಚತುರ್ಮುಖ ಬ್ರಹ್ಮನಾಗಿ ಪರಿವರ್ತಿಸಲು ಪೀಠಿಕೆ ಇರಬಹುದು. ಆದರೆ ತುಳುವಿನ ಬೆರ್ಮರು ಬೆರ್ಮಲಿಂಗೇಶ್ವರ ಆಗುತ್ತಿದ್ದಾನೆ ಅಥವಾ ಖಡ್ಗೇಶ್ವರಿ ಆಗಿದ್ದಾನೆ/ಳೆ. ಮೂಲಸ್ಥಾನಗಳ ನಿರಾಕಾರ ನಿರ್ಗುಣ ಬದಲಿಗೆ ಲಿಂಗದ ಆಕಾರ ಬರುತ್ತಿದೆ. ಲಂಕೆ ಲೋಕ ನಾಡಿನ ಪುರೋಹಿತರ ಪ್ರಕಾರ ಬೆರ್ಮಲಿಂಗೇಶ್ವರ ವೈದಿಕ ಪರಂಪರೆಯ ದೈವ. ಕಾರಣ ಇಷ್ಟೆ, ಅವರ ಪ್ರಕಾರ ಬ್ರಾಹ್ಮಣರು ಭೂತಾರಾಧನೆಯನ್ನೂ ಮಾಡಬಾರದು. ಆದರೆ ಗುತ್ತುಗಳು ಆಡಳಿತ ದೊರಕಿದಾಗ ಬ್ರಾಹ್ಮಣರು ಭೂತಾರಾಧನೆಯನ್ನೂ ಮಾಡಬೇಕಾಯಿತು; ನೇಮ ತಂಬಿಲಗಳನ್ನೂ ನಡೆಸಬೇಕಾಯಿತು. ಲಂಕೆ ಲೋಕಾನಾಡು ಸಿರಿ ಆಲಡೆಯ ಕ್ಷೇತ್ರ. ಹೀಗಾಗಿ ಬೆರ್ಮರ ಪೂಜೆ ಉಳಿದು ಇತರ ಎಲ್ಲ ಆಚರಣೆಗಳು ಸ್ಥಳೀಯ ಪೂರ್ವ ಪರಂಪರೆಯಂತೆ ನಡೆಯುತ್ತಿವೆ.

ಬೆರ್ಮರ ತಾಣಗಳು ಕಾಡಿನ ಕ್ಷೇತ್ರವಾಗಿರುವುದರ ಜೊತೆಗೆ ನದಿ ಅಥವಾ ಹೊಳೆ ಬಯಲಲ್ಲಿ ಇರುತ್ತವೆ. ಅಂದರೆ ಈ ಪ್ರದೇಶ ಕೃಷಿ ಯೋಗ್ಯ ಭೂಮಿಗೆ ಅಂಟಿಕೊಂಡು ಇರುತ್ತದೆ. ಬಡಗು ಗಂಗೆಯಿಂದ ತೆಂಕು ರಾಮೇಶ್ವರದವರೆಗೆ ತನ್ನ ಆಡಳಿತ ವ್ಯಾಪ್ತಿಯನ್ನು ಹೊಂದಿರುವ ಈ ಪಂಚ ದೈವಗಳು ಆದಿದೈವಗಳು. ಮಾನವ ತಾನು ಈ ಪ್ರದೇಶದಲ್ಲಿ ಸ್ಥಿರವಾಗಿ ನೆಲೆನಿಂತು ಪೂಜಿಸಿದ ದೈವಗಳು ಇವು. ಇವುಗಳ ಜೊತೆ ಲೆಕ್ಕಿಸಿರಿಯೂ ಇರುವುದರಿಂದ ಲೆಕ್ಕಿಸಿರಿಯೂ ಆದಿದೈವ ಆಗುತ್ತದೆ. ಲೆಕ್ಕಿಸಿರಿ ಭೂತದ ಉಗಮವನ್ನು ತಿಳಿಸುವ ಪಾಡ್ದನ ಸಿಗುವುದಿಲ್ಲ. ಆದರೆ ಅದರ ಮಹಿಮೆಯನ್ನು ಸಾರುವ ಪಾಡ್ದನಗಳು ಲಭ್ಯವಿವೆ ಎಂದು ಡಾ|| ವಿವೇಕ ರೈ ಅವರು ಬರೆಯುತ್ತಾರೆ. ಆದರೆ ಭೂತಗಳನ್ನು ವರ್ಗೀಕರಿಸದ ರೆ. ಎ. ಮ್ಯಾನರ್ ಅವರು ಲೆಕ್ಕಿಸಿರಿಯನ್ನು ಪುರಾಣ ಮೂಲದ ದೈವ ಆಗಿ ವರ್ಗೀಕರಿಸುತ್ತಾರೆ. ಲೆಕ್ಕಿಸಿರಿ, ರಕ್ತೇಶ್ವರಿ ಒಂದೇ ಎನ್ನುವ ನಂಬಿಕೆ ಕೂಡ ಕೆಲವೆಡೆ ಇದೆ. ಈಚೆಗೆ ಕೆಲವರು ತನ್ನಿಮಾನಿಗ ಕೂಡ ರಕ್ತೇಶ್ವರಿಯೇ ಎನ್ನುತ್ತಾರೆ. ಇದು ದೇವರನ್ನು ಸಂಸ್ಕೃತೀಕರಣಗೊಳಿಸುವ ಕ್ರಿಯೆ ವಿನಾ ಲೆಕ್ಕಿಸಿರಿ ಮತ್ತು ತನ್ನಿಮಾನಿಗ ಬೇರೆ ಬೇರೆ ದೈವಗಳು. ಲೆಕ್ಕಿಸಿರಿ ಬೆರ್ಮರ ಬಳಿ ಇರುವ ದೈವ ಆದರೆ ತನ್ನಿಮಾನಿಗಳು ಕೋಟ್ದಬ್ಬು ಬಳಿ ಇರುವ ದೈವ. ಲೆಕ್ಕಿಸಿರಿ ಪುರಾಣ ಕಲ್ಪನೆಯ ದೈವ ಆದರೆ ತನ್ನಿಮಾನಿಗಳು ಸ್ಥಳೀಯ ನಂಬಿಕೆಯ ದೈವ. ಲೆಕ್ಕಿಸಿರಿಯನ್ನು 'ಉಲಾಯಿ ಕೊರ್ನಗ ಪರ್ಮೆಸಿರಿ ಪಿದಾಯಿಕೊರ್ನಗ ಲೆಕ್ಕಿಸಿರಿ ಭೂತ' ('ಒಳಗೆ ಕೊಡುವಾಗ ದೇವರು ಪರಮೇಶ್ವರಿ ಅಮ್ಮ. ಹೊರಗೆ ಕೊಡುವಾಗ ಭೂತ') ಎನ್ನುತ್ತದೆ ಪಾಡ್ದನ. (ಭೂತದ ಈ ದೈವಕ್ಕೆ ಅರ್ಪಣೆ ಕೊಡುವಾಗ ಬೆಳ್ಳಿಯ ಕಡ್ತಲೆ ಕೈಮಣೆಗಳು ಮುಖ್ಯವಾಗುತ್ತವೆ.)

> **ವಾಸ್ತವ**
>
> ನೈಸ್
> ಮತ್ತು
> ಮೈನ್ಸ್
> ತಿಕ್ಕಾಟದಲಿ
> ರಾಜ್ಯದ
> ಅಭಿವೃದ್ಧಿ
> ಮೈನಸ್ !
>
> ಮಲ್ಲೇಶ ಡಿ. ಎಚ್.
> ಶಿಕ್ಷಕರು, ಗದಗ

ತನ್ನಿಮಾನಿಗಳು ಸಾಂಸ್ಕೃತಿಕ ರಮಣಿ, ಸಾಂಸ್ಕೃತಿಕ ವೀರರು ಎಂಬುದು ಪರಿಭಾಷೆ. ಸಾಂಸ್ಕೃತಿಕ ವೀರ ಎಂಬ ಪರಿಕಲ್ಪನೆ ಸಮಾಜದ ಮಾದರಿಯಲ್ಲಿ ಉಳಿಸಿಕೊಳ್ಳುವ ಭಾಷೆಗಳು. ಸಮಾಜದ ನಂಬಿಕೆಗಳನ್ನು ಹಿಡಿದಿಡಲು ಸಾಂಸ್ಕೃತಿಕ ವೀರರ ನಂಬಿಕೆಗಳು ನೆರವಾಗುತ್ತವೆ. ಅದು ಮಹಾಕಾವ್ಯ ನಾಯಕ ಆಗಿರಬಹುದು ಜನಪದಕಾವ್ಯಗಳ ನಾಯಕರಾಗಿರಬಹುದು. ಒಬ್ಬ ಸಾಂಸ್ಕೃತಿಕ ಮಹಿಳೆಯಾಗಿ ತನ್ನಿಮಾನಿಗಳು ಸಮಾಜದ ಕಟ್ಟುಪಾಡುಗಳನ್ನು ಮೀರಿ ಮಾನವೀಯತೆಯನ್ನು ಮೆರೆದಾಕೆ. ಆಕೆಯ ಬಾಯಿ ಮಾತಿನ ಸೋದರ ಕೋಟ್ದಬ್ಬು. ಈತನ ತಂದೆ ಕೋಲ ಬಳಿಯವ ಎನ್ನುತ್ತಾರೆ ಇವನ ಜಾತಿಯ ಮುಂಡಾಲರು. ಕೋಲ ಬಳಿಯ ಆಳುಗಳು ತುಳುನಾಡಿನ ರಾಜರ ಆಸ್ಥಾನಗಳಲ್ಲಿ ಗಮನ ಸೆಳೆಯುತ್ತಾರೆ. ಈ ಕೋಟ್ದಬ್ಬು ಯಾನೆ ಕೋಟೆ ಕಾಯುವ ಬಬ್ಬುರಾಜನ್ ದೈವ ಜಾರಂದಾಯನ ಸೇವಕ ದೈವ. ಈಗಲೂ ಜಾರಂದಾಯ ಇದ್ದಲ್ಲಿ ಕೋಟ್ದಬ್ಬು ಇರುತ್ತಾನೆ. ಕೋಟ್ದಬ್ಬು ಇದ್ದಲ್ಲಿ ಸಾಮಾನ್ಯವಾಗಿ ತನ್ನಿಮಾನಿಗ ಇರುತ್ತಾಳೆ.

ತನ್ನಿಮಾನಿಗ ಪೆರಾಜೆಯ ಸೋಯಿ ಬೈದೆದಿಯ ಸಾಕು ಮಗಳು. ಕಚ್ಚೂರದರಮನೆಯ ಕೊಡಂಗೆ ಬನ್ನಾರು ಕಾಂತುಲ್ಲಾರು, ಆತನ ಮಡದಿ ಸಿರಿಕೊಂಡೆ ಬಾರೆಗೆದಿ, ಸಾಕಿದ ಮಗಳು ಕಚ್ಚೂರ ಮಾಲ್ದಿ ಆಕೆ ಮದುವೆಯಾಗದೆ ಹೆತ್ತಮಗ ಕೋಟ್ದಬ್ಬು, ಸತ್ಯದ ಮಗು. ತನ್ನಿಮಾನಿಗ ಕೋಟ್ದಬ್ಬುವನ್ನು ಬದುಕಿಸಿದ ಕಥೆ ಅವಳ ಜೀವನಕ್ಕೆ ಮಹತ್ವದ ತಿರುವು ನೀಡುತ್ತದೆ. ಹೊಲೆಯ (ಶೀನಪ್ಪ ಹೆಗ್ಡೆ ಮತ್ತು ವಿವೇಕ ರೈ ಪ್ರಕಾರ ಕೋಟ್ದಬ್ಬು ಮುಗೇರ ಜಾತಿಯವ) ಸಮುದಾಯದ ಕೋಟ್ದಬ್ಬುವನ್ನು ಬಾವಿಯಿಂದ ಈಚೆಗೆಳೆದು ಮಾನವೀಯತೆಯನ್ನು ಮೆರೆಯುತ್ತಾಳೆ. ತಾನು ಉಟ್ಟ ಸೀರೆಯನ್ನು ಬಾವಿಗೆ ಇಳಿಬಿಡುವಾಗಲೇ ಆತನಿಗೆ 'ನಾನು ನಿನ್ನ ಸೋದರಿ' ಎಂದು ಹೇಳುತ್ತಾಳೆ. ಕೋಟ್ದಬ್ಬುವನ್ನು ಬಾವಿಯಿಂದ ತೆಗೆಯಲು ಕೋಟಿ ಚೆನ್ನಯರಿಂದ ಮಾತ್ರವಲ್ಲ ತನ್ನಿಮಾನಿಗಳ ಅವಳ ಅವಳಿ ಸೋದರರಾದ ಮುಗೇರರಿಂದ ಸಾಧ್ಯವಾಗದೆ ಹೋಗುತ್ತದೆ. ಅಂದರೆ ಪಾಡ್ದನದ ಪ್ರಕಾರ ತನ್ನಿಮಾನಿಗಳು ಕೋಟಿ ಚೆನ್ನಯರ ಕಾಲದವಳು. ಕೋಟಿ ಚೆನ್ನಯರ ಕಾಲ ಸುಮಾರು ೧೭ನೇ ಶತಮಾನ ಎಂಬುದು ಡಾ|| ವಿವೇಕ ರೈ ಅವರ ಅಭಿಪ್ರಾಯ. ಪೆರುಮಲೆ ಬಲ್ಲಾಳ, ಪಂಜದ ಬಲ್ಲಾಳರು, ಎಣ್ಮೂರ ಬಲ್ಲಾಳರು, ಇವರೆಲ್ಲ ವಿಜಯನಗರ ಕಾಲದ ಬಲ್ಲಾಳರು. ಈ ಸಣ್ಣ ಸಣ್ಣ ಬಲ್ಲಾಳರು ಈಗಲೂ ಇದ್ದಾರೆ. (ಇವರು ಜೈನರಲ್ಲ, ಬಂಟರೂ ಅಲ್ಲ, ಹಿಂದು ಸಾಮಂತ ಬಲ್ಲಾಳರು ಮಾಂಸಾಹಾರಿಗಳು. ಬಂಟರಂತೆ ಇವರ ಜೀವನ ಪದ್ಧತಿ ಇದೆ. ಬಂಟ ಸೊಕ್ಕಿದರೆ ಬಲ್ಲಾಳ ಎಂಬ ರೂಢಿ ಮಾತು ಇದೆ.)

ತನ್ನಿಮಾನಿಗ ಮತ್ತು ಲೆಕ್ಕಿಸಿರಿ ಅರ್ಥಾತ್ ರಕ್ತೇಶ್ವರಿ ಒಂದೇ ಅಲ್ಲ. ತನ್ನಿಮಾನಿಗಳ ಮಾಂಸಾಹಾರದ ಬಲಿ ಇದೆ. ಲೆಕ್ಕಿಸಿರಿಗೆ ಸಾಮಾನ್ಯವಾಗಿ ಸಸ್ಯಾಹಾರ ಬಲಿ. ಲೆಕ್ಕಿಸಿರಿ ಕೂಡ ಚಾವಡಿ ದೈವವಾಗಿ ನಮ್ಮ ಗಮನಕ್ಕೆ ಬಂದಿಲ್ಲ. ಅದೂ ಪರಿವಾರ ದೈವವೇ. ದೈವಸ್ಥಾನ ಅಥವಾ ದೇವಸ್ಥಾನಗಳಲ್ಲಿ ಹೊರ ಸುತ್ತಿನಲ್ಲಿ ಉಳಿಯುವ ದೈವ. ತನ್ನಿಮಾನಿಗ ಚಾವಡಿ ದೈವವಾಗಿ ಎಲ್ಲೂ ಇಲ್ಲ ಎಂಬುದು

ನನ್ನ ಅಭಿಪ್ರಾಯ. ಕೊಟ್ಯದ ದೈವವಾಗಿ ಇದ್ದಾಳೆ. ತನ್ನಿಮಾನಿಗಳ ದೈವ ಮಾಧ್ಯಮರು ಮಂಗಳೂರು ಕಡೆ ಮುಂಡಾಲ ಜಾತಿಯವರು. ಇವರು ಜಾತಿಯಲ್ಲಿ ಹೊಲೆಯ ಆದುದರಿಂದ ಇವರಿಗೆ ಚಾವಡಿ ಪ್ರವೇಶ ಇಲ್ಲ. ಎಳತ್ತೂರು ಗುತ್ತು ಮನೆಯಲ್ಲಿ ತನ್ನಿಮಾನಿಗಳು ಎರಡೂ ಸೀಮೆಗಳ ದೈವವಾಗಿ ಜಾರಂದಾಯನ ಬಂಟ ಕೋಟ್ದಬ್ಬು ಜೊತೆ ಕೊಟ್ಯದಲ್ಲಿ ಇದ್ದಾಳೆ. ಆಕೆಗೆ ಎರಡೂ ಗ್ರಾಮಗಳ ದೈವದ ಪಟ್ಟ ಇರುವುದು ಕೋಟ್ದಬ್ಬುವಿನಿಂದಾಗಿ. ಬಂಜೆಯರೂ ಮಕ್ಕಳಾಗಲು ಹರಕೆ ಹಾಕುತ್ತಾರೆ. ಕೋಟ್ದಬ್ಬುವಿಗೆ 'ಕಲ ಮಿತರುನು' ಎಂಬ ಆಚರಣೆ ಇದ್ದಾಗ ಪುರುಷ ಮಾಧ್ಯಮನು ಸ್ತ್ರೀವೇಷಧಾರಿಯಾಗಿ ನಿಲ್ಲುತ್ತಾನೆ. ಆಗ ತನ್ನಿಮಾನಿಗ ಪಡೆಯುವ ನೆಚ್ಚಿನ ಹರಕೆ ಮೊಟ್ಟೆ ಇಡದ ಹೆಣ್ಣು ಕೋಳಿ. ತುಳು : ಮದ್ಮಾಲ್ ಲಾಕಿ. ಮುತ್ತೈದೆ ಭಾಗ್ಯಗಳ ಹರಕೆಯನ್ನು ಪಡೆಯುತ್ತಾಳೆ. ಲೆಕ್ಕಿಸಿರಿ ಕೂಡ ಗುತ್ತಿನಲ್ಲಿ ಇದೆ. ಆದರೆ ಚಾವಡಿಯಲ್ಲಿ ಇಲ್ಲ. ಅವಳಿಗೆ ಪನಿಯಾರ ಸೇವೆ ಇದೆ.

ಡಾ॥ ಚಿನ್ನಪ್ಪಗೌಡ ಅವರು ಲೆಕ್ಕಿಸಿರಿ ದೈವಗಳು ಕುಟುಂಬ ದೈವಗಳಾಗಿ, ಗುತ್ತಿನ ದೈವಗಳಾಗಿ ಇರುವುದನ್ನು ಅವರ ಕೃತಿಯಲ್ಲಿ ಹೇಳಿದ್ದಾರೆ. ಅವರು ಲೆಕ್ಕಿಸಿರಿ ಮತ್ತು ತನ್ನಿಮಾನಿಗಳನ್ನು ಬೇರೆ ಬೇರೆಯಾಗಿ ಗುರುತಿಸುತ್ತಾರೆ. ಚಾವಡಿ ದೈವ ಎಂದೂ ಬರೆದಿಲ್ಲ. ಡಾ॥ ಚಿನ್ನಪ್ಪಗೌಡರ ಬಳಿ ಈ ಬಗ್ಗೆ ಚರ್ಚೆ ಮಾಡಿ ಮಾಡಿ ಖಚಿತಗೊಳಿಸಿದ್ದೇನೆ.

ಆದರೆ ಕೋಟ್ದಬ್ಬು ಪಾಡ್ದನವೊಂದು ಹೀಗೆ ಹೇಳುತ್ತದೆ : 'ನಾನು ಗಾಲಿ ಕೆರೆಯಲ್ಲಿ ವೀರಭದ್ರ, ನಾಗ ಬೆರ್ಮೆ ಸ್ಥಾನದಲ್ಲಿ ಉಲ್ಲಾಯನು, ಮೂಡುಗಿರಿಯಲ್ಲಿ ಕಾಳಭೈರವನು, ಕಂಚೀರಾಯ, ಜಡ್ಡಾಯ (ಜಟಾಧಾರಿ) ಕಾಳರಾಹು, ಕಲ್ಕುಡ ಎಂಬ ಹೆಸರಿನ ದೈವವಾಗುತ್ತೇನೆ, ನೀನು ಆದಿಯಲ್ಲಿ ಲೆಕ್ಕಿಸಿರಿ, ಆಮೇಲೆ ಕಾಳರ್ಕಾಯಿ, ಅನಂತರ ಕಲ್ಲುರ್ಟಿ, ಸತ್ಯ ದೇವತೆ.' ಈ ಪಾಡ್ದನ ಗೊಂದಲ ಮೂಡಿಸುತ್ತದೆ. ಕಲ್ಲುರ್ಟಿ ದೈವ ಮತ್ತು ತನ್ನಿಮಾನಿಗ ಹೆಚ್ಚು ಕಮ್ಮಿ ಸಮಕಾಲೀನ ಜಗತ್ತಿನಲ್ಲಿ ಮಾನವರಾಗಿ ಜನ್ಮತಳೆದವರು. ಲೆಕ್ಕಿಸಿರಿ ದೈವದ ಉಗಮದ ಬಗ್ಗೆ ಯಾವ ಮಾಹಿತಿಯೂ ಲಭ್ಯವಿಲ್ಲ. ಆದರೆ ಆದಿ ಆಲಡೆಗಳಲ್ಲಿ ಲೆಕ್ಕಿಸಿರಿ ಪಂಚ ದೈವಗಳಲ್ಲಿ ಒಂದು ದೈವ. ಅಂದರೆ ಆದಿ ಕಾಲದಿಂದಲೂ ಪೂಜಿಸಲ್ಪಡುತ್ತಿದ್ದ ದೈವ ಲೆಕ್ಕಿಸಿರಿ. ಆದಿ ಆಲಡೆಗಳಲ್ಲಿ ಇರುವ ನಿರಾಕಾರ ನಿರ್ಗುಣ ಬೆರ್ಮೆರೂಪ (ಜೀರ್ಣೋದ್ಧಾರ ಆಗದ ಕಡೆ) ಕ್ಷೇತ್ರಪಾಲ, ನಂದಿ, ನಾಗ ಈ ದೈವಗಳು ಪುರಾಣ ಮೂಲದಿಂದ ಬಂದವುಗಳು ಎನ್ನುವ ಬದಲು ಪುರಾಣ ಮೂಲಗಳಿಗೆ ಇಂತಹ ಜನಪದ ನಂಬಿಕೆಗಳೇ ಆಕರ ಸಾಮಗ್ರಿಗಳು ಆಗಿರುತ್ತವೆ ಎನ್ನುವುದು ಹೆಚ್ಚು ಸೂಕ್ತ. ಈ ಪುರಾತನ ಬೆರ್ಮೆನನ್ನು ಬೆರ್ಮಲಿಂಗೇಶ್ವರ, ಖಡ್ಗೇಶ್ವರಿ, ಖಡ್ಗೇಶ್ವರ ಎಂದು ಹೆಸರಿಸಿ ಬ್ರಾಹ್ಮಣರು ಪೂಜೆ ಮಾಡಲು ಪ್ರಾರಂಭಿಸಿದರೂ ಹೊಲೆಯ ವರ್ಗವಾದ ಬಾಕುಡರು ಈಗಲೂ ಬೆರ್ಮೆರ ಪೂಜೆ ಮಾಡುತ್ತಾರೆ. ಇವರ ಹೆಂಗಸರು ತಮ್ಮ ಕುಲದೈವವಾದ ನಾಗ ಬೆರ್ಮೆರಿಗೆ 'ಬೆರ್ಮೆರ ಸೇವೆ' ಎಂಬ ವಿಶೇಷ ಹರಕೆಯನ್ನು ಸಲ್ಲಿಸುತ್ತಾರೆ. ಒಂದು ಕುಡ್ತೆ ಎಣ್ಣೆ, ಅರ್ಧ ಸೇರು ಅಕ್ಕಿ ಮತ್ತು ವೀಳ್ಯದೆಲೆ ಇಷ್ಟನ್ನು ಬೆರ್ಮೆರಿಗೆ ಒಪ್ಪಿಸುವುದೇ 'ಬೆರ್ಮೆರ ಸೇವೆ' ಎಂಬ ಹರಕೆ. ಇವರು ಆಶ್ಲೇಷ ಬಲಿ, ಢಕ್ಕೆ ಬಲಿ, ನಾಗಮಂಡಲ – ಮಾತ್ರವಲ್ಲದೆ ವಿವಿಧ ದೈವಗಳನ್ನು ನೇಮ, ಕೋಲಗಳ ಮೂಲಕ ಆರಾಧಿಸುವಂತೆ ವಿವಿಧ ಸರ್ಪಗಳನ್ನು ಆರಾಧಿಸುತ್ತಾರೆ (ನಾಗ ದರ್ಶನ, ವೆಂಕಟರಾಜ ಪುಣಿಚಿತ್ತಾಯ, ಪುಟ ೧೦೫, ೧೦೬). ಬೆರ್ಮೆರ ನೇಮ, ಕೋಲಗಳು ನಡೆಯುತ್ತವೆ.

ಬೆರ್ಮೆ ಅಥವಾ ಬ್ರಹ್ಮೇಶ್ವರ ಕರ್ನಾಟಕದ ಇತರ ಭಾಗಗಳಲ್ಲೂ ಇದೆ. ನಾಗ, ನಂದಿ, ಕ್ಷೇತ್ರಪಾಲ ಎಲ್ಲೆಡೆ ಇರುವ ದೈವಗಳು. ಲೆಕ್ಕಿಸಿರಿ ದೈವವನ್ನು ರಕ್ತೇಶ್ವರಿ ಎಂದು ಯಾಕೆ ಗುರುತಿಸುತ್ತಾರೆ ಎಂಬ ಬಗ್ಗೆ ಹೆಚ್ಚಿನ ವಿವರ ಇಲ್ಲ. ರಕ್ತೇಶ್ವರಿ ವೈದಿಕರಿಗೆ ಹತ್ತಿರ ಇರುವ ದೇವರಾದರೆ ಲೆಕ್ಕಿಸಿರಿ ಜನಪದರ ಬಳಿ ಇರುವ ಭೂತ. 'ಎಂಕೊಂಜಿ ಬೂತ ಉಂಡು ಲೆಕ್ಕಿಸಿರಿ; ಯಾನ್ ಮಲ್ತಿನಾವು ಮಾತ ಐಕ್ಕ್ ಸರಿ.' (ನನಗೆ ಒಂದು ಭೂತ ಇದೆ ಲೆಕ್ಕಿಸಿರಿ, ನಾನು ಮಾಡಿದುದೆಲ್ಲ ಅದಕ್ಕೆ ಸರಿ) ಎಂಬ ರೂಢಿ ಮಾತು ಇದೆ. ಒಟ್ಟಿನಲ್ಲಿ 'ಸಾಂಸ್ಕೃತಿಕ ತುಳು ವಲಯದಲ್ಲಿ ದೇವಾಲಯದ ಉಗಮದ ಇತಿಹಾಸವನ್ನು ಕೆದಕಿದರೆ ಅದರ ಬೇರುಗಳಲ್ಲಿ ಭೂತದ ಇತಿಹಾಸ ಗೋಚರಿಸುತ್ತದೆ' ಎಂಬ ಸಾವಿತ್ರಿ ಕೆ. ಅವರ ಮಾತು ಸತ್ಯ. ತುಳುನಾಡಿನ ಆರಾಧನಾ ಕ್ಷೇತ್ರ ಸಂಸ್ಕೃತೀಕರಣಗೊಳ್ಳುವ ಮೊದಲು ಭೂತದ ಇತಿಹಾಸವನ್ನು ಶೋಧಿಸಬೇಕು. ಆಗ ಜನಜೀವನದ ಇತಿಹಾಸವೂ ಕಾಣಬಹುದು.

ಇಂದಿರಾ ಹೆಗ್ಗಡೆ
ನಂ. ೬, ಕೃಷ್ಣಾ ರೆಸಿಡೆನ್ಸಿ, ೪ನೆಯ ತಿರುವು, ಅಮರಜ್ಯೋತಿ ನಗರ, ಬೆಂಗಳೂರು - ೫೬೦ ೦೪೦

## ಬಂಡೆಯ ಮೇಲೆ ಕೂತ ಹಕ್ಕಿ



ಆ ಕೆರೆಯ ನಡುವಿನ ಬಂಡೆಯ ಮೇಲೆ ಕೂತ ಹಕ್ಕಿ
ನೋಡುತ್ತಿದೆ ಏನನ್ನು ?
ಲಾಗಾಯ್ತಿನಿಂದ ಹಾಕಿದ ಹಿಕ್ಕೆಯ ಬಣ್ಣ ಕರೆಗಟ್ಟಿದ
ಬಂಡೆಯ ಮೇಲೆ ಕೂತು ಅದು ನೋಡುತ್ತಿದೆ ಏನನ್ನು ?

ಆ ಹಕ್ಕಿಯ ನೋಟ ನೆಟ್ಟಿರುವುದು
ಮೇಲೆ ಹಾರಿ ಹೋಗುತ್ತಿರುವ
ಕಂದುಗಪ್ಪು ಹದ್ದಿನ ಮೇಲೇನು ?
ಇರಲಾರದು, ಇದ್ದಿದ್ದಲ್ಲಿ ಅದರ ಕೊರಳು
ತಿರುಗುತ್ತಿರಬೇಕಾಗಿತ್ತು ಹದ್ದು ಹಾರಿದ ಕಡೆಗೆಲ್ಲ

ಆ ಹಕ್ಕಿಯ ನೋಟ ನೆಟ್ಟಿರುವುದು ನೀರೊಳಗಾಡುವ
ವಿಧವಿಧ ಮೀನಿನ ಮೇಲೇನು ?
ಇರಲಾರದು, ಇದ್ದಿದ್ದಲ್ಲಿ ಅದು ನೆಟ್ಟ ನೋಟದಿಂದ ನೋಡುತ್ತಾ
ಇರಬೇಕಿತ್ತು ಓಡಾಡುವ ಮೀನನ್ನು

ಆ ಹಕ್ಕಿ ಹಾಗಾದರೆ ನೋಡುತ್ತಿದೆ ಏನನ್ನು, ಆ ಹಾದಿಯಲ್ಲಿ
ಕಲ್ಲು ಆಯುವ ಮನುಷ್ಯನನ್ನೇನು ?
ಇರಲಾರದು, ಇದ್ದಿದ್ದಲ್ಲಿ ಅದು ಹುಷಾರಾಗಿ
ನೋಡುತ್ತಿರಬೇಕಾಗಿತ್ತು ಅವನ ಕೈಯನ್ನು

ಅದು ಹಾಗಾದರೆ ನೋಡುತ್ತಿರುವುದೇನು ?
ನೀರಮೇಲಿನ ಬಿಂಬದಲ್ಲಿ ತನ್ನನ್ನು ?
ಇರಲಾರದು, ಇದ್ದಿದ್ದಲ್ಲಿ ಸುಳಿವ ಮೀನೆಬ್ಬಿಸುವ
ಕಿರು ಅಲೆಯ ಕಲಕಾಟದಲ್ಲಿ
ಎಲ್ಲಿದ್ದೀತು ಅದು ತಾನು ?

ಅದು ಹಾಗಾದರೆ ಆ ಹಕ್ಕಿ ಮಾಡುತ್ತಿರುವುದೇನನ್ನು ?

ಆರ್. ವಿಜಯರಾಘವನ್
ಶಾಖಾ ವ್ಯವಸ್ಥಾಪಕ, ಪ್ರಗತಿ ಗ್ರಾಮೀಣ ಬ್ಯಾಂಕ್, ಗೀತಾ ರಸ್ತೆ
ರಾಬರ್ಟ್‌ಸನ್ ಪೇಟೆ - ೫೬೩ ೧೨೨, ಕೆಜಿಎಫ್

# ಜಾಗತೀಕರಣ ಮತ್ತು ಸಮಕಾಲೀನ ದೃಶ್ಯ ಮಾಧ್ಯಮಗಳು

ಬಿ. ಸುರೇಶ

**ನಮ್ಮ ಮಾಧ್ಯಮಗಳ ಮೇಲೆ ಖಾಸಗೀಕರಣ ಮತ್ತು ಉದಾರೀಕರಣಗಳ ಪ್ರಕ್ರಿಯೆ ತಮ್ಮ ಛಾಪನ್ನ ಮೂಡಿಸಲಾರಂಭಿಸಿ ತುಂಬಾ ಕಾಲವೇನೂ ಆಗಿಲ್ಲ. ಈ ಬದಲಾವಣೆಗೆ ಇರುವುದು ಕೇವಲ ಐದಾರು ವರ್ಷದ ಇತಿಹಾಸ. ಕನ್ನಡದ ಸಂದರ್ಭದಲ್ಲಂತೂ ಇದು ತೀರಾ ಈಚಿನದು. ಸರಿಸುಮಾರು ೨೦೦೪ರ ಅಂತ್ಯದಲ್ಲಿ ಈ ಬದಲಾವಣೆಗಳು ಟೆಲಿವಿಷನ್ ಉದ್ಯಮದಲ್ಲಿ ಕಾಣತೊಡಗಿದವು. ಆದರೆ ಸಿನಿಮಾ ಮತ್ತು ಪತ್ರಿಕೋದ್ಯಮಗಳಲ್ಲಿ ಈ ಬದಲಾವಣೆ ಕಾಣಿಸಿಕೊಂಡು ಸರಿಸುಮಾರು ದಶಕಗಳೇ ಆಗಿವೆ. ಪತ್ರಿಕೋದ್ಯಮವಂತೂ ಜನರಿಗೆ ವಿಶ್ಲೇಷಣಾತ್ಮಕ ಸುದ್ದಿಯ ಬದಲಿಗೆ ರೋಚಕ ಮತ್ತು ಬಾಕ್ಸ್ ಕಟ್ಟಿದ ತುಣುಕು ಮಾಹಿತಿ ನೀಡುವ ಪದ್ಧತಿ ಆರಂಭಿಸಿ ಬಹುರಾಷ್ಟ್ರೀಯ ಕಂಪನಿಗಳು ನಡೆಸುತ್ತಿರುವ ಆಂಗ್ಲ ದೈನಿಕಗಳಿಗೆ ಪೈಪೋಟಿ ನೀಡುವ ದಿಶೆಯಲ್ಲಿ ಹತಾಶ ಪ್ರಯತ್ನಗಳನ್ನು ಮಾಡುತ್ತಿವೆ.**



ಆತ ಮೆಗಾ ಧಾರಾವಾಹಿಗಳ ಬರಹಗಾರ. ಆತ ಪ್ರತಿದಿನ ಬೆಳಿಗ್ಗೆ ಐದು ಗಂಟೆಗೆ ಏಳುತ್ತಾನೆ. ಬರೆಯಲು ಕೂಡುತ್ತಾನೆ. ರಾತ್ರಿಯ ಹತ್ತರ ಒಳಗೆ, ಅದು ಹೇಗಾದರೂ ಸರಿ, ಇಪ್ಪತ್ತೈದು ನಿಮಿಷಗಳ ಅವಧಿಗೆ ಬರುವಷ್ಟು ಚಿತ್ರಕಥೆ-ಸಂಭಾಷಣೆ ಬರೆಯುತ್ತಾನೆ. (ಬರೆಯುತ್ತಾನೆ ಎಂಬುದು ತೀರಾ ಸರಳ ಪದ. ನಿಜ ಹೇಳಬೇಕೆಂದರೆ ಆತ ಕಾರಿಕೊಳ್ಳುತ್ತಾನೆ. ಅದೇ ಉದ್ಯಮದವನಾಗಿ ನಾನು ವಿಶ್ವಾಸದಿಂದ ಈ ಮಾತನ್ನು ಹೇಳಬಹುದು.) ಅವನು ಬರೆದದ್ದು ತೆರೆಯ ಮೇಲೆ ಚಿತ್ರಿತವಾಗಿ ಮೂಡಿಬಂದ ಬಗೆ ಏನು ಎಂಬುದು ಅವನಿಗೆ ತಿಳಿಯದು. ಏಕೆಂದರೆ, ಆತನಿಗೆ ತಾನೇ ಬರೆದುದು ಪ್ರಸಾರವಾಗುವ ಅವಧಿಯಲ್ಲಿ ಮತ್ತೊಂದು ಡೆಡ್‌ಲೈನ್ ಒಳಗೆ ಕೆಲಸ ಮುಗಿಸುವ ತರಾತುರಿ ಇರುತ್ತದೆ. ತಾನು ಬರೆದುದರ ಬಣ್ಣ ತೆರೆಯಮೇಲೆ ಹೇಗೆ ಬಂತು ಎಂದು ನೋಡುವುದಕ್ಕೆ ಅವನಿಗೆ ಪುರಸೊತ್ತಿಲ್ಲ. ಆತ 'ಅಂತೂ ಒಂದು ದಿನದ ಕೆಲಸ ಮುಗಿಯಿತು !' ಎಂದೆನ್ನುವಷ್ಟರಲ್ಲಿ ಮಾರನೆಯ ದಿನದ ಕೆಲಸದ ಒತ್ತಡ ಅವನೆದುರಿಗೆ ಇರುತ್ತದೆ. ಹೀಗೆ ತಿಂಗಳಲ್ಲಿ ಇಪ್ಪತ್ತು ದಿನ ದುಡಿದು, ಉಳಿದ ಹತ್ತು ದಿನಗಳಲ್ಲಿ ಅದೇ ಧಾರಾವಾಹಿಯ ಮುಂಬರುವ ಕಥೆಯನ್ನು ಕುರಿತು ಚರ್ಚಿಸಿ ಬರೆಯುವುದರಲ್ಲಿ ತೊಡಗಿಕೊಳ್ಳುವ ಆತನಿಗೆ ತನ್ನದು ಎಂಬ ಸಮಯವೇ ಇಲ್ಲ. ಅವನ ಮನೆ-ಮಂದಿಗೆ ಅವನು ತಿಂಗಳಿಗೊಮ್ಮೆ ತಂದು ಸುರಿಯುವ ಹಣದ ಮೊತ್ತವಷ್ಟೇ ಮುಖ್ಯ. ಅವನಿಂದ ಆದ ಕೆಲಸದ ಮೌಲ್ಯಮಾಪನ ಆಗುವುದೇ ಇಲ್ಲ. ಅವನಿಗೂ ಅದು ಬೇಕಿಲ್ಲ. 'ತಾನು ಬರೆಯಬಲ್ಲೆ' ಎಂಬ ಆತ್ಮವಿಶ್ವಾಸದಿಂದ ಆತ ಪೆನ್ನು ಹಿಡಿದು ಕೂರುತ್ತಾನೆ. ಜಗತ್ತಿನಲ್ಲಿ ಆಗುತ್ತಿರುವುದು ಅದೇನೇ ಆಗಿರಲಿ, ಅವನ ಪೆನ್ನಿನಲ್ಲಿ ಮೂಡುವ ಎಲ್ಲ ವಿವರಗಳೂ ಶ್ರೀಮಂತ ಜನಸಮುದಾಯಗಳ ಮನೆಯ ಮಲಗುವ ಕೋಣೆಯಲ್ಲಿ ಆಗುವಂತಹವು. ಅಲ್ಲಿನ ಗಂಡಸು ಮನೆಯವರ ಕಣ್ಣುತಪ್ಪಿಸಿ ಇನ್ನಾವುದೋ ಹೆಣ್ಣಿನ ಜೊತೆಗಿರುತ್ತಾನೆ. ತನಗೆ ಮನೆಯಲ್ಲಿ ನೆಮ್ಮದಿಯಿಲ್ಲ ಎನ್ನುತ್ತಲೇ ತಾನು ಮಾಡುವ ಅನೈತಿಕ ಸಂಬಂಧವನ್ನ ಆ ಗಂಡಸು ತನ್ನ ಸಾಧನೆ ಎಂಬಂತೆ ಹೇಳಿಕೊಳ್ಳುತ್ತಾನೆ. ಇಂತಹ ಪಾತ್ರ ಸೃಷ್ಟಿಸಿದಾತನಿಗೆ ತಾನು ಯಾರಿಗಾಗಿ ಕಥೆ ಹೇಳುತ್ತಿದ್ದೇನೆ ಎಂಬ ಕಿಂಚಿತ್ ಕಾಳಜಿಯೂ ಇರುವುದಿಲ್ಲ. ಅವನು ಓತಪ್ರೋತವಾಗಿ ಬರೆಯುತ್ತಲೇ ಇರುತ್ತಾನೆ. ಅವನ ಮುಖದಲ್ಲಿ ಅವನಿಗೇ ಅರಿವಿಲ್ಲದಂತೆ ಪ್ರೇತಕಳೆಯೊಂದು ಇಳಿಯತೊಡಗುತ್ತದೆ. ಹೀಗೆ ನಮ್ಮ ನಡುವಿನ ಸೃಜನಶೀಲ ಲೇಖಕನೊಬ್ಬ ಸಾಯುತ್ತಾನೆ. ಇದೇ ಮಾತನ್ನು ಇದೇ ಟಿಲಿವಿಷನ್ ಉದ್ಯಮದ ನಿರ್ದೇಶಕರಿಗೆ, ಸಹನಿರ್ದೇಶಕರಿಗೆ, ಕಲಾವಿದರಿಗೆ, ಹಣ ಹೂಡುವ ನಿರ್ಮಾಪಕರಿಗೆ ಎಂದು ಆ ಪಿರಮಿಡ್ಡಿನ ಎಲ್ಲಾ ಹಂತಗಳಲ್ಲಿ ಇರುವ ಎಲ್ಲರ ಬಗ್ಗೆಯೂ ಹೇಳಬಹುದು. ಅಲ್ಲಿ ಯಾರಿಗೂ ತಮ್ಮ ನೋಡುಗರ ಬಗ್ಗೆ ಕಾಳಜಿಯಿಲ್ಲ. ಅವರಿಗೆ ಇರುವುದು ಕೇವಲ ತಿಂಗಳ ಅಂತ್ಯದಲ್ಲಿ ತಮಗೆ ದೊರೆತದ್ದು ಏನು ಎಂಬ ಚಿಂತೆ. ಇದು ಕೇವಲ ಟೆಲಿವಿಷನ್ ಉದ್ಯಮದ ಸ್ಥಿತಿಯಲ್ಲ. ಒಂದೊಮ್ಮೆ ಮಾಧ್ಯಮ ಎನಿಸಿಕೊಂಡು ಈಗ ಉದ್ಯಮ ಎಂಬ ಹಣೆಪಟ್ಟಿಯೊಡನೆ ಬದುಕುತ್ತಿರುವ ನಮ್ಮ ನಡುವಿನ ಎಲ್ಲಾ ಮಾಧ್ಯಮಗಳಲ್ಲಿ ದುಡಿಯುತ್ತಿರುವವರ ಪರಿಸ್ಥಿತಿಯೂ ಇದೇ ಆಗಿದೆ. ಇಂದಿನ ಪ್ರಧಾನ ವಾಹಿನಿ ಸಿನಿಮಾಗಳಲ್ಲಿ ದುಡಿಯುತ್ತಿರುವ ಲೇಖಕ ಮತ್ತು ನಿರ್ದೇಶಕರೂ ಸಹ ಇದಕ್ಕೆ ಹೊರತಲ್ಲ. ತಮ್ಮದಲ್ಲದ ಕಥೆಯೊಂದನ್ನ ತಮ್ಮದಲ್ಲದ ಭಾವ ವಲಯವೊಂದನ್ನ ನಿರಂತರವಾಗಿ ಸೃಷ್ಟಿಸುತ್ತಾ, ಸುಳ್ಳುಗಳನ್ನ ಹೆಣೆಯುವುದೇ ಇಂದು ಎಲ್ಲಾ ಪ್ರಧಾನ ವಾಹಿನಿ ಸಿನಿಮಾಗಳ ಕಸುಬಾಗಿಬಿಟ್ಟಿದೆ. (ಇಂತಹ ಹೆಣಿಗೆಗಳನ್ನು ಕುರಿತ ವಿವರವನ್ನು ಇದೇ ಲೇಖನದಲ್ಲಿ ಮುಂದೆ ವಿಸ್ತೃತವಾಗಿ ಚರ್ಚಿಸೋಣ.)

ಇಲ್ಲಿ ದೃಶ್ಯ ಮಾಧ್ಯಮ ಎನ್ನುವಾಗ ಟೆಲಿವಿಷನ್ನಿನ ಸುದ್ದಿ ಮಾಧ್ಯಮದವರು ಸಹ ಹೊರತಲ್ಲ. ಅಲ್ಲಿಯೂ ಕೇವಲ ನೋಡುಗನನ್ನ ಪ್ರತಿಕ್ಷಣ ಟಿ.ವಿ.ಗೆ ಹಿಡಿದುಕೂರಿಸುವ ಗುಣವೊಂದೇ ಇರುತ್ತದೆ. ಅದಕ್ಕಾಗಿಯೇ 'ಇದೀಗ ಬಂದ ಬೃಹತ್ ಸುದ್ದಿ' ಎಂಬ ಉಪಶೀರ್ಷಿಕೆಗಳು ಇರುತ್ತವೆ. 'ಇನ್ನು ಕೆಲವೇ ಕ್ಷಣಗಳಲ್ಲಿ ಇನ್ನೊಂದು ಅಪರೂಪದ ದೃಶ್ಯ ತೋರಿಸಲಿದ್ದೇವೆ' ಎಂದೆನ್ನುತ್ತಾ ಸುದ್ದಿ ಓದುಗ, ನೋಡುಗನನ್ನ ಕಾತರದಲ್ಲಿ ಕೂರಿಸುತ್ತಾನೆ. ಆ ನಂತರ ಬರುವ ಸುದ್ದಿ ಅಷ್ಟು ವಿಶೇಷವಾಗಿಲ್ಲದಿದ್ದರೂ ಅದು ಬರುವವರೆಗೆ ನೋಡುಗನು ಟಿ.ವಿ.ಯ ಎದುರು ಕೂರುವುದಷ್ಟೇ ಆ ಸುದ್ದಿಗಾರರಿಗೆ ಮುಖ್ಯವಾಗಿರುತ್ತದೆ. ಇದಕ್ಕೆ ಕಾರಣ ಸ್ಪರ್ಧಾತ್ಮಕ ಜಗತ್ತು. ಈ ಸ್ಪರ್ಧೆಯನ್ನ ಆರಂಭಿಸಿರುವುದು ಮತ್ತು ಈ ಜನ ಸದಾ ಇಂತಹ ಸ್ಥಿತಿಯಲ್ಲಿಯೇ ಇರುವಂತೆ ನೋಡಿಕೊಳ್ಳುತ್ತಿರುವುದು ಖಾಸಗೀಕರಣ. ಈ ಖಾಸಗೀಕರಣದ ಹಿಂದಿರುವುದು ಜಾಗತೀಕರಣ ಎಂಬ ಪ್ರಕ್ರಿಯೆ.

ನಮ್ಮ ಮಾಧ್ಯಮಗಳ ಮೇಲೆ ಈ ಖಾಸಗೀಕರಣ

ಮತ್ತು ಉದಾರೀಕರಣಗಳ ಪ್ರಕ್ರಿಯೆ ತಮ್ಮ ಛಾಪನ್ನ ಮೂಡಿಸಲಾರಂಭಿಸಿ ತುಂಬಾ ಕಾಲವೇನೂ ಆಗಿಲ್ಲ. ಈ ಬದಲಾವಣೆಗೆ ಇರುವುದು ಕೇವಲ ಐದಾರು ವರ್ಷದ ಇತಿಹಾಸ. ಕನ್ನಡದ ಸಂದರ್ಭದಲ್ಲಂತೂ ಇದು ತೀರಾ ಈಚಿನದು. ಸರಿಸುಮಾರು ೨೦೦೪ರ ಅಂತ್ಯದಲ್ಲಿ ಈ ಬದಲಾವಣೆಗಳು ಟೆಲಿವಿಷನ್ ಉದ್ಯಮದಲ್ಲಿ ಕಾಣ ತೊಡಗಿದವು. ಆದರೆ ಸಿನಿಮಾ ಮತ್ತು ಪತ್ರಿಕೋದ್ಯಮ ಗಳಲ್ಲಿ ಈ ಬದಲಾವಣೆ ಕಾಣಿಸಿಕೊಂಡು ಸರಿಸುಮಾರು ದಶಕಗಳೇ ಆಗಿವೆ. ಪತ್ರಿಕೋದ್ಯಮವಂತೂ ಜನರಿಗೆ ವಿಶ್ಲೇಷಣಾತ್ಮಕ ಸುದ್ದಿಯ ಬದಲಿಗೆ ರೋಚಕ ಮತ್ತು ಬಾಕ್ಸ್ ಕಟ್ಟಿದ ತುಣುಕು ಮಾಹಿತಿ ನೀಡುವ ಪದ್ಧತಿಯನ್ನು ಆರಂಭಿಸಿ ಬಹುರಾಷ್ಟ್ರೀಯ ಕಂಪನಿಗಳು ನಡೆಸುತ್ತಿರುವ ಆಂಗ್ಲ ದೈನಿಕಗಳಿಗೆ ಪೈಪೋಟಿ ನೀಡುವ ದಿಶೆಯಲ್ಲಿ ಹತಾಶ ಪ್ರಯತ್ನಗಳನ್ನು ಮಾಡುತ್ತಿವೆ. ಆ ವಿಷಯ ಕುರಿತ ಚರ್ಚೆ ಈ ಲೇಖನದ ವ್ಯಾಪ್ತಿಗೆ ಬಾರದಾದರೂ, ಹೇಗೆ ಈ ಜಾಗತೀಕರಣದ ಬಾಂಬು ನಮ್ಮ ಎಲ್ಲಾ ಮಾಧ್ಯಮ ಗಳನ್ನೂ ಆವರಿಸುತ್ತಿದೆ ಎಂದು ಸೂಚ್ಯವಾಗಿ ತಿಳಿಸಲಷ್ಟೇ ಇಲ್ಲಿ ಪ್ರಸ್ತಾಪಿಸಿದ್ದೇನೆ. ಸಿನಿಮಾ ಮಾಧ್ಯಮದ ಮೇಲೆ ಇದರಿಂದಾಗಿರುವ ಪರಿಣಾಮವನ್ನು ಚರ್ಚಿಸೋಣ.

**ಲವ್ವು - ಕ್ರೈಮು - ಸೆಕ್ಸು**

ಇದು ನಮ್ಮ ಇಂದಿನ ಸಿನಿಮಾಗಳ ಮುಖ್ಯವಸ್ತು. ಸಿನಿಮಾ ಯಾವುದೇ ಭಾಷೆಯದಾಗಿರಲಿ, ಯಾವುದೇ ನಾಡಿನದಾಗಿರಲಿ, ಯಾವುದೇ ನಿರ್ದೇಶಕರದ್ದಾಗಿರಲಿ (ಕಲಾತ್ಮಕ ಚಿತ್ರಗಳನ್ನು ಹೊರತುಪಡಿಸಿ) ಅವುಗಳ ಕಥಾವಸ್ತುವಿನ ಹರಿವಿಗೆ ಬೇಕಾದ ಜೀವದ್ರವ ಲವ್ವು, ಸೆಕ್ಸು, ಕ್ರೈಮು. ಕಥೆಯ ಹಿನ್ನೆಲೆ ಮತ್ತು ಪಾತ್ರಧಾರಿಗಳು ಅದಲುಬದಲಾಗಿರುತ್ತಾರೆ, ಅಷ್ಟೆ. ಆದರೆ ಅವರೆಲ್ಲರಿಗೂ ಇರುವುದು ಒಂದೇ ಅಗತ್ಯ. ಅದು ಪ್ರೀತಿ. ಹಿಂದಿಯಲ್ಲಿ ತೆರೆಕಂಡ 'ದಿಲ್‌ವಾಲೆ ದುಲ್ಹನಿಯಾ ಲೇ ಜಾಯೆಂಗೇ' ಎಂಬ ಮಾರುದ್ದ ಹೆಸರಿನ ಸಿನಿಮಾದಲ್ಲಿ ಇದ್ದದ್ದು ಇದೇ ಪ್ರೀತಿಯ ಹುಡುಕಾಟ. ಆ ಚಿತ್ರವಾದರೂ ಅದರಲ್ಲಿದ್ದ ಕೆಲವಾದರೂ ಭಾರತೀಯ ಎಂಬ ಅಂಶಗಳಿಂದಾಗಿ ಮೆಚ್ಚಿಗೆಯಾಗಬಹುದು. ನಂತರದ ದಿನಗಳಲ್ಲಿ ಬಂದ, ಯಶಸ್ವಿಯಾದ ಚಿತ್ರಗಳನ್ನು ಗಮನಿಸಿ. 'ಮರ್ಡರ್' (ಅನೈತಿಕ ಸಂಬಂಧದ ಮತ್ತು ನಿರ್ಲಜ್ಜವೆನಿಸುವ ಲೈಂಗಿಕ ಪ್ರಚೋದನೆಯ ವಿವರಗಳು), 'ಜ್ಯೂಲಿ' (ಲೈಂಗಿಕ ಪ್ರಚೋದನೆಯ ದೃಶ್ಯಗಳು), 'ಬಬ್ಲಿ ಔರ್ ಬಂಟ್ಲಿ' (ಪ್ರೀತಿಯ ಹಿನ್ನೆಲೆಯಲ್ಲಿ ಕ್ರೈಮು) ಇವೆಲ್ಲಾ ಚಿತ್ರಗಳಲ್ಲಿಯೂ ಇರುವುದು ಭಾರತೀಯವಲ್ಲದ ಸರಕು. ಈ ವಿಷಯ ಕುರಿತು ಪ್ರಶ್ನಿಸಿದಾಗ ಆಯಾ ಚಿತ್ರಗಳ ನಿರ್ದೇಶಕರು ಮತ್ತು ನಿರ್ಮಾಪಕರು ನಮಗೆ ಭಾರತೀಯ ಮಾರುಕಟ್ಟೆಗಿಂತ ವಿದೇಶಿ ಭಾರತೀಯರ ಮಾರುಕಟ್ಟೆಯೇ ಮುಖ್ಯ ಎನ್ನುತ್ತಾರೆ. ಅದು ಕೇವಲ ಹಿಂದಿ ಚಲನಚಿತ್ರ ರಂಗಕ್ಕೆ ಸಂಬಂಧಿಸಿದ ಸಮಸ್ಯೆ ಅಲ್ಲ. ನೆರೆ ರಾಜ್ಯಗಳಾದ ಆಂಧ್ರ ಮತ್ತು ತಮಿಳುನಾಡುಗಳಲ್ಲಿ ತಯಾರಾಗುತ್ತಿರುವ ಚಿತ್ರಗಳದೂ ಇದೇ ಪರಿಸ್ಥಿತಿ.

ಹೀಗಿರುವಾಗ ನೆರೆಯ ಭಾಷೆಗಳ ಜೊತೆ ಸ್ಪರ್ಧಿಸು ತ್ತಿರುವ ಕನ್ನಡ ಚಿತ್ರೋದ್ಯಮ ಭಿನ್ನವಾಗಲು ಹೇಗೆ ಸಾಧ್ಯ ? ಇಲ್ಲಿ ತಯಾರಾಗುತ್ತಿರುವ ಚಿತ್ರಗಳನ್ನು ಕನ್ನಡ ಚಿತ್ರಗಳು ಎಂದು ಕರೆಯುವುದೇ ತಪ್ಪು ಎಂಬಂತಾಗಿದೆ



ಪರಿಸ್ಥಿತಿ. ಮೊನ್ನೆ ರಾಜ್ಯ ಸರ್ಕಾರದಿಂದ ಪ್ರಥಮ ಅತ್ಯುತ್ತಮ ಚಿತ್ರ ಎಂಬ ಪ್ರಶಸ್ತಿ ಪಡೆದ 'ಮೊನಾಲಿಸಾ' ಎಂಬ ಚಿತ್ರವನ್ನೇ ತೆಗೆದುಕೊಳ್ಳಿ. ಅಲ್ಲಿ ಪಾತ್ರಧಾರಿಗಳು ಆಡುವ ಮಾತು ಕನ್ನಡ ಎಂಬುದನ್ನು ಹೊರತುಪಡಿಸಿದರೆ ಇನ್ನಾವ ವಿವರವೂ ಕನ್ನಡದ್ದಲ್ಲ. ಆ ಪಾತ್ರಗಳು ವಾಸಿಸುವ ಮನೆ ಅತ್ಯಂತ ಶ್ರೀಮಂತರದ್ದು. ಈಗಷ್ಟೇ ಅಮೆರಿಕಾಗೆ ಹೋಗಿ, ಅಲ್ಲಿನ ಯಾವುದೋ ಮನೆಯ ನಕಲು ಚಿತ್ರ ಬರೆದು ನಂತರ ಮನೆ ಕಟ್ಟಿಸಿದ್ದರೆ ಆ ಮನೆ ಹೇಗಿರಬಹುದೋ, ಅಂತಹ ಕಟ್ಟಡಗಳು ಆ ಚಿತ್ರದಲ್ಲಿವೆ. ಆ ಚಿತ್ರದ ನಾಯಕ-ನಾಯಕಿ ಹಾಡಿ ಕುಣಿಯುವುದು ಸಹ ಯಾವುದೋ ಕನ್ನಡದ್ದಲ್ಲದ ತಾಣದಲ್ಲಿ. ಅವರ ಉಡುಗೆ-ತೊಡುಗೆಯಂತೂ ಬಿಡಿ, ಅವು ಈ ಜಗತ್ತಿನ ಶ್ರೀಮಂತ ದೇಶದವರು ತೊಡುವಂತಹ ದಿರಿಸುಗಳು. ಅವರಾಡುವ ಭಾಷೆಯಂತೂ ಕನ್ನಡ ಎಂದು ಹೇಳಬೇಕಷ್ಟೆ. ಇನ್ನು ಆ ನಟ ನಟಿಯರ ಮುಖವರ್ಣಿಕೆ ಅದು ಅವರು ಈಗಷ್ಟೇ ಬ್ಯೂಟಿಪಾರ್ಲರಿನಿಂದ ಬಂದವರಂತೆ, ಮುಖಕ್ಕೆ ಫೇಶಿಯಲ್ ಮಾಡಿಸಿಕೊಂಡಂತೆ, ಹುಬ್ಬನ್ನು ಈಗಷ್ಟೇ ಯಾರೋ ತೀಡಿ, ತಿದ್ದಿ, ಅನಗತ್ಯವಾದುದನ್ನು ಬೋಳಿಸಿರುವಂತೆ, ಹೆಂಗಳೆಯರ ಮುಖದ ಯಾವ ಮೂಲೆಯಲ್ಲೂ ರೋಮ ಕಾಣದಂತೆ ಬ್ಲೀಚಿಂಗ್ ಆಗಿರುತ್ತದೆ. ಒಟ್ಟಾರೆಯಾಗಿ ಪಾತ್ರ ಹತ್ತು ಮಕ್ಕಳ ತಾಯಿಯದ್ದೇ ಆಗಿರಬಹುದು, ಅಥವಾ ಯಾವುದೋ ತೀವ್ರ ಕಾಯಿಲೆಯಿಂದ ನರಳುತ್ತಿರುವವಳದಿರಬಹುದು. ಆದರೆ ಆ ಪಾತ್ರಧಾರಿ ಮಾತ್ರ 'ಫ್ರೆಶ್' ಆಗಿ ಕಾಣಬೇಕು. ಅತ್ಯಂತ ಸುಪುಷ್ಟವಾಗಿ, ಸದೃಢವಾಗಿರಬೇಕು. ಈಗಿನ ಚಿತ್ರಗಳಲ್ಲಿ ಗಾಂಧಾರಿಯಂತಹವಳ ಪಾತ್ರವೂ ಇದೇ ಮೌಲ್ಡಿನಲ್ಲಿ ಎರಕ ಹೊಯ್ದು ತೆಗೆದಂತಿರುತ್ತದೆ. ಇದಕ್ಕಾಗಿ ನಾವು ಆ ಚಿತ್ರ ತಯಾರಕರನ್ನು ನೇರವಾಗಿ ದೂಷಿಸು ವಂತೆಯೂ ಇಲ್ಲ. ಇಂದಿನ ಸಿನಿಮಾ ಮಾರುಕಟ್ಟೆಯಲ್ಲಿ ಇಂತಹುದೇ ಸಿನಿಮಾ ತಯಾರಿಸಬೇಕೆಂಬ ಅನಿವಾರ್ಯತೆ ಹುಟ್ಟಿದೆ. ಮತ್ತು ಚಿತ್ರ ತಯಾರಿಸುವ ಪ್ರತಿಯೊಬ್ಬರಿಗೂ ತನ್ನ ಸಿನಿಮಾ ನೂರು ದಿನ ಓಡಲಿ, ಅತಿ ಹೆಚ್ಚು ಲಾಭ ಗಳಿಸಲಿ ಎಂಬ ಆಸೆ. ಅದಕ್ಕಾಗಿಯೇ ಅವರು ತಮ್ಮ ಚಿತ್ರಕ್ಕೆ



ಮಾಡುವ ಪ್ರಚಾರದ ಭರಾಟೆಯೇ ಅತಿ ಹೆಚ್ಚಿನದು. ಎಷ್ಟೋ ಬಾರಿ ಒಂದು ಚಿತ್ರ ತಯಾರಿಸಲು ತಗಲುವ ವೆಚ್ಚಕ್ಕಿಂತ ಆ ಚಿತ್ರದ ಪ್ರಚಾರಕ್ಕಾಗಿ ತಗಲುವ ಖರ್ಚು ಹೆಚ್ಚಿನದು (ಉದಾಹರಣೆಗೆ, 'ಜೋಗಿ', 'ಅಹಂ ಪ್ರೇಮಾಸ್ಮಿ'). ಹೀಗಾಗಿ ಯಾವುದೇ ಚಿತ್ರವು ನಮ್ಮಲ್ಲಿ ತಯಾರಾಗಬೇಕಾದರೆ ಅದಕ್ಕೆ ಅಗತ್ಯವಾಗುವ ಹಣಕ್ಕಿಂತಲೂ ಹೆಚ್ಚು ಹಣ ತೊಡಗಿಸಬೇಕಾಗುತ್ತದೆ. ಆದರೆ ಇವುಗಳಲ್ಲಿ ಶೇಕಡ ಎರಡರಷ್ಟು ಮಾತ್ರ ಲಾಭ ಗಳಿಸುತ್ತವೆ. ಉಳಿದವುಗಳಲ್ಲಿ ಶೇಕಡ ಏಳರಷ್ಟು ಬಂಡವಾಳ ವಾಪಸು ತಂದುಕೊಡುತ್ತವೆ. ಉಳಿದವು ನಷ್ಟದ ಯಾದಿಯಲ್ಲಿ ಸೇರುತ್ತವೆ. ಇದು ಜಾಗತಿಕ ಸತ್ಯ. ಹಾಲಿವುಡ್ ಎಂಬ ಹಾಲಿವುಡ್‌ನಲ್ಲಿಯೂ ಯಶಸ್ಸು ಎಂಬುದು ಶೇಕಡ ಐದರಷ್ಟು ಮಾತ್ರ. ಆದರೂ ನಮ್ಮವರು ಭಿನ್ನ ಚಿತ್ರ ತೆಗೆಯುತ್ತೇವೆ ಎಂದು ಹೇಳಿಕೊಂಡು ಅದೇ ಪ್ರೋಟೋಟೈಪ್‌ಗಳನ್ನು ಸೃಷ್ಟಿಸಿ, ಅವುಗಳಿಗೆ ಲವ್ವು, ಸೆಕ್ಸು ಅಥವಾ ಕ್ರೈಮು ಎಂಬ ಹೂರಣವನ್ನು ತುಂಬುತ್ತಾರೆ.

ಈ ನಿರ್ಲಜ್ಜ ಲಾಭಬಡುಕತನಕ್ಕೆ ಕಾರಣವೇ ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣ. ಈ ಮೂರು 'ಕರಣ'ಗಳೂ ಈ ಸಮಾಜದಲ್ಲಿ ಹೇಗಾದರೂ ಲಾಭ ಗಳಿಸಿ, ಒಂದು ಸ್ವಂತ ಮನೆ ಮಾಡಿ, ಸ್ವಂತ ಕಾರು ಕೊಂಡು ಸಂತೃಪ್ತನಾಗಬೇಕೆಂಬ ಸ್ಥಿತಿಗೆ ಆಧುನಿಕ ಮಾನವನನ್ನು ದೂಡಿವೆ. ಇಂತಹ ಗುಣವುಳ್ಳ ಗಂಡಸನ್ನ ಈಗ ನಮ್ಮ ಮಾಧ್ಯಮಗಳು 'ಉಬರ್ ಸೆಕ್ಸುಯಲ್' ಎಂದು ಕರೆಯುತ್ತಿವೆ. ಆತನ ಗಂಡಸುತನದ ವೈಭವೀಕರಣವಲ್ಲದೆ, ಅವನ ಬುದ್ಧಿವಂತಿಕೆಯನ್ನೂ ಗಮನಿಸಿ ಎನ್ನುವ ಮಾಧ್ಯಮಗಳು, ಆ ಬುದ್ಧಿವಂತಿಕೆಯನ್ನು ಗುರುತಿಸಲು ಹಾಕಿಕೊಂಡಿರುವ ಮಾನದಂಡ ಮಾತ್ರ 'ಕೌನ್ ಬನೇಗಾ ಕರೋಡ್ ಪತಿ'ಯಲ್ಲಿ ಎಲ್ಲಾ ಪ್ರಶ್ನೆಗಳಿಗೆ ಉತ್ತರಿಸುವಂತಹದು.

ಈ ಪರಿಸ್ಥಿತಿಯಲ್ಲಿ ನಮ್ಮತನ ಎಂಬುದು ಉಳಿಯುವುದಾದರೂ ಹೇಗೆ ಸಾಧ್ಯ ? ಹೀಗಿರುವಾಗ ಜನರು ಯಾವ ಭಾಷೆಯ ಚಿತ್ರವನ್ನಾದರೂ ನೋಡುತ್ತಾರೆ. ಅವರಿಗೆ ನಮ್ಮ ಭಾಷೆಯದೇ ಚಿತ್ರ ನೋಡಬೇಕೆಂಬ 'ಒಳಗಿನ' ಒತ್ತಾಯಗಳಿಲ್ಲ. ಹೀಗಾಗಿ ಕನ್ನಡ ಚಿತ್ರಗಳ ಕುರಿತ ಅಭಿಮಾನ ಬೆಳೆಸಲು 'ಅಭಿಯಾನ'ಗಳನ್ನು ನಡೆಸಬೇಕಾದ ಅನಿವಾರ್ಯ ಉಂಟಾಗಿದೆ. ಮೇಲೆ ವಿವರಿಸಿದ ಭೂತಗಳಲ್ಲದೆ ಮತ್ತೊಂದು ಕನ್ನಡದ್ದೇ ಆದ ಭೂತ ಕನ್ನಡ ಚಿತ್ರರಂಗವನ್ನು ಕೊರೆಯುತ್ತಿದೆ. ಅದು ರಿಮೇಕ್ ಅಥವಾ ನಕಲು.

**ರಿಮೇಕ್ ಎಂಬ ರೋಗ**

ಇದು ಕನ್ನಡ ಚಿತ್ರರಂಗ ಮಾತ್ರವಲ್ಲ, ಇಡೀ ಜಾಗತಿಕ ಚಿತ್ರರಂಗವನ್ನು ಕಾಡುತ್ತಿರುವ ಒಂದು ರೋಗ. ಎಂದು ಲಾಭಬಡುಕ ಚಿತ್ರ ತಯಾರಿಕ ಕಂಪನಿಗಳು ವಿಪುಲವಾದವೋ ಅಂದು ಚಿತ್ರ ತಯಾರಿಕೆ ಎಂಬುದು ಕಾರ್ಪೋರೇಷನ್ ನಿರ್ದೇಶಿತ ಯಂತ್ರವಾಗಿಬಿಟ್ಟಿತು. ಆ ಯಂತ್ರಗಳು ನಡೆಯಲು ಸೃಜನಶೀಲ ಕಥೆಗಾರರು ನೀಡುವ ಸರಕು ಸಾಕಾಗದು. ಅವರು ಟರ್ನ್‌ಓವರ್ ವೀರರು. ಅವರಿಗೆ ತಮ್ಮ ಕಂಪನಿಯು ಆಯಾ

ಲೆಕ್ಕವರ್ಷದಲ್ಲಿ ಮಾಡಿದ ವಹಿವಾಟಿನ ಮೊತ್ತ ಮುಖ್ಯ. ಅದನ್ನು ಹಿಡಿದುಕೊಂಡೇ ಅವರು ತಮ್ಮ ಕಂಪನಿಯ ಷೇರುಗಳನ್ನು ಮಾರುತ್ತಾರೆ. ಅದಕ್ಕಾಗಿ ಅವರಿಗೆ ತಯಾರಾಗುವ ಚಿತ್ರಗಳ ಗುಣಮಟ್ಟಕ್ಕಿಂತ ಸಂಖ್ಯೆ ಮುಖ್ಯವಾಗುತ್ತದೆ. ಈ ಸಂಖ್ಯೆ ಹೆಚ್ಚಿಸುವ ದಂಧೆಯಾಗಿ ಅವರು ಇತರ ಭಾಷೆಗಳಲ್ಲಿ ತಯಾರಾಗುವ ಚಿತ್ರಗಳ ಹಕ್ಕುಗಳನ್ನು ಖರೀದಿಸಿ ನಕಲುಮಾಡಲು ಆರಂಭಿಸುತ್ತಾರೆ. ಹಾಲಿವುಡ್‌ನ ಚಲನಚಿತ್ರೋದ್ಯಮದಲ್ಲಿ ಈಗ ಶೇಕಡ ಅರವತ್ತರಷ್ಟು ನಕಲು ಅಥವಾ ರಿಮೇಕ್ ಚಿತ್ರಗಳು ತಯಾರಾಗುತ್ತಿವೆ. ಇದೇ ಪ್ರವೃತ್ತಿ ನಮ್ಮ ಕನ್ನಡ ಚಿತ್ರರಂಗದಲ್ಲೂ ಜರುಗುತ್ತಿದೆ. ಕಳೆದ ವರ್ಷ ನಮ್ಮಲ್ಲಿ ತಯಾರಾದ ೧೦೬ ಚಿತ್ರಗಳಲ್ಲಿ ೪೦ ಚಿತ್ರಗಳು ನೇರ ನಕಲು, ೪೫ ಚಿತ್ರಗಳು ರಿಮಿಕ್ಸ್ (ಇದು ನಮ್ಮ ಚಿತ್ರರಂಗಕ್ಕೆ ಸೀಮಿತವಾದ ಮತ್ತೊಂದು ಕಾಯಿಲೆ. ಇಲ್ಲಿ ಸರ್ಕಾರದ ತೆರಿಗೆ ವಿನಾಯಿತಿ, ಸಬ್ಸಿಡಿ ಮುಂತಾದ ಸವಲತ್ತುಗಳನ್ನು ಪಡೆಯಲೆಂದು ಯಾವುದೇ ಒಂದು ಚಿತ್ರದ ರೂಪವಲ್ಲದ, ಹತ್ತಾರು ಚಿತ್ರಗಳಿಂದ ಕದ್ದು ರೂಪಿಸಿದ ಕಥೆಯನ್ನುಳ್ಳ ಚಿತ್ರಗಳು ತಯಾರಾಗುತ್ತವೆ. ಅದನ್ನು ರಿಮಿಕ್ಸ್ ಅಥವಾ 'ಚಿತ್ರಾನ್ನ' ಎಂದು ಕರೆಯಬಹುದು), ಉಳಿದವು ಸ್ವತಂತ್ರ ಕೃತಿಗಳು. (ಈ ಸಂಖ್ಯೆಗಳನ್ನು ಚಲನಚಿತ್ರ ಪತ್ರಕರ್ತರಾದ ಬಾ. ನ. ಸುಬ್ರಹ್ಮಣ್ಯ ಅವರಿಂದ ಪಡೆದಿದ್ದೇನೆ).

ಅಂದರೆ ನಮ್ಮಲ್ಲಿ ತಯಾರಾಗುವ ಚಿತ್ರಗಳಲ್ಲಿ ಸ್ವತಂತ್ರ ರಚನೆ ಎಂಬುದು ಮೈನಾರಿಟಿ ಆಗಿಬಿಟ್ಟಿದೆ. ಮೊದಲನೆಯದಾಗಿ, ಸಾಹಸ ಪ್ರವೃತ್ತಿ ಮತ್ತು ಹೊಸದನ್ನು ಮಾಡುವ ತುಡಿತವಿಲ್ಲದ ನಿರ್ಮಾಪಕರು ಇದಕ್ಕೆ ಕಾರಣವಾದರೆ ಮತ್ತೊಂದು ಕಡೆಯಿಂದ, ನಮ್ಮಲ್ಲಿರುವ ನಾಯಕರಿಗೆ (ಅವರನ್ನು ನಟರು ಎಂದು ಕರೆಯಲು ಮನಸ್ಸು ಹಿಂಜರಿಯುತ್ತದೆ. ಆದ್ದರಿಂದ ತಾರಾಮಣಿಗಳು ಎಂದು ಗುರುತಿಸಬಹುದು) ಹೊಸ ಕಥೆಯೊಂದನ್ನ ಅರ್ಥೈಸಿಕೊಳ್ಳುವ, ಅದನ್ನ ತೆರೆಯಮೇಲೆ ರೂಪಿಸಬೇಕೆಂಬ ವ್ಯವಧಾನವೇ ಇಲ್ಲ. ಅವರು ಆದಷ್ಟೂ ಬೇಗ, ಅಂದರೆ ತಮ್ಮ ಮಾರುಕಟ್ಟೆ ನಡೆಯುತ್ತಿರುವ ಅವಧಿಯಲ್ಲಿ ಅನೇಕ ಚಿತ್ರಗಳನ್ನು ಮಾಡಬೇಕೆಂಬ ಧಾವಂತ ಉಳ್ಳವರು. ಹೀಗಾಗಿ ಯಾವುದೋ ಕಾದಂಬರಿಯನ್ನೋ ಅಥವಾ ಕಥೆಯನ್ನೋ ಆಧರಿಸಿದ ಚಿತ್ರಕಥೆ ರಚಿಸಿದವನಿಗೆ ಈ ತಾರಾಮಣಿಗಳು ಮಾತಿಗೂ ಅವಕಾಶ ಕೊಡುವುದಿಲ್ಲ. ಹೀಗಾಗಿ ಇವರ ಬಳಿ ಚಿತ್ರ ತಯಾರಿಸಲೆಂದು ಹೋದ ನಿರ್ಮಾಪಕನಿಗೆ ಈ ತಾರಾಮಣಿಗಳೇ ಯಾವುದೋ ತಮಿಳು ಇಲ್ಲ ತೆಲುಗಿನ ಯಶಸ್ವಿ ಚಿತ್ರದ ಕ್ಯಾಸೆಟ್ಟು ನೀಡುತ್ತಾರೆ. ಆ ತಾರಾಮಣಿಯಿಂದಲೇ ತನ್ನ ವ್ಯಾಪಾರವೆಲ್ಲಾ ಆಗುವುದೆಂದು ಭಾವಿಸಿಕೊಂಡಿರುವ ನಿರ್ಮಾಪಕ ಅಂತೆಯೇ ಒಂದು ನಕಲು ತಯಾರಿಸಲು ತಂಡ ತಯಾರಿಸುತ್ತಾನೆ. ನಕಲು ಚಿತ್ರಗಳು ಓತಪ್ರೋತವಾಗಿ ಬರುತ್ತಲೇ ಇರುತ್ತವೆ. ಈಗ ಕರ್ನಾಟಕ ಸರ್ಕಾರ ಇಂತಹ ಚಿತ್ರಗಳಿಗೂ ಸಂಪೂರ್ಣ ತೆರಿಗೆ ವಿನಾಯ್ತಿ ನೀಡಲು ತೀರ್ಮಾನಿಸಿದೆ. ಇನ್ನು, ಈ ನಕಲು ರೋಗದ ಹಾವಳಿ ನಿರಂತರ.

ಇದರಿಂದಾಗಿ ಕನ್ನಡದ ನೋಡುಗ, ವಿಶೇಷವಾಗಿ ಮಧ್ಯಮವರ್ಗದ ಜನ ಚಲನಚಿತ್ರಗಳನ್ನು ನೋಡುವುದನ್ನೇ ಬಿಟ್ಟಿದ್ದಾರೆ. ಆ ನಕಲಿಗಿಂತ ಟೆಲಿವಿಷನ್ನಿನಲ್ಲಿ ಬರುವ ದೈನಂದಿನ ಧಾರಾವಾಹಿಗಳೇ ವಾಸಿ ಎಂಬುದು ಅವರ ಅಭಿಪ್ರಾಯ. ಹೀಗಾಗಿ ಕನ್ನಡ ಚಿತ್ರಗಳನ್ನು ನೋಡಲು ಹೋಗುವ ಜನ ತೀರಾ ಕೆಳವರ್ಗದವರಾಗಿರುತ್ತಾರೆ ಅಥವಾ ದಿನಗೂಲಿ ಕಾರ್ಮಿಕರಾಗಿರುತ್ತಾರೆ. ಇಂತಹ ಜನಮಾನಸಕ್ಕೆ ನಮ್ಮ ಚಿತ್ರಗಳು ಕೊಡುತ್ತಿರುವ ಸರಕು ಮಾತ್ರ ಆದಾಗಲೇ ಚರ್ಚಿಸಿದ ಲವ್ವು, ಸೆಕ್ಸು, ಕ್ರೈಮು ಅಥವಾ ನಕಲು. ಒಟ್ಟಾರೆಯಾಗಿ ಕನ್ನಡ ಚಿತ್ರರಂಗದಲ್ಲಿ ಕನ್ನಡತನ ಎಂಬುದೇ ಮೈನಾರಿಟಿ !

**ಮೂರ್ಖರ ಪೆಟ್ಟಿಗೆಯ ಸಾಧನೆ - ವೇದನೆ**

ಈ ಲೇಖನದ ಆರಂಭದಲ್ಲಿಯೇ ಟೆಲಿವಿಷನ್ ಉದ್ಯಮದಲ್ಲಿ ಮೂಡುತ್ತಿರುವ ಏಕತಾನತೆಯನ್ನು ಕುರಿತು ಚರ್ಚಿಸಿದೆ. ಅದೇ ಮಾತಿನ ಮುಂದುವರಿಕೆ ಎಂಬಂತೆ ಕನ್ನಡದ ಟೆಲಿವಿಷನ್ ಉದ್ಯಮದ ಮೇಲೆ ಈ ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣಗಳಿಂದ ಆಗಿರುವ ಪರಿಣಾಮಗಳನ್ನು ಗಮನಿಸೋಣ. ೧೯೮೫ರಲ್ಲಿ ಬೆಂಗಳೂರು



ದೂರದರ್ಶನದಲ್ಲಿ ಮೊದಲ ಸಾಪ್ತಾಹಿಕ ಧಾರಾವಾಹಿ ಪ್ರಸಾರವಾಯಿತು. ಅಲ್ಲಿಂದಾಚೆಗೆ ಕನ್ನಡ ಹವ್ಯಾಸಿ ರಂಗಭೂಮಿಯ ಪ್ರಮುಖರೆಲ್ಲರೂ ಧಾರಾವಾಹಿ ನಿರ್ದೇಶನವು ತಮ್ಮ ಸಿನಿಮಾ ತಯಾರಿಕೆಯ ಆಸೆಯನ್ನು ಒಂದು ಮಟ್ಟಕ್ಕೆ ತುಂಬುತ್ತದೆ ಎಂಬ ಕಾರಣಕ್ಕೆ ಧಾರಾವಾಹಿ ತಯಾರಿಕಾ ಲೋಕಕ್ಕೆ ಬಂದರು. ಈ ಮಾತಿಗೆ ಪುಷ್ಟಿ ಎಂಬಂತೆ ಸಾಕಷ್ಟು ಉತ್ತಮ ಕಥೆಗಳು ಧಾರಾವಾಹಿಗಳಾಗಿ ಬಂದುದನ್ನು ನಾವು ನೋಡಬಹುದು. ನಿಧಾನವಾಗಿ ಕನ್ನಡದಲ್ಲಿ ಖಾಸಗೀ ಚಾನೆಲ್ಲುಗಳು ಆರಂಭವಾದವು. ಆರಂಭದ ದಿನಗಳಲ್ಲಿ ಅವುಗಳು ಹೆಚ್ಚು ಜನಪ್ರಿಯವಾಗಲಿಲ್ಲವಾದರೂ ಉದಯ ಟಿ.ವಿ. ಆರಂಭಗೊಂಡ ಆರು ವರ್ಷಗಳಲ್ಲಿ ತನ್ನದೇ ಆದ ನೋಡುಗರನ್ನು ಗಳಿಸಿಕೊಂಡಿತ್ತು. ಇದಕ್ಕಾಗಿ ಆ ಚಾನೆಲ್ಲಿನ ಮಾಲೀಕರು ಸಿನಿಮಾ ಆಧಾರಿತ ಕಾರ್ಯಕ್ರಮಗಳನ್ನು ಹೆಚ್ಚು ಅವಲಂಬಿಸಿದರು. ಪ್ರತಿದಿನ ಚಾನೆಲ್ಲೊಂದರಲ್ಲಿ ಪುಕ್ಕಟೆಯಾಗಿ ಕನ್ನಡ ಸಿನಿಮಾ ನೋಡಬಹುದೆಂಬುದೇ ನೋಡುಗರಿಗೆ ಆನಂದ-ಆಕರ್ಷಣೆ ಉಂಟುಮಾಡಿತ್ತು. ನಂತರ ಆ ಚಾನೆಲ್ಲಿನವರು ಧಾರಾವಾಹಿಗಳ ತಯಾರಿಕೆ ಆರಂಭಿಸಿದಾಗಲೂ ಸಿನಿಮಾದ ಜನರನ್ನೇ ಆಯ್ದುಕೊಂಡರು. ನಿರ್ದೇಶಕ ಜನಪ್ರಿಯ ಸಿನಿಮಾದವನು, ನಟವರ್ಗ ಸಹ ಅಲ್ಲಿಯವನೇ ಎಂಬ ನಿಯಮದೊಂದಿಗೆ ಆ ಖಾಸಗೀ ಚಾನೆಲ್ ದೂರದರ್ಶನ ಎಂಬ ಸರ್ಕಾರೀ ಚಾನೆಲ್ಲಿನ ಜೊತೆ ಸ್ಪರ್ಧೆಗೆ ಇಳಿಯಿತು. ಅಲ್ಲಿ ಜನರಿಗೆ ಬೌದ್ಧಿಕವಾದುದನ್ನು ಏನನ್ನಾದರೂ ಕೊಡಬೇಕೆಂಬುದಕ್ಕಿಂತ ಹೇಗಾದರೂ ಜನರನ್ನು ತಮ್ಮ ಟಿ.ವಿ. ನೋಡುವಂತೆ ಪ್ರೇರೇಪಿಸುವುದೇ ಪ್ರಧಾನವಾಗಿತ್ತು. ಹೀಗಾಗಿ ದೂರದರ್ಶನದಲ್ಲಿ ಬಿತ್ತರವಾಗುವ ಕಾರ್ಯಕ್ರಮಗಳನ್ನು ನೋಡುವ ಒಂದು ನೋಡುವರ್ಗ, ಖಾಸಗಿ ಚಾನೆಲ್ಲಿನ ಕಾರ್ಯಕ್ರಮ ನೋಡುವ ಇನ್ನೊಂದು ವರ್ಗ ಎಂದು ಇಬ್ಬಗೆಯ ನೋಡುಗವರ್ಗವೇ ಬೆಳೆದುಬಂದಿತು. ನಂತರದ ದಿನಗಳಲ್ಲಿ ಈ ಟಿ.ವಿ. ಕನ್ನಡ, ಕಾವೇರಿ, ಸುಪ್ರಭಾತ ಎಂಬ ಅನೇಕ ಕನ್ನಡ ಖಾಸಗಿ ಚಾನೆಲ್ಲುಗಳು ಆರಂಭವಾದವು. ಇವುಗಳಲ್ಲಿ ಈ ಉದ್ಯಮಕ್ಕೆ ತೊಡಗಿಸಬೇಕಾದ ಹಣದ ಪರಿಕಲ್ಪನೆಯಿದ್ದು ಉಳಿದುಕೊಂಡವು 'ಈ ಟಿ.ವಿ.' ಮತ್ತು 'ಉದಯ' ಚಾನೆಲ್ಲುಗಳು ಮಾತ್ರ. ಉಳಿದ ಚಾನೆಲ್ಲುಗಳು ನಷ್ಟ ಭರಿಸಲಾಗದೆ ಬಾಗಿಲೆಳೆದುಕೊಂಡವು. ಅಲ್ಲಿಂದಾಚೆಗೆ ಆರಂಭವಾದದ್ದು ಖಾಸಗಿ ಒಡೆತನದ ಕಂಪನಿಗಳ ನಡುವಿನ ಸ್ಪರ್ಧೆ. ಅಲ್ಲಿ ಜನಪ್ರಿಯತೆಯ ಮಾನದಂಡವನ್ನಾಧರಿಸಿ ಜಾಹೀರಾತು ನೀಡುವ ಕಂಪನಿಗಳನ್ನು ಓಲೈಸುವ ಗುಣವಷ್ಟೇ ಉಳಿಯಿತು. ಗುಣಮಟ್ಟ ಗೌಣವಾಯಿತು. ಟಿ.ಆರ್.ಪಿ. ಎಂಬ ಸರಾಸರಿ ಲೆಕ್ಕವನ್ನು ನೋಡಿ ಜನಪ್ರಿಯತೆಯನ್ನು ಅಳೆಯುವ ಅಭ್ಯಾಸವೊಂದಿದೆ. ಅದೇ ಮುಖ್ಯವಾಯಿತು. ಯಾವ ಕಾರ್ಯಕ್ರಮ ಈ ರೇಟಿಂಗ್ ಪಟ್ಟಿಯಲ್ಲಿ ಬರುತ್ತದೋ ಅದು ಮಾತ್ರ ಉಳಿದುಕೊಂಡು ರೇಟಿಂಗ್‌ನಲ್ಲಿ ಕಾಣಿಸಿಕೊಳ್ಳದ ಕಾರ್ಯಕ್ರಮಗಳು ಗರ್ಭಪಾತಕ್ಕೆ ಒಳಗಾದವು. ಈ ಹಾದಿಯಲ್ಲಿ ದೂರದರ್ಶನಕ್ಕೆಂದು ಗಂಭೀರವಾಗಿರುವ ಕಥೆ ಹುಡುಕಿ ಕಾರ್ಯಕ್ರಮ ತಯಾರಿಸುತ್ತಿದ್ದವರ ಗುಂಪು ಒಡೆದು ಒಂದಷ್ಟು ಜನ 'ಉದಯ'ದ ಹಿಂದೆ ಮತ್ತೊಂದಿಷ್ಟು ಜನ 'ಈ ಟಿ.ವಿ.'ಯ ಹಿಂದೆ ಉಳಿದರು. ಯಾರು ಎಲ್ಲಿದ್ದರೂ ಅವರ ಗುರಿ ಮಾತ್ರ ನೋಡುಗನಿಗೆ ಗುಣಮಟ್ಟದ ಕಾರ್ಯಕ್ರಮ ನೀಡಿ, ಮನ್ನಣೆ ಪಡೆಯುವುದಕ್ಕಿಂತ ಟಿ.ಆರ್.ಪಿ.ಯಲ್ಲಿ ಕಾಣಿಸಿಕೊಳ್ಳುವುದೇ ಆಗಿತ್ತು. ಹೀಗಾದಾಗ ಉತ್ತಮ ಧಾರಾವಾಹಿ ಎಂಬ ಕಲ್ಪನೆಯೇ ಬದಲಾಗತೊಡಗಿತು. ಅದು ಅನಿವಾರ್ಯ ಎಂಬಂತೆ ಬಾಲಾಜಿ ಟೆಲಿಫಿಲ್ಮ್ ಕಂಪನಿ ತಯಾರಿಸುವ (ಅದಾಗಲೇ ಚರ್ಚಿತ ಪ್ರೋಟೋಟೈಪ್‌ಗಳು) ಧಾರಾವಾಹಿಗಳ ಸ್ವರೂಪವನ್ನೇ ಉಳ್ಳ ಧಾರಾವಾಹಿಗಳು ಕನ್ನಡದಲ್ಲಿಯೂ ಕಾಣಿಸಿಕೊಳ್ಳಲಾರಂಭಿಸಿದವು. ಆಕಸ್ಮಿಕವಾಗಿ ಈ ಸ್ವರೂಪ ಬಿಟ್ಟು, ಹೊಸದು ಮತ್ತು 'ಒಳ್ಳೆಯದು' ಎಂಬಂತಹವು ತಯಾರಾದರೂ ಅಂತಹ ಧಾರಾವಾಹಿಗಳು ಬಹುಕಾಲ ಉಳಿಯಲಿಲ್ಲ. (ಪ್ರಕಾಶ್ ಬೆಳವಾಡಿ ನಿರ್ದೇಶನದ 'ಗರ್ವ' ಇದಕ್ಕೆ ಉತ್ತಮ ಉದಾಹರಣೆ.) ಇದೇ ಸಂದರ್ಭದಲ್ಲಿ ಕನ್ನಡದ ಖಾಸಗಿ ಟೆಲಿವಿಷನ್ ಚಾನೆಲ್ಲುಗಳಿಗೆ ಬಂಡವಾಳ ಹೂಡಿ ಧಾರಾವಾಹಿ ತಯಾರಿಸುವುದಕ್ಕೆ ಬೇಕಾದ ಹಣ ಹೆಚ್ಚಾಗುತ್ತಾ ಬಂದಿತು. ಇದಕ್ಕೆ ಚಾನೆಲ್ಲಿಗೆ ಕಟ್ಟಬೇಕಾದ ಟೆಲಿಕಾಸ್ಟ್ ಶುಲ್ಕ ಮತ್ತು ತಯಾರಿಕಾ ವೆಚ್ಚದಲ್ಲಿನ ಹೆಚ್ಚಳ ಕಾರಣವಾಗಿತ್ತು. ಇದರಿಂದಾಗಿ ಅವರೆಗೆ ನಮ್ಮಲ್ಲಿದ್ದ ಸಣ್ಣ ಹೂಡಿಕೆದಾರರು

ಹಿಂದೆಸರಿದರು. ನೆರೆರಾಜ್ಯದ ಚಾನೆಲ್ಲುಗಳಿಗೆ ಕಾರ್ಯಕ್ರಮ ತಯಾರಿಸುತ್ತಿದ್ದ ಕಾರ್ಪೊರೇಟ್ ಕಂಪನಿಗಳು ಕನ್ನಡ ಧಾರಾವಾಹಿ ನಿರ್ಮಾಣಕ್ಕೆ ಇಳಿದವು. ಹೀಗೆ ಬಂದವುಗಳಲ್ಲಿ ಈಗ ಬಾಲಾಜಿ, ನಿಂಬಸ್, ಮಣಿಪಾಲ್ ಎಂಟರ್‌ಟೈನರ್ಸ್, ಆರ್.ಪಿ.ಜಿ. ಮತ್ತು ಸರೆಗಮ ಎಂಬ ಕಂಪನಿಗಳು ಉಳಿದುಕೊಂಡಿವೆ. ಮತ್ತೊಂದಷ್ಟು ಕಂಪನಿಗಳು ತಳ ಊರುವ ಪ್ರಯತ್ನ ಮಾಡುತ್ತಿವೆ. ಕನ್ನಡದ ಬಡ ನಿರ್ಮಾಪಕ ಪ್ರಾಯೋಜಿತ ಧಾರಾವಾಹಿ ತಯಾರಿಕೆಯಿಂದ ಸಂಪೂರ್ಣ ಹಿಂದೆ ಸರಿದಿದ್ದಾನೆ. ಇನ್ನು ಚಾನೆಲ್ಲಿನವರು ಸ್ವತಃ ನಿರ್ಮಿಸುತ್ತಿರುವ ರಾಯಧನ (ರಾಯಲ್ಟಿ) ಕಾರ್ಯಕ್ರಮಗಳಲ್ಲಿಯೂ ಕಾರ್ಪೊರೇಟ್ ಕಂಪನಿಗಳು ಕಾಲಿಡುತ್ತಿರುವುದರಿಂದ ನಮ್ಮಲ್ಲಿದ್ದ ಕೆಲ ಸಣ್ಣ ನಿರ್ಮಾಪಕರು ಸಹ ತಮ್ಮ ಸಂಸ್ಥೆಗಳನ್ನು ಕಾರ್ಪೊರೇಟ್ ಕಂಪನಿಗಳಂತೆಯೇ ರೂಪಿಸಲು ಪ್ರಯತ್ನಿಸುತ್ತಿದ್ದಾರೆ. ಇವೆಲ್ಲವುಗಳ ಫಲಶ್ರುತಿಯಾಗಿ ಕನ್ನಡ ಧಾರಾವಾಹಿಗಳಲ್ಲಿ ಉತ್ತಮ ವಸ್ತುವನ್ನ ಅಥವಾ ಕಥೆಯನ್ನ ನೋಡುವುದಕ್ಕಿಂತ ನೋಡುಗನ ಎದುರಿಗೆ ಬರುತ್ತಿರುವುದು ಕೇವಲ ರೋಚಕ, ಪ್ರಚೋದಕ, ವೈಭವೀಕೃತ, ಅತಿರಂಜನೆಯ ಗುಣವುಳ್ಳ ದೃಶ್ಯಗಳು.

ಇವುಗಳ ನಡುವೆ ಧಾರಾವಾಹಿಯ ಲೋಕಕ್ಕೂ ರಿಮೇಕ್ ರೋಗ ತಗುಲಿದೆ. ಈಗ ಕನ್ನಡದಲ್ಲಿ ಬಿತ್ತರವಾಗುತ್ತಿರುವ ದೈನಿಕ ಧಾರಾವಾಹಿಗಳು ೩೫. ಇವುಗಳಲ್ಲಿ ೧೩ ಧಾರಾವಾಹಿಗಳು ನಕಲು ಅಥವಾ ರಿಮೇಕ್. ಕನ್ನಡ ಸಿನಿಮಾದಲ್ಲಿರುವ ರಿಮೇಕ್ ರೋಗ ಕುರಿತು ಚರ್ಚಿಸುತ್ತಾ ಯಾವ ವಿವರಗಳನ್ನು ಈ ಹಿಂದೆಯೇ ತಿಳಿಸಿದ್ದೇನೋ ಅದೇ ಬಗೆಯ ಸಂಕಷ್ಟಗಳು ಧಾರಾವಾಹಿ ಲೋಕಕ್ಕೂ ಬಂದಿಳಿಯುತ್ತಿದೆ. ಇಲ್ಲಿ ಹೊಸತನ ಎಂಬುದು ನಿಧಾನವಾಗಿ ನಾಪತ್ತೆಯಾಗುತ್ತಿದೆ. ಇದರಿಂದ ಕನ್ನಡ ಕಾರ್ಯಕ್ರಮಗಳ ನೋಡುಗ ಯಾವ ಕಾರಣಕ್ಕಾಗಿ ಕನ್ನಡ ಚಿತ್ರಗಳಿಂದ ದೂರ ಉಳಿದಿದ್ದನೋ ಅದೇ ಕಾರಣಕ್ಕಾಗಿ ಟೆಲಿವಿಷನ್ನಿನಿಂದಲೂ ಹಿಂದೆ ಸರಿಯುತ್ತಿದ್ದಾನೆ. ಇದರಿಂದಾಗಿ ಖಾಸಗೀಕರಣ ಮತ್ತು ಜಾಗತೀಕರಣದಿಂದ ಆಗುತ್ತಿರುವ ಸಮಸ್ಯೆಗಳ ಮತ್ತೊಂದು ಮುಖ ಕಣ್ಣೆದುರು ಬಿಚ್ಚಿಕೊಳ್ಳುತ್ತಿದೆ. ಈಗ ಇದೇ ಕಾರಣವಾಗಿ ಟೆಲಿವಿಷನ್ನಿನಲ್ಲಿ ಮೂಡಿಬರುತ್ತಿರುವ ಮತ್ತೊಂದು ಬಗೆಯ ಕಾರ್ಯಕ್ರಮಗಳನ್ನು ಕುರಿತು ಚರ್ಚಿಸೋಣ.

**ಟೆಲಿವಿಷನ್ನಿನಲ್ಲಿ ಕ್ರೈಂ ಕಾರ್ಯಕ್ರಮಗಳು**

ಅದಾಗಲೇ ಖಾಸಗೀ ಚಾನೆಲ್ಲುಗಳ ಲಾಭಬಡುಕುತನ ಕುರಿತು ಚರ್ಚಿಸಲಾಗಿದೆ. ಈ ಲಾಭ ಗಳಿಸುವ ಹುನ್ನಾರದಲ್ಲಿ ಹುಟ್ಟಿದ್ದೇ ಸುದ್ದಿಯನ್ನ ರೋಚಕವಾಗಿಸುವ ಗುಣ. ಅದೇ ಗುಣದ ಮುಂದುವರಿಕೆಯಂತೆ ಪತ್ರಿಕೋದ್ಯಮದಲ್ಲಿ ಕ್ರೈಂ ಕುರಿತಂತೆ ಅನೇಕ ಪತ್ರಿಕೆಗಳು ಆರಂಭವಾದವು. ಅವುಗಳ ಹಣ ಗಳಿಕೆಯನ್ನು ಕಂಡ ಧಾರಾವಾಹಿ ಲೋಕದವರು ಮೊದಲಿಗೆ ಪೊಲೀಸರ ಸಾಹಸಗಳನ್ನು ತೋರುವ ಸಣ್ಣ ಮಟ್ಟದ ಪ್ರಯತ್ನವನ್ನು ದೂರದರ್ಶನದಲ್ಲಿ (ಸರ್ಕಾರೀ ಚಾನೆಲ್ಲಿನಲ್ಲಿ) ಆರಂಭಿಸಿದರು. ಅದು ಸಮಾಜಘಾತುಕರನ್ನು ಪೊಲೀಸರು ಬಂಧಿಸಿದ ಮತ್ತು ಆ ಘಾತುಕರನ್ನ ಕ್ಯಾಮೆರಾದೆದುರು ತೋರುವ ಒಂದು ಬಗೆಯ ತೀರಾ ತೆಳು ಪ್ರಯತ್ನವಾಗಿತ್ತು. ಅಲ್ಲಿ ಪಾತಕವೊಂದರ ಒಳಗಿಳಿದು ಆ ಪಾತಕದ ಹಿಂದಿನ ಸಾಮಾಜಿಕ, ಆರ್ಥಿಕ, ರಾಜಕೀಯ ಕಾರಣಗಳನ್ನು ವಿಶ್ಲೇಷಿಸುವ ಗುಣ ಇರಲಿಲ್ಲ. ಇದೇ ಸಂದರ್ಭದಲ್ಲಿ ಉದಯ ಟಿ.ವಿ.ಯಲ್ಲಿ ಇಂತಹ ವಿವರಗಳನ್ನುಳ್ಳ ಸಾಪ್ತಾಹಿಕ ಕಾರ್ಯಕ್ರಮವೊಂದು ಆರಂಭವಾಯಿತು. ಅದನ್ನು ರೂಪಿಸಿದ್ದವರು ಈಗ ಎಂ.ಪಿ. ಆಗಿರುವ ತೇಜಸ್ವಿನಿಯವರು. ಆ ಕಾರ್ಯಕ್ರಮದಲ್ಲಿ ಬಳಕೆಯಾಗುತ್ತಿದ್ದ ಕನ್ನಡ ಭಾಷೆಯೇ ಆ ಕಾಲಕ್ಕೆ ತೀರಾ ಗಾಬರಿ ಹುಟ್ಟಿಸುವಂತಹುದಾಗಿತ್ತು. ಮೊದಲ ಬಾರಿಗೆ ವಾರ್ತೆಗಳಲ್ಲಿ ಬಳಸುವ ಸೌಜನ್ಯಯುತ ಕನ್ನಡವನ್ನ ಬಿಟ್ಟುಕೊಟ್ಟು ಬೀದಿಯ ಜನರು ಆಡುವ ಭಾಷೆ ಆ ಕಾರ್ಯಕ್ರಮದಲ್ಲಿ ಬಳಕೆಯಾಗಿತ್ತು. ಅದರಿಂದಾಗಿ ಆ ಕಾರ್ಯಕ್ರಮವನ್ನು ಕನ್ನಡಿಗರು ಅಚ್ಚರಿ ಮತ್ತು ಬೆರಗುಗಣ್ಣುಗಳಿಂದ ನೋಡಿದರು. ಈ ಯಶಸ್ಸಿನ ಬೆನ್ನಲ್ಲೇ ಹಳೆಯ ಕ್ರೈಂಗಳನ್ನು ಮತ್ತೆ ನಾಟಕೀಕರಿಸಿ ಧಾರಾವಾಹಿಯಾಗಿ ತೋರಿಸುವ ಸಣ್ಣ ಪ್ರಯತ್ನಗಳು ಜರುಗಿದವು. ಈ ಕಾರ್ಯಕ್ರಮಗಳಲ್ಲಿ ಇದ್ದ ಸಿನಿಮೀಯ ಗುಣದಿಂದಾಗಿ ಇವು ಭಾರೀ ಜನಪ್ರಿಯತೆ ಪಡೆಯದಿದ್ದರೂ ರೇಟಿಂಗ್‌ನಲ್ಲಿ ಕಾಣಿಸಿಕೊಂಡವು. ಅವುಗಳ ಯಶಸ್ಸಿನ ಬೆನ್ನಲ್ಲೇ ಕನ್ನಡದ ಎರಡು ಖಾಸಗಿ ಚಾನೆಲ್ಲುಗಳು ಪೂರ್ಣಪ್ರಮಾಣದ ಕ್ರೈಂ ಆಧಾರಿತ ಸುದ್ದಿಚಿತ್ರಗಳನ್ನು ಅತೀ ರೋಚಕ ಹಿನ್ನೆಲೆ ಧ್ವನಿಯೊಡನೆ ತೋರಿಸಲಾರಂಭಿಸಿದವು. ಇಂತಹ ಕಾರ್ಯಕ್ರಮ ತಯಾರಿಸುತ್ತಿರುವವರು ಯಾವುದೇ ರೀತಿಯ ಸಮಜಾಯಿಷಿಗಳನ್ನು ನೀಡಿದರೂ ಇವು ಹುಟ್ಟಿದ್ದು ಮಾತ್ರ ಅದೇ ಖಾಸಗೀಕರಣ ತಂದಿಟ್ಟ ಸ್ಪರ್ಧಾತ್ಮಕ ಜಗತ್ತಿನಿಂದ. ಇದರಿಂದಾಗಿ ಸಾಮಾನ್ಯ ಜನರ ಮೇಲೆ ಆಗಿರುವ ಪರಿಣಾಮಗಳನ್ನು ಕುರಿತು ಪ್ರತ್ಯೇಕ ಚರ್ಚೆಯೇ ಆಗಬೇಕಿದೆ. ಆದರೆ ಈ ಕಾರ್ಯಕ್ರಮಗಳು ತಮ್ಮ ಒಡಲಿನಲ್ಲಿ ಇರಿಸಿಕೊಂಡಿರುವ ಬೆಂಕಿಯಿಂದಾಗಿಯೇ ನೋಡುಗವರ್ಗವೊಂದನ್ನು ಸೃಷ್ಟಿಸಿಕೊಂಡಿವೆ. ಆ ನೋಡುಗವರ್ಗದ್ದು ಹತಾಶ ಮನಃಸ್ಥಿತಿ. ಅವರಲ್ಲಿ ಕೆಳಮಧ್ಯಮವರ್ಗದವರೇ ಹೆಚ್ಚು ಸಂಖ್ಯೆಯವರು. ಅವರಿಗೆ ತಮ್ಮ ದುಡಿಮೆಯಿಂದ ಒದಗಿಬರುತ್ತಿರುವ ಹಣ ಬದುಕಲು ಸಾಲದು ಎಂಬ ರೊಚ್ಚು ಒಂದೆಡೆಗಿದ್ದರೆ, ತಾನೂ ಹೇಗಾದರೂ ಹಣ ಗಳಿಸಬೇಕೆಂಬ ತುಡಿತ ಮತ್ತೊಂದೆಡೆ. ಅವರ ಇಚ್ಛೆಗೆ ನೀರೆರೆಯುವ ಗುಣ ಈ ಕ್ರೈಂ ಕಾರ್ಯಕ್ರಮಗಳಿಗಿದೆ. ಅವು ಆ ನೋಡುಗನಿಗೆ ಅಪರಾಧ ಜಗತ್ತನ್ನ ಪರಿಚಯಿಸುವುದಲ್ಲದೆ ಅಪರಾಧ ಹೇಗಾಗುತ್ತದೆ ಎಂಬ ಪರಿಚಯವನ್ನೂ ಮಾಡುತ್ತಿವೆ. ಇದರಿಂದಾಗಿ ಅದಾಗಲೇ ಹತಾಶನಾಗಿರುವ ನೋಡುಗ ತನ್ನ ಸಂಕಟ ಪರಿಹರಿಸಿಕೊಳ್ಳಲು ಈ ಕ್ರೈಂ ಧಾರಾವಾಹಿ ತಯಾರಕರನ್ನು ದೇವರು ಎಂಬಂತೆ ಪರಿಭಾವಿಸುತ್ತಾನೆ. ಜೊತೆಗೇ ತನ್ನೊಳಗೇ



ತಾನು ಕೂಡ ಹಣ ಮಾಡಲು ಕಾನೂನಿನ ಕೈಗೆ ಸಿಗದಂತೆ ಯಾವ ರೀತಿಯ ಅಪರಾಧ ಮಾಡಬಹುದು ಎಂದು ಆಲೋಚಿಸತೊಡಗುತ್ತಾನೆ. ಅಲ್ಲಿಗೆ ಪಾತಕಲೋಕಕ್ಕೆ ಖಾಸಗೀಕರಣದ ನೆರಳು ಇಳಿಯತೊಡಗುತ್ತದೆ.

**ಉಪಸಂಹಾರ**

ಒಟ್ಟಾರೆಯಾಗಿ, ಇಂದು ನಮ್ಮ ನಾಡಿನಲ್ಲಿರುವ ಸಮೂಹ ಮಾಧ್ಯಮಗಳು ತಮ್ಮ ಮಾಧ್ಯಮದ ರೂಪದಿಂದ ಉದ್ಯಮದ ರೂಪಕ್ಕೆ ತಿರುಗುತ್ತಾ, ತಮ್ಮ ಮೂಲಭೂತ ಸ್ವರೂಪವನ್ನೇ ಮರೆತಿವೆ ಎಂಬುದಂತೂ ಸತ್ಯ. ಅಲ್ಲಿ ಜನರನ್ನ ಸೆಳೆಯುವ ಗುಣವೊಂದೇ ಪ್ರಧಾನವಾಗಿ ಸೃಜನಾತ್ಮಕ ಚಟುವಟಿಕೆ ಎಂಬುದು ಅಲ್ಪಸಂಖ್ಯಾತರ ಜೊತೆಗೆ ಉಳಿದಿದೆ. ಈ ಅಲ್ಪಸಂಖ್ಯಾತರ ಕೂಗು ಲಾಭ ಗಳಿಸುವ ಓಟದಲ್ಲಿ ಇರುವವರಿಗೆ ಕಾಲು ಮುರಿಯುವವರೆಗೆ ಕೇಳಿಸುತ್ತದೆ ಎಂಬ ನೆಚ್ಚಿಕೆ ಇಲ್ಲ. ಹೀಗಾದಾಗ ಸಾಮಾಜಿಕ ಸ್ವಾಸ್ಥ್ಯ ಕುರಿತು ಚಿಂತಿಸುವವರಿಗೆ ಇರುವುದು ಒಂದೇ ಮಾರ್ಗ. ಅವರು ನೋಡುಗರಿಗೆ ಈ ಎಲ್ಲಾ ವಿವರಗಳನ್ನೂ ಮನೆಮನೆಗೆ ಹೋಗಿ ತಲುಪಿಸಬೇಕು. ನೋಡುಗನಿಗೆ 'ಒಳ್ಳೆಯದು' ಎಂದು ನಾವು ಗುರುತಿಸುತ್ತಿರುವ ಕೃತಿಗಳನ್ನು ತೋರಿಸುವ, ಆ ಮೂಲಕ ಮತ್ತೆ 'ನಮ್ಮತನ' ಎಂಬುದನ್ನು ಉಳಿಸಿಕೊಳ್ಳುವ ಪ್ರಯತ್ನ ಆಗಬೇಕು. ನಾವು ಈ ಕೆಲಸವನ್ನು ಆಂದೋಲನದ ರೀತಿಯಲ್ಲಿ ಆರಂಭಿಸದೆ ಹೋದರೆ ಗಿರೀಶ್ ಕಾಸರವಳ್ಳಿ, ಪಿ. ಶೇಷಾದ್ರಿ, ಬರಗೂರು ಮುಂತಾದ ನಮ್ಮ ನಡುವಿನ ಗಂಭೀರ ದೃಶ್ಯಮಾಧ್ಯಮ ಸಾಧಕರ ಕೆಲಸಗಳು ಕೇವಲ ಕೆಲವೇ ಜನ ಬುದ್ಧಿಜೀವಿಗಳು ನೋಡುವ, ಚರ್ಚಿಸುವ, ದುಃಖಿಸುವ ಹಪಾಪಿ ಸ್ಥಿತಿಗೆ ಇಳಿಯುವ ಅಪಾಯವಿದೆ.

ಹೀಗೆನ್ನುವಾಗ ಮೇಲೆ ತಿಳಿಸಿದ ಕೆಲವರು ಮಾಡುತ್ತಿರುವ ಚಿತ್ರಗಳು, ಕಾರ್ಯಕ್ರಮಗಳೆಲ್ಲಾ ಶ್ರೇಷ್ಠ ಎಂದಲ್ಲ. ಅವುಗಳನ್ನು ಕುರಿತ ವಿಮರ್ಶೆಯೇ ಪ್ರತ್ಯೇಕವಾಗಿ ಆಗಬೇಕಿದೆ. ಕನಿಷ್ಠ ಅಂದರೆ ಅವು ರಿಮೇಕಲ್ಲ ಮತ್ತು ನಾವು ಗುರುತಿಸುತ್ತಿರುವ 'ಒಳ್ಳೆಯದು' ಮತ್ತು 'ನಮ್ಮದು' ಎಂಬ ಪರಿಧಿಯೊಳಗೆ ಬರುವಂತಹವು. ಆ ಕಾರಣಕ್ಕಾಗಿಯೇ ಅವು ಪ್ರಧಾನವಾಹಿನಿಯಿಂದ ಭಿನ್ನವಾಗಿ ಉಳಿದಿರುವುದು.

**ಸ್ವಗತದ ಅಂತ್ಯದಲ್ಲಿ**

ಇಷ್ಟೆಲ್ಲಾ ಹೇಳುತ್ತಿರುವ ನಾನೂ ಸಹ ಈ ಉದ್ಯಮದಲ್ಲಿ ಬದುಕುತ್ತಿದ್ದೇನೆ. ಮತ್ತು ನಾನು ಮೇಲೆ ಚರ್ಚಿಸಿದ ಎಲ್ಲಾ 'ರೋಗ'ಗಳೂ ನನ್ನಲ್ಲೂ ಕಾಣಿಸಿಕೊಳ್ಳುವ, ಕಾಣಿಸಿಕೊಂಡಿರಬಹುದಾದ ಸಾಧ್ಯತೆಗಳಿವೆ. ಆದ್ದರಿಂದಲೇ ಈ ಆತ್ಮವಿಮರ್ಶೆಯ ಮೂಲಕ ನಾನು ನನ್ನನ್ನೇ ಭೂತಗನ್ನಡಿ ಹಿಡಿದು ನೋಡಿಕೊಳ್ಳಲು ಸಾಧ್ಯವಾಗುತ್ತದೆ, ಹಾಗೂ ಎಡವುಗಳ ಸಂಖ್ಯೆಯನ್ನ ಕಡಿತಗೊಳಿಸಿಕೊಳ್ಳುವುದು ಸಾಧ್ಯವಾಗುತ್ತದೆ ಎಂದು ಭಾವಿಸಿದ್ದೇನೆ. ಆ ಮೂಲಕ ನಾನು/ನಾವು ಬದುಕುತ್ತಿರುವ ಲೋಕದ ಸಾಮಾಜಿಕ ಸ್ವಾಸ್ಥ್ಯ ಕಾಪಾಡುವ ನಿಟ್ಟಿನಲ್ಲಿ ನಾನು/ನಾವೆಲ್ಲರೂ ನಿರಂತರ ಪಾಲ್ಗೊಳ್ಳಬೇಕಿದೆ.

ಬಿ. ಸುರೇಶ
ಮೀಡಿಯಾ ಹೌಸ್, ೨೨ನೇ ಅಡ್ಡರಸ್ತೆ, ೨೩ನೇ ಮುಖ್ಯರಸ್ತೆ
ಬನಶಂಕರಿ ೨ನೇ ಹಂತ, ಬೆಂಗಳೂರು - ೫೬೦ ೦೭೦

# ಸಂಗೀತ ವಿಮರ್ಶೆ: ಏಕೆ? ಹೇಗೆ?

ಡಾ|| ಕೆ. ಪೂರ್ಣ ಮಂಗಳಾ

ಸಂಗೀತ ಎಂದರೆ ನಿರಂತರ ಲಯದೊಂದಿಗೆ ನಾದದ ನಿಯಮಬದ್ಧ ಚಲನೆ; ಸಂಗೀತವೆಂದರೆ 'ಸಮ್ಯಕ್ ಗೀತಂ' – ಚೆನ್ನಾಗಿ ಹಾಡಿದ್ದು ಎಂದಾಗಬಹುದು. ನಮ್ಮ ಪ್ರಾಚೀನ ಕಾಲದಲ್ಲಿ ಗೀತ, ವಾದ್ಯ ಮತ್ತು ನೃತ್ಯಗಳ ಸೇರುವಿಕೆ – 'ಹಲವು ಕಲಾವಿದರು ಒಟ್ಟಾಗಿ ಸೇರಿ ನೀಡುವ ಪ್ರದರ್ಶನ' ಎಂಬ ಅರ್ಥವಿದ್ದು, ಸಂಗೀತ ಕೇವಲ ನಾಟ್ಯದ ಅಂಗವಾಗಿತ್ತು. ಕಾಲಕ್ರಮೇಣ ನಮ್ಮ ಸಂಗೀತ 'ಮ್ಯೂಸಿಕ್' ಎಂಬುದರ ಪರ್ಯಾಯವಾಗಿ ಬೆಳೆದಿದೆ. ಗ್ರೀಕ್ ಭಾಷೆಯಲ್ಲೂ 'ಮೌಸಿಕೆ' (mousike) ಎಂಬುದನ್ನು ಪ್ರಾಥಮಿಕವಾಗಿ ನಾದ, ಲಯ, ಮಾತು, ಅಭಿನಯಗಳಿಂದ ಕೂಡಿದ ಕಲಾಪ್ರದರ್ಶನ ಎನ್ನಲಾಗುತ್ತಿತ್ತು. ಈಗ ಸಂಗೀತ ಒಂದು ಸ್ವತಂತ್ರ ಕಲೆಯಾಗಿ, ಹಲವಾರು ಕವಲೊಡೆದು, ಹೆಮ್ಮರವಾಗಿ ಬೆಳೆದು ಪ್ರಬುದ್ಧವಾಗಿದೆ.

ಸಂಗೀತ ಒಂದು ಭಾವನಾತ್ಮಕ ಭಾಷೆ. ಪ್ರಪಂಚದ ಎಲ್ಲ ಸಂಸ್ಕೃತಿಗಳಲ್ಲೂ ಒಂದಲ್ಲ ಒಂದು ರೀತಿಯ ಸಂಗೀತ ಇದ್ದೇ ಇರುತ್ತದೆ. ಎಲ್ಲರಿಗೂ ಎಲ್ಲ ಸಂಗೀತವೂ ಏನೋ ಒಂದು ಅವರದೇ ಆದ ರೀತಿಯಲ್ಲಿ ಅರ್ಥವಾಗುತ್ತದೆ. ಆ ಕಾರಣದಿಂದಾಗಿಯೇ ಸಂಗೀತಕ್ಕೆ ಒಂದು ಬಗೆಯ ಸಾರ್ವತ್ರಿಕ ಲಕ್ಷಣವಿದೆ.

ಸಂಗೀತ ತನಗೆ ತಾನೇ ಮುದ ನೀಡಬಹುದು, ನೆಮ್ಮದಿ, ಶಾಂತಿ ಮೂಡಿಸಬಹುದು, ಮನಸ್ಸಿಗೆ ಹೊಸ ಚೇತನ ತರಬಹುದು. ಅದು ಕೇಳುಗನ ಮನಸ್ಸಿನಲ್ಲಿ ನವರಸಗಳ ಕಾಲ್ಪನಿಕ ಚಿತ್ರಣಗಳನ್ನು ಮೂಡಿಸಿ ಕೆಲಕಾಲ ಆಯಾ ಸ್ಥಿತಿಗೆ ಕರೆದೊಯ್ಯಬಹುದು. ಕೆಲ ರೀತಿಯ ಸಂಗೀತಗಳು ಕೇಳುಗರನ್ನು ಪ್ರಚೋದಿಸಿ, ಭಾವನೆಗಳನ್ನು ಕೆರಳಿಸಿ, ಅವರನ್ನು ಕ್ರಿಯಾಶೀಲರನ್ನಾಗಿಯೂ ಮಾಡಬಲ್ಲದು. ಇಲ್ಲೆಲ್ಲಾ ಸಂಗೀತ ವ್ಯಕ್ತಿಯ ಮನಸ್ಸನ್ನು ತಟ್ಟಿ ಅವನ ನಡವಳಿಕೆಯ ಮೇಲೆ ಪ್ರಭಾವ ಬೀರುತ್ತಿರುತ್ತದೆ. ಅಂದರೆ ಸಂಗೀತಕ್ಕೆ ಮನಗಳನ್ನು ರೂಪಿಸುವ, ನೈತಿಕ ಧೀಮಂತಿಕೆಯನ್ನು ಬೆಳೆಸುವ ಶಕ್ತಿಯಿದೆ ಎಂದು ಹೇಳಿದಂತಾಯಿತು.



ಗ್ರೀಕ್ ತತ್ವಶಾಸ್ತ್ರದಲ್ಲೂ ಸಂಗೀತದ 'ಈತಾಸ್' ಅಂದರೆ ವ್ಯಕ್ತಿಯ ಮತ್ತು ತನ್ಮೂಲಕ ಸಮಾಜದ ಭಾವನೆ, ಸ್ವಭಾವ ಮತ್ತು ನೈತಿಕ ನಡವಳಿಕೆಗಳ ಮೇಲೆ ಸಂಗೀತದಿಂದಾಗುವ ಪರಿಣಾಮಗಳ ಬಗ್ಗೆ ಕಾಳಜಿ ವಹಿಸಿದ್ದುದು ಕಂಡುಬರುತ್ತದೆ. ಇತ್ತೀಚೆಗಂತೂ ಮಕ್ಕಳಲ್ಲಿ ಗಣಿತದ ಬುದ್ಧಿಶಕ್ತಿಯನ್ನು ಹೆಚ್ಚಿಸುವಲ್ಲಿ, ಬುದ್ಧಿಮಾಂದ್ಯ ಮಕ್ಕಳ ಚಿಕಿತ್ಸೆಯಲ್ಲಿ ಇನ್ನೂ ಮಾನಸಿಕ ಒತ್ತಡಗಳಿಂದುಂಟಾಗುವ ಅನೇಕ ದೈಹಿಕ, ಮಾನಸಿಕ ಕಾಯಿಲೆಗಳ ಚಿಕಿತ್ಸೆಗಳಲ್ಲಿ ಸಂಗೀತವು ಮಹತ್ತರ ಪಾತ್ರ ವಹಿಸಬಲ್ಲದು ಎಂಬ ಬಗ್ಗೆ ಹಲವಾರು ಸಂಶೋಧನೆಗಳು ನಡೆಯುತ್ತಿವೆ. ಇಷ್ಟೆಲ್ಲ ಹೇಳಿದರೂ 'ಶ್ರೋತೃ ಚಿತ್ತ ಸುಖಾವಹಃ', 'ರಂಜಕೋ ಜನ ಚಿತ್ತಾನಾಂ' ಇತ್ಯಾದಿ ಹೇಳಿಕೆಗಳಿಂದ ತಿಳಿಯುವಂತೆ, ಸಂಗೀತ ಒಂದು ಮನರಂಜನೆಯ ಸಾಧನವಾಗಿಯೇ ಎಲ್ಲ ಸಂಸ್ಕೃತಿಗಳಲ್ಲೂ ಪ್ರಮುಖ ಪ್ರಯೋಜನ ಪಡೆದಿದ್ದು ಉಳಿದೆಲ್ಲವೂ ಅದರೊಂದಿಗೆ ದೊರೆಯುವ ಉಪಪ್ರಯೋಜನಗಳಾಗಿವೆ.

ಇಷ್ಟು ಉಪಯುಕ್ತವಾದ ಈ ಸಂಗೀತವು ಪ್ರಕೃತಿಯ ಅವಿಭಾಜ್ಯ ಅಂಗವೇ ಆಗಿದ್ದು, ಬೇರೆ ಬೇರೆ ರೂಪಗಳಲ್ಲಿ ಮಾನವನ ಉಗಮಕ್ಕಿಂತ ಮುಂಚೆಯೇ ಅನಾದಿಕಾಲದಿಂದಲೂ ಇದ್ದೇ ಇದೆ. ಹರಿವ ನೀರಿನ ಜುಳು ಜುಳು ಅಥವಾ ಭೋರ್ಗರೆತ, ಸುಳಿವ ತಂಬೆಲರ ಸುಂಯ್‌ಗುಡುವಿಕೆ, ಹಾಗೇ ಮುಂದುವರೆದರೆ ಹಕ್ಕಿ ಪಕ್ಷಿಗಳ ಇಂಪಾದ ಕಲರವ, ಪ್ರಾಣಿಸಂಕುಲದ ವೈವಿಧ್ಯಮಯ ಕೂಗು, ಕೊನೆಗೆ ಇತ್ತೀಚಿನ ಸಂಶೋಧನೆಗಳಿಂದ ತಿಳಿದುಬಂದಂತೆ ನೀರೊಳಗೇ ಅವುಗಳ ಸಂಬಂಧಿಗಳೊಡನೆ ಸಂಪರ್ಕವೇರ್ಪಡಿಸುವ ತಿಮಿಂಗಿಲಗಳ – ಸುಮಾರು ೩೦-೪೦ ನಾಟ್ಸ್ ದೂರ ತಲುಪಬಲ್ಲ – ಸಂಗೀತ, ಇವೆಲ್ಲ ಇದಕ್ಕೆ ಸಾಕ್ಷಿ.

**ಸಂಗೀತ ವಿಮರ್ಶೆ ಏಕೆ ಬೇಕು ?**

'ಶಿಶುರ್ವೇತ್ತಿ ಪಶುರ್ವೇತ್ತಿ ವೇತ್ತಿ ಗಾನರಸಂ ಫಣೀ', ಎಳೆಯ ಕಂದನಿಗೆ, ಪ್ರಾಣಿಗಳಿಗೆ, ಹಾವಿನಂತಹ ಜಂತುಗಳಿಗೆ ಸಹ ಸಂಗೀತ ತಿಳಿಯುತ್ತದೆ ಎಂದಾಗ, ಸಂಗೀತಗಾರನಿಗೂ ಕೇಳುಗನಿಗೂ ಮಧ್ಯೆ ಸಂಪರ್ಕ ಕಲ್ಪಿಸುವ ವಿಮರ್ಶಕನ, ಶಾಸ್ತ್ರಜ್ಞನ ಪಾತ್ರವಾದರೂ ಏಕೆ ಬೇಕು ? ಎಂಬ ಪ್ರಶ್ನೆ ನಮ್ಮಲ್ಲಿ ಹಲವರಿಗೆ ಏಳುತ್ತದೆ. ಹಿಂದೆ ಹೇಳಿದ ಪ್ರಕೃತಿಯ ಸಹಜ ಸಂಗೀತವನ್ನು ಅಷ್ಟೇ ಸರಳವಾಗಿ ಅರ್ಥ ಮಾಡಿಕೊಳ್ಳಲು ತಲೆದೂಗಲು ನಾವು ಯಾರೂ ಪರಿಶ್ರಮಪಡಬೇಕಾಗಿಲ್ಲ. ಆದರೆ ಆ ಪ್ರಕೃತಿಸಹಜ ಸಂಗೀತವೇ ಮಾನವನ ಬುದ್ಧಿಶಕ್ತಿಯಿಂದ ಬೆಳೆಯುತ್ತಾ ಇಂದು ಸಂಕೀರ್ಣಗೊಂಡಿದೆ. ಅದರೊಂದಿಗೆ ಲಕ್ಷಾಂತರ ರೂಪಾಯಿಗಳನ್ನು ವ್ಯಯಮಾಡಿ ನಿರ್ಮಿಸಿದ ಭವನಗಳಾಗಲೀ, ಸಹಸ್ರಾರು ರೂಪಾಯಿ ಹಣ ಕೊಟ್ಟು ಕರೆಸಿದ ಕಲಾವಿದರಾಗಲೀ, ಟಿಕೆಟ್ ಖರೀದಿಸಿ ಸಂಗೀತ ಕೇಳುವ ಶ್ರೋತೃವೃಂದವಾಗಲೀ ಆ ಪ್ರಕೃತಿಯ ಸಂಗೀತಕ್ಕೆ ಲಭ್ಯವಿಲ್ಲ. ಇಂತಹ ಪರಿಸ್ಥಿತಿಯಲ್ಲಿ ನಾವು ಕೇಳುತ್ತಿರುವ ಸಂಗೀತವನ್ನೇ ಇನ್ನೂ ಉತ್ತಮವಾಗಿ ಆಸ್ವಾದಿಸಲು ಆ ಕಲಾಪ್ರಕಾರದ ಆಳವಾದ ಅರಿವಿರುವ ಕಲಾಭಿಜ್ಞರ ಸಹಾಯ ಅವಶ್ಯವಾಗುತ್ತದೆ.

ಪ್ರತಿನಿತ್ಯ ಆಯಾ ನಗರದ ವಿವಿಧ ಸಭೆಗಳಲ್ಲಿ ನಡೆಯುವ ಶಾಸ್ತ್ರೀಯ ಸಂಗೀತ ಕಛೇರಿಗಳನ್ನು ಕುರಿತು ಪತ್ರಿಕೆಗಳಲ್ಲಿ ವರದಿ ಮಾಡುವವರನ್ನು ಸಂಗೀತ ವಿಮರ್ಶಕರು ಎಂದು ಕರೆಯುವ ವಾಡಿಕೆ ನಮ್ಮಲ್ಲಿದೆ. ಅದು ಅಷ್ಟಕ್ಕೇ ಸೀಮಿತವಾಗದೆ ಅದರೊಂದಿಗೆ ರೇಡಿಯೋ ಮತ್ತು ದೂರದರ್ಶನದಲ್ಲಿ ಬಿತ್ತರಗೊಳ್ಳುವ ಸಂಗೀತವನ್ನೂ ಧ್ವನಿಮುದ್ರಿಕೆ, ಆಲ್ಬಮ್ಮುಗಳಲ್ಲಿನ ಸಂಗೀತವನ್ನೂ ಇತರ ಹಲವು ಪ್ರಕಾರಗಳ ಸಂಗೀತವನ್ನೂ ವಿಮರ್ಶಕರು ಕೇಳಿ ಅದರ ಬಗ್ಗೆ ಬರೆಯಬಹುದು. ಹಾಗೇ, ವಿವಿಧ ಸಂಗೀತ ಶೈಲಿಗಳನ್ನು ಪರಾಮರ್ಶಿಸುವ, ಅದರ ಇತಿಹಾಸವನ್ನು ಕುರಿತ ಗ್ರಂಥಗಳನ್ನೇ ಬರೆಯುವವರೂ ಸಂಗೀತ ವಿಮರ್ಶಕರೇ ಆಗುತ್ತಾರೆ.

ಸಂಗೀತ ಶಾಸ್ತ್ರವನ್ನು ವಿದ್ವತ್ಪೂರ್ಣವಾಗಿ ಅಧ್ಯಯನ ಮಾಡುವಿಕೆಯನ್ನು ಚಾರಿತ್ರಿಕ, ತುಲನಾತ್ಮಕ ಮತ್ತು ವಿಧಿ-ವಿಧಾನಾತ್ಮಕ ಎಂದು ಮೂರು ಮುಖ್ಯ ವಿಭಾಗಗಳನ್ನಾಗಿ ವಿಂಗಡಿಸಬಹುದು. ಮೊದಲನೆಯದರಲ್ಲಿ, ಸಂಗೀತದ ಚರಿತ್ರೆ ಮತ್ತು ಇತಿಹಾಸವನ್ನು ಅಧ್ಯಯನ ಮಾಡಿದರೆ, ಎರಡನೆಯದು ಸಂಗೀತದ ವಿವಿಧ ಪ್ರಕಾರಗಳನ್ನು ಅಧ್ಯಯನ ಮಾಡುವಿಕೆ. ಮೂರನೆಯ ಕ್ಷೇತ್ರದಲ್ಲಿ ಧ್ವನಿ ವಿಜ್ಞಾನ, ನರಮಂಡಲದ ವಿಜ್ಞಾನದ ಮತ್ತು ಮನೋವಿಜ್ಞಾನದ ಕೆಲ ಅಂಶಗಳು; ಸೌಂದರ್ಯಶಾಸ್ತ್ರ, ಸಮಾಜಶಾಸ್ತ್ರದ ಕೆಲ ಅಂಶಗಳು; ಜೊತೆಗೆ ನಾದ, ಶ್ರುತಿ, ರಾಗ, ಲಯ ಇತ್ಯಾದಿ ಸಂಗೀತ ಶಾಸ್ತ್ರದ ಎಲ್ಲ ಅಂಶಗಳ ಅಧ್ಯಯನವೂ ಸೇರುತ್ತದೆ. ಇದರೊಂದಿಗೆ ಸಾಹಿತ್ಯದಲ್ಲಿ ಹೇಗೋ ಹಾಗೇ ಸಂಗೀತದಲ್ಲೂ ಪ್ರಚಲಿತ ಸಂಗೀತದ ವಿಮರ್ಶೆಯೂ ಪ್ರಮುಖ ಪಾತ್ರ ವಹಿಸುತ್ತದೆ.

'ವಿಶೇಷೇಣ ಮರ್ಶಯತಿ ಇತಿ ವಿಮರ್ಶಾ' ಎಂದರೆ ವಿಷಯವೊಂದರ ಬಗ್ಗೆ ತಲಸ್ಪರ್ಶಿಯಾಗಿ ಚಿಂತಿಸಿ, ಗುಣ ದೋಷಗಳ ಬಗ್ಗೆ ವಿವೇಚನೆ, ಪರೀಕ್ಷೆ, ನಿರೂಪಣೆ ಮಾಡುವಿಕೆ ಎಂಬ ಅರ್ಥವಿದೆ. ವಿಷಯದ ವರ್ಣನೆ, ತತ್ವ ಪ್ರತಿಪಾದನೆ ಮತ್ತು ಮೌಲ್ಯಮಾಪನ – ಇವು ವಿಮರ್ಶೆಯ ಕೆಲಸ.

'ಮ್ಯೂಸಿಕ್ ಲವರ್ಸ್ ಎನ್‌ಸೈಕ್ಲೋಪೀಡಿಯ'ದ ಪ್ರಕಾರ ಸಂಗೀತವನ್ನು ಬುದ್ಧಿವಂತಿಕೆಯಿಂದ ಕೇಳಿ, ತಮಗೆ ಆ ಸಂಗೀತ ಏಕೆ ಇಷ್ಟವಾಗುತ್ತದೆ ಅಥವಾ ಇಲ್ಲ ಎಂದು ತಾವು ಕೇಳುತ್ತಿರುವುದನ್ನು ಅರ್ಥಮಾಡಿಕೊಂಡು ಹೇಳಬಲ್ಲ ಶ್ರೋತೃವರ್ಗದ ಸಂಖ್ಯೆಯನ್ನು ಹೆಚ್ಚಿಸುವುದು ಸಂಗೀತ ವಿಮರ್ಶೆಯ ಒಂದು ಕೆಲಸ.

ಹಿರಿಯ ಕವಿ, ಸಾಹಿತಿ ಶಾಂತರಸ ಅವರು ಹೀಗೆ ಹೇಳುತ್ತಾರೆ – ''ಕಲಾಪ್ರಕಾರವನ್ನು ಚೆನ್ನಾಗಿ ಅರ್ಥಮಾಡಿಕೊಂಡ ವಿಮರ್ಶಕ ಬೇರೆಯವರಿಗೆ ಅದನ್ನು ಅರ್ಥಮಾಡಿ

ಕೊಳ್ಳಲು ಸಹಾಯ ಮಾಡಬೇಕು. ಇದಕ್ಕೆ ಮುನ್ನ ಆ ವಿಮರ್ಶಕ ಆ ಕಲಾಪ್ರಕಾರವನ್ನು ತಾಳ್ಮೆಯಿಂದ ಅಧ್ಯಯನ ಮಾಡಿರಬೇಕು. ಈ ಕಾರಣದಿಂದಲೇ ವಿಮರ್ಶಕನ ಕೆಲಸ ಸುಲಭವಲ್ಲ. ವಿಮರ್ಶೆಯೇ ಇಲ್ಲದೆ ಹೋದರೆ ಸಾಹಿತ್ಯ, ಕಲೆ ಮತ್ತು ಸಂಗೀತಗಳಿಗೆ ಪ್ರಚಾರವೂ ದೊರೆಯದೆ ಅದರ ಮಾರುಕಟ್ಟೆಯ ಮೇಲೆ ಪರಿಣಾಮ ಬೀರುತ್ತದೆ.'' ಮುಂದುವರೆಸುತ್ತಾ – ''ಉದಾಹರಣೆಗೆ, ಗಂಗೂಬಾಯಿ ಹಾನಗಲ್‌ರಂತಹ ಹಿರಿಯ ಗಾಯಕರೊಬ್ಬರು ನಗರದಲ್ಲಿ ಹಾಡಿದಾಗ, ಅಲ್ಲಿನ ಪತ್ರಿಕಾ ಕಛೇರಿಗಳಲ್ಲಿ ಆ ಸಂಗೀತವನ್ನು ಅರ್ಥಮಾಡಿಕೊಳ್ಳಬಲ್ಲ ಯಾರೊಬ್ಬ ವ್ಯಕ್ತಿಯೂ ಇಲ್ಲವಾದರೆ, ಎಂತಹ ವಿಮರ್ಶೆ ಬರಬಹುದು ? ಆ ಕಾರಣಕ್ಕಾಗಿಯೇ ಕೆಲವೊಮ್ಮೆ ವೈಯಕ್ತಿಕ ಪೂರ್ವಗ್ರಹಗಳು ನಿಪುಣನೊಬ್ಬನ ಅಭಿಪ್ರಾಯಗಳಿಂದು ಚಾಲನೆ ಪಡೆಯುತ್ತವೆ'' ಎಂದಿದ್ದಾರೆ.

ಈ ನಿಟ್ಟಿನಲ್ಲಿ ಅತ್ಯುತ್ತಮ ಉದಾಹರಣೆಯೊಂದನ್ನು ಸಾಹಿತ್ಯ ವಿಮರ್ಶೆಯಿಂದ ತೆಗೆದುಕೊಳ್ಳೋಣ. ಜಾನ್ ಡನ್‌ನ 'ಮೆಟಾಫಿಸಿಕಲ್ ಪೊಯೆಟ್ರಿ' ಮೊದಲು ೧೭ನೇ ಶತಮಾನದಲ್ಲಿ ಪ್ರಕಟವಾದಾಗ, ಯಾರೂ ಅದರ ಬಗ್ಗೆ ಆಸಕ್ತಿಯನ್ನಾಗಲಿ, ಅನುಕಂಪವನ್ನಾಗಲಿ ವ್ಯಕ್ತಪಡಿಸಲಿಲ್ಲ. ಅಂದು ಅದು ತಲೆಹರಟೆಯೊಬ್ಬನ ತರ್ಲೆ ಪದ್ಯ ಎಂದು ಪರಿಗಣಿಸಲ್ಪಟ್ಟಿತ್ತು. ಏಕೆಂದರೆ, ಅಂದಿನ ತಿಳುವಳಿಕೆಯುಳ್ಳ ಕಾವ್ಯ ವಿಮರ್ಶಕರಾದ ಡ್ರೈಡನ್ ಮತ್ತು ಜಾನ್ಸನ್ ಇವರಿಬ್ಬರೂ ಈ ಪ್ರಕಾರದ ಕಾವ್ಯದ ಮೌಲ್ಯವನ್ನು ಅರ್ಥ ಮಾಡಿಕೊಳ್ಳದೇಹೋದಕಾರಣ ಅವರ ಬಲವಾದ ಕಟು ವಿಮರ್ಶೆಗಳ ಆಘಾತಕ್ಕೆ ಸಿಲುಕಿ ಆ ಕಾವ್ಯಗಳು ಮೂಲೆಗುಂಪಾದವು. ಕೆಲ ಶತಮಾನಗಳಷ್ಟು ದೀರ್ಘಕಾಲ ಯಾರೂ ಓದದ ಈ ಕಾವ್ಯಗಳನ್ನು ೨೦ನೇ ಶತಮಾನದ ಆದಿಯಲ್ಲಿ ಬಂದ ವಿಮರ್ಶಕರಾದ ಗ್ರೈಸನ್ ಮತ್ತು ಹೆಲೆನ್ ಗಾರ್ಡನರ್ ಎಂಬುವರು ಅಧ್ಯಯನ ಮಾಡಿ, ಅವುಗಳ ಮೌಲ್ಯವನ್ನು ಅರ್ಥಮಾಡಿಕೊಂಡು, ಅವುಗಳ ಹಲವು ಮುಖಗಳನ್ನು ಪರಿಚಯಿಸುವ ವಿಮರ್ಶಾತ್ಮಕ ಪ್ರಬಂಧಗಳನ್ನೂ ಕಾವ್ಯಗಳ ವ್ಯಾಖ್ಯಾನಗಳನ್ನೂ ರಚಿಸಿ, ಈ ರೀತಿಯ ಕಾವ್ಯಗಳು ಜನಪ್ರಿಯವಾಗುವಂತೆ ಮಾಡಿದರು.

**ಸಂಗೀತ ವಿಮರ್ಶೆ ಹೇಗಿರಬೇಕು ?**

ಸಹಸ್ರಾರು ಜನ ಒಂದು ಸಂಗೀತ ಕಛೇರಿಗೆ ಹೋಗಿ ಆ ಕಲಾವಿದನನ್ನು, ಆತನ ಕಲೆಯನ್ನು ಮೆಚ್ಚಿಕೊಳ್ಳುತ್ತಿದ್ದಾರೆ ಎಂಬ ಹಿನ್ನೆಲೆಯಲ್ಲಿ ಆ ಜನಪ್ರಿಯ ಸಂಗೀತ ಚೆನ್ನಾಗಿರಬೇಕು ಎಂದು ನಿರ್ಧರಿಸಿದರೆ ಅಷ್ಟು ತಪ್ಪಾಗಲಾರದು. ಅದೇ ಇನ್ನೊಂದೆಡೆ ಹೆಚ್ಚು ಜನರು ಮೆಚ್ಚಿಕೊಳ್ಳುತ್ತಿಲ್ಲ ಎಂಬ ಮಾತ್ರಕ್ಕೆ ಆ ಸಂಗೀತ ಚೆನ್ನಾಗಿಲ್ಲ ಎಂದು ಹೇಳುವುದು ಮಾತ್ರ ತಪ್ಪಾದೀತು. ಆ ಜನರನ್ನು ಆಕರ್ಷಿಸಲು ಸೋಲುತ್ತಿರುವ ಸಂಗೀತ ಹೆಚ್ಚು ಜನರಿಗೆ ಅರ್ಥಮಾಡಿಕೊಳ್ಳಲು ಕಷ್ಟಕರ; ಆದಕಾರಣ ಅವರನ್ನು ತಲುಪುತ್ತಿಲ್ಲ ಎಂದು ಭಾವಿಸಲು ಸಾಧ್ಯ. ಸಂಗೀತ ಯಶಸ್ವಿಯಾಗಲು ಜನಮನವನ್ನು ತಟ್ಟಬೇಕಾಗಿರುವುದರಿಂದ, ಆಯಾ ಕಾಲದ ಜನಜೀವನದ ಮಾನಸಿಕ ಮತ್ತು ಬೌದ್ಧಿಕ ರೀತಿನೀತಿಗಳಲ್ಲಿನ, ಜೀವನಶೈಲಿಯ ಬದಲಾವಣೆಗಳ, ತನ್ಮೂಲಕ ಅಭಿರುಚಿಯಲ್ಲಾಗುವ ಬದಲಾವಣೆಗಳ, ಪರಿಣಾಮ ಸಂಗೀತಕ್ಕೂ ತಟ್ಟುತ್ತದೆ. ಈ ಕಾರಣಗಳಿಂದ ಸಂಗೀತವೊಂದು ''ಚೆನ್ನಾಗಿದೆ'' ಎಂದರೆ ಏನು ? ''ಚೆನ್ನಾಗಿಲ್ಲ'' ಎಂದರೆ ಏನು ? ಎಂದು ಒಂದು ಹಂತದಲ್ಲಿ ಲಕ್ಷಣಗಳನ್ನು ಗುರುತಿಸಿಕೊಳ್ಳದೇ ಹೋದರೆ ಸಂಗೀತ ವಿಮರ್ಶೆ ತನ್ನ ಅರ್ಥ ಕಳೆದುಕೊಳ್ಳುತ್ತದೆ. ಒಬ್ಬರಿಗಿಂತ ಹೆಚ್ಚು ವಿಮರ್ಶಕರು ಒಂದೇ ಸಂಗೀತವನ್ನು ಚೆನ್ನಾಗಿದೆ ಎಂದಾಗ ಅವರವರ ಅಭಿಪ್ರಾಯಗಳಲ್ಲೂ ಹಲವಾರು ತಾರತಮ್ಯಗಳಿದ್ದರೂ ಯಾವುವೋ ಕೆಲ ಅಂಶಗಳಲ್ಲಿ ಅವರಲ್ಲಿ ಒಮ್ಮತವಿರುತ್ತದೆ. ಆ ಸಾಮ್ಯವೇನು ? ಅಂದರೆ ಆ ಸಂಗೀತದಲ್ಲಿ ಅವರೆಲ್ಲರ ಮೆಚ್ಚುಗೆಗೆ ಪಾತ್ರವಾದ ''ಚೆನ್ನಾಗಿರುವ'' ಅಂಶಗಳಾವುವು ? ಹಾಗೆಯೇ ಅವರೆಲ್ಲರೂ ಮೆಚ್ಚದ ''ಚೆನ್ನಾಗಿಲ್ಲದ'' ಅಂಶಗಳಾವುವು ? ಎಂದು ವಿಶ್ಲೇಷಿಸಬೇಕು.

ಸಂಗೀತವನ್ನು ತೀರ ವಸ್ತುನಿಷ್ಠವಾಗಿ ವಿಮರ್ಶಿಸಲು ಸಾಧ್ಯವಿಲ್ಲ ಎಂಬುದು ಎಲ್ಲರಿಗೂ ತಿಳಿದ ಅಂಶ; ಹಾಗೆಂದಮಾತ್ರಕ್ಕೆ ಅದು ತೀರ ವ್ಯಕ್ತಿನಿಷ್ಠವಾಗಿಹೋದರೆ ವಿಮರ್ಶೆಯ ಉದ್ದೇಶವೇ ಹಾಳಾದೀತು.

'ಸೌಂದರ್ಯ ನೋಡುಗನ ಕಣ್ಣಿನಲ್ಲಿದೆ' ಎಂಬುದು ಕೆಲವೊಮ್ಮೆ ಸತ್ಯವೇ ಆದರೂ, ಯಾವುದೇ ಪೂರ್ವಗ್ರಹವಿಲ್ಲದೆಯೂ ಹಲವರು ಒಬ್ಬ ವ್ಯಕ್ತಿಯನ್ನು ಬೇರೆ ಬೇರೆ ಪ್ರಮಾಣದಲ್ಲಾದರೂ ಚೆನ್ನಾಗಿದ್ದಾರೆ ಎಂದು ಒಪ್ಪುತ್ತೇವಲ್ಲವೇ ? ಇತ್ತೀಚಿನ ವೈಜ್ಞಾನಿಕ ಸಂಶೋಧನೆಗಳಿಂದ ಮುಖದಲ್ಲಿ ಇರುವ 'ಜ್ಯಾಮಿತೀಯ ಅನುಪಾತ ಮತ್ತು ಪರಿಮಾಣ ಔಚಿತ್ಯ' – ಇವುಗಳಿಂದಲೇ ಸುಂದರ ಮುಖ ಎಂದು ಕರೆಯಲ್ಪಡುತ್ತದೆ ಎಂಬ ಅಂಶ ಸಿದ್ಧವಾಗಿದೆ. ಇಂತಹ ಸುಂದರ ಮುಖದ ಚಿತ್ರಗಳನ್ನು ತೋರಿಸಿದಾಗ ಏನೂ ಅರಿಯದ ಕೆಲ ತಿಂಗಳುಗಳ ಕಂದಮ್ಮನೂ ಆಕರ್ಷಿತವಾಗುತ್ತದೆ ಎಂದೂ ಈ ಸಂಶೋಧನೆಯಿಂದ ಸಾಬೀತಾಗಿದೆ. ಹಾಗಿದ್ದಲ್ಲಿ ಸಂಗೀತದಲ್ಲೂ ಹೀಗೆ ಅಳೆಯಬಹುದಾದ ಒಂದು ಸೌಂದರ್ಯವಿರಲೇಬೇಕು. ಅದರ ಲಕ್ಷಣಗಳನ್ನು ನಾವು ಗುರುತಿಸಬೇಕು, ಅಷ್ಟೆ.

ಸಂಗೀತ ವಿಮರ್ಶಕರು ಮತ್ತಿತರ ಕೇಳುಗರು, ಕ್ರೀಡೆಯೊಂದನ್ನು ನೋಡಲು ಹೋಗುವಾಗ ಯಾರು ಗೆಲ್ಲುತ್ತಾರೆ ಎಂದು ನಿರ್ಧರಿಸಲು ಹೋಗುವಂತೆ, ಸಂಗೀತವನ್ನು ಕೇಳಲು ಹೋಗುವುದಿಲ್ಲ. ಸಂಗೀತದ ಮೌಲ್ಯಮಾಪನವೇ ಬೇರೆ ರೀತಿಯದು. ಆ ಸಂಗೀತದ ಅನುಭವ ಅದೆಷ್ಟು ಆನಂದದಾಯಕವಾಗಿತ್ತು? ಅದೆಷ್ಟರಮಟ್ಟಿಗೆ ಮನವನ್ನು ಸೆರೆಹಿಡಿದಿತ್ತು ? ಎಂಬ ಅಂಶಗಳು ಇಲ್ಲಿ ಮುಖ್ಯ. ಕೆಲವೊಮ್ಮೆ ಹಲವು ಬಾರಿ ಕೇಳಿದ ರಾಗ/ಕೃತಿ ಅದೆಷ್ಟೇ ಮನೋಹರವಾಗಿದ್ದರೂ ಮತ್ತೆ ಮತ್ತೆ ಕೇಳಿದ್ದರಿಂದ ತನ್ನ ಸ್ವಾರಸ್ಯವನ್ನು ಕಳೆದುಕೊಳ್ಳಬಹುದು, ಆಗ ಅಪರಿಚಿತವಾದ ಒಂದು ರಾಗ/ಕೃತಿ ತನ್ನ ಹೊಸತನದಿಂದಲೇ ನಮ್ಮ ಮನಸೂರೆಗೊಳ್ಳಬಹುದು. ಹಾಗೆಯೇ ಎಲ್ಲ ರೀತಿಯ ಸಂಗೀತವೂ ಅಂದಂದಿನ ವಾತಾವರಣ, ಮನಃಸ್ಥಿತಿಗಳನ್ನಾಧರಿಸಿ ಒಮ್ಮೆ ತುಂಬಾ ಚೆನ್ನಾಗಿದೆ ಎನಿಸಿದರೆ ಮತ್ತೊಮ್ಮೆ ತೀರಾ ಸಾಧಾರಣ ಎನಿಸಬಹುದು; ಈ ಕಾರಣಗಳಿಂದ ಇಲ್ಲಿ ವಿಜೇತರಾರೂ ಇರುವುದಿಲ್ಲ. ಎಲ್ಲ ರೀತಿಯ ಮೌಲ್ಯಮಾಪನಗಳೂ ಮೂಲತಃ ತುಲನಾತ್ಮಕವೇ ಆಗಿರುತ್ತವೆ. ಹೀಗಾಗಿ ವಿಮರ್ಶೆಗಳೆಂದೂ ನಿರ್ಣಯಗಳಾಗುವುದಿಲ್ಲ. ಈ ರೀತಿಯ ಮೌಲ್ಯಮಾಪನಗಳು ತಮ್ಮ ಮೌಲ್ಯಗಳನ್ನು ಉಳಿಸಿಕೊಳ್ಳಬೇಕಾದರೆ ಅವು ಯಾವಾಗಲೂ ಕಾರಣಸಹಿತವೇ ಆಗಿರಬೇಕಾಗಿರುತ್ತದೆ.

**ವಿಮರ್ಶಕರು ತಮ್ಮ ವೈಯಕ್ತಿಕ ಅಭಿರುಚಿಗಳನ್ನು ಸಾಧಾರಣ ಕೇಳುಗರಮೇಲೆ ಹೇರದೆ, ಸಾಧ್ಯವಾದಷ್ಟು ಮಟ್ಟಿಗೆ ಕೇಳುಗರ ಸಂಗೀತ ಆಸ್ವಾದನೆಯ ತಿಳುವಳಿಕೆ ಕ್ರಮೇಣ ಹೆಚ್ಚುವಂತೆ ಮಾಡಬೇಕು. ವಿಮರ್ಶಕನಾಗಿ ಕೆಲಸಮಾಡುತ್ತಿರುವ ವ್ಯಕ್ತಿಗೇ ಸಂಗೀತ ಶಾಸ್ತ್ರದ ಅರಿವು ಇಲ್ಲವಾದಪಕ್ಷದಲ್ಲಿ ಅವರೂ ಕಿಂಚಿತ್ತಾದರೂ ಅತ್ತ ಗಮನ ಹರಿಸಿ, ತಮ್ಮ ಜ್ಞಾನವನ್ನು ವೃದ್ಧಿಮಾಡಿಕೊಳ್ಳುತ್ತಾ ತಮ್ಮ ಬರಹ ಕೇವಲ ವರದಿಗಳಾಗಿ ಉಳಿಯದೇ ವಿಮರ್ಶೆಯ ಮಟ್ಟಕ್ಕೇರುವಂತೆ ನೋಡಿಕೊಳ್ಳಬೇಕು. ಸಾಧ್ಯವಾದಷ್ಟು ಮಟ್ಟಿಗೆ ವಸ್ತುನಿಷ್ಠವಾದ ವಿಮರ್ಶೆಗಳು ಪ್ರಕಟಗೊಂಡಾಗ ಅವು ಆಯಾ ಕಲಾಪ್ರಕಾರಕ್ಕೂ, ಕಲಾವಿದರಿಗೂ, ಮತ್ತು ಶ್ರೋತೃವರ್ಗಕ್ಕೂ ಅಪಾರ ಸಹಾಯ ಮಾಡಿದಂತೆ ಎಂಬ ಗುರುತರ ಜವಾಬ್ದಾರಿಯ ಅರಿವು ಅವರಿಗಿರಬೇಕು. ಹೀಗೆ ಹೊಣೆಯರಿತ ವಿಮರ್ಶಕರ ಅಭಿಪ್ರಾಯಗಳು ಕಲೆಯನ್ನೂ, ಕಲಾಸ್ವಾದನೆಯನ್ನೂ ಹೊಸ ಹೊಸ ಎತ್ತರಕ್ಕೆ ಕೊಂಡೊಯ್ಯುವಲ್ಲಿ ಯಾವ ಸಂಶಯವೂ ಇಲ್ಲ.**

ಸಂಗೀತವು ಪ್ರದರ್ಶಕಕಲೆಯಾದ್ದರಿಂದ ಸಂಗೀತ ವಿಮರ್ಶೆಯೂ ಆಯಾ ಕಛೇರಿಗೆ ಸಂಬಂಧಪಟ್ಟ ವಿಮರ್ಶೆಯಾಗಿರಬೇಕು. ಈ ಕಾರಣದಿಂದ ಸಂಗೀತ ಕಛೇರಿಯೊಂದು ಕಿವಿಗಿಂಪಾಗಿರುವುದು ಎಷ್ಟೇ ಪ್ರಮುಖವಾದರೂ ಅದು ಕಣ್ಣಿಗೆ ತಂಪನ್ನೂ ಉಂಟುಮಾಡುವಂತಿರಬೇಕು. ಸಭಾಮರ್ಯಾದೆಗೆ ಅನುಗುಣವಾಗಿ ಕಲಾವಿದರು ತಮ್ಮ ಉಡುಗೆ ತೊಡುಗೆಗಳನ್ನು ಧರಿಸಿರಬೇಕು. ವಿಶೇಷತಃ ಗಾಯನ ಕಛೇರಿಯಲ್ಲಿ ಕಲಾವಿದರು ಬಾಯಿಬಿಡುವ ರೀತಿ, ಕೈಯಾಡಿಸುವಿಕೆ, ಹಾವಭಾವಗಳೆಲ್ಲ ಹಿತಮಿತವಾಗಿರಬೇಕು. (ಇದನ್ನೆಲ್ಲ 'ಗಾಯಕ ಲಕ್ಷಣ' ಎಂಬ ಕೃತಿಯಲ್ಲಿ ಅವರು ಓದಿ ತಿಳಿದಿರುತ್ತಾರೆ.) ಸಹಕಲಾವಿದರನ್ನು ಮುಖ್ಯ ಕಲಾವಿದ ನಡೆಸಿಕೊಳ್ಳುವ ಮರ್ಯಾದೆಯ ರೀತಿ, ಪರಸ್ಪರ ಅವರ ನಡುವಿನ ಹೊಂದಾಣಿಕೆ, ಗೌರವ ಎಲ್ಲವೂ ಕಛೇರಿಯ ಒಟ್ಟಂದಕ್ಕೆ ಪೂರಕವಾಗುವ ಗಮನಾರ್ಹ ಅಂಶಗಳೇ.

ಇನ್ನು ಸಭಾಭವನದ ಶಬ್ದ ನಿಯಂತ್ರಣ ವ್ಯವಸ್ಥೆ, ಧ್ವನಿವರ್ಧಕ ವ್ಯವಸ್ಥೆಯೂ ಸಂಗೀತ ಪ್ರಸರಣದಲ್ಲಿ ಮಹತ್ತರ ಪಾತ್ರ ವಹಿಸುವುದರಿಂದ ಅದರ ಬಗ್ಗೆಯೂ ಗಮನವಿರಬೇಕು.

(ಆ ದಿನದ ಕಛೇರಿಯ ಏರ್ಪಾಡುಗಳು ಚೆನ್ನಾಗಿದ್ದುವೇ ? ಸಮಯಕ್ಕೆ ಸರಿಯಾಗಿ ಕಾರ್ಯಕ್ರಮ ಪ್ರಾರಂಭವಾಯಿತೇ ? ಆ ದಿನದ ಕಛೇರಿಯಲ್ಲಿ ಕಲಾವಿದ ಆರಿಸಿಕೊಂಡಿದ್ದ ರಾಗಗಳು ಒಟ್ಟಂದಕ್ಕೆ ಪೂರಕವಾಗಿದ್ದುವೇ ? ಅದೇ ಕಲಾವಿದನ ಹಿಂದಿನ ಕಛೇರಿಗಳಿಗೆ ಹೋಲಿಸಿದರೆ ಇಂದು ಹೇಗಿತ್ತು ? ಕಛೇರಿ ಏರ್ಪಾಡಾಗಿದ್ದದ್ದು ರಾಮನವಮಿ, ಗಣೇಶನ ಹಬ್ಬದ ಆಚರಣೆಯ ಅಂಗವಾಗಿ ಬೀದಿಯ ಚಪ್ಪರದಲ್ಲೇ ? ಸಭಾಭವನದಲ್ಲೇ ?

ಎರಡೂ ಕಡೆ ಕಛೇರಿಯ ನಿರೀಕ್ಷೆಗಳು ಬದಲಾಗುತ್ತವೆ. ಚಪ್ಪರದಲ್ಲಿ ಅದು ಜನಪ್ರಿಯತೆಗೆ ಹೆಚ್ಚು ಗಮನ ಹರಿಸಿದರೆ, ಸಭಾಭವನದಲ್ಲಿ ವಿದ್ವತ್ತಿಗೆ ಹೆಚ್ಚು ಗಮನವಿರುತ್ತದೆ. ಕಲಾವಿದನ ಸಾಹಿತ್ಯದ ಬಳಕೆ ಹೇಗಿತ್ತು? ಆಯಾ ಸಮಕಾಲೀನ ಬೇರೆ ಕಲಾವಿದರಿಗೆ ಹೋಲಿಸಿದರೆ ಈ ಕಲಾವಿದನ ಕಛೇರಿಯ ಸ್ಥಾನವೇನು?)

**ಸಂಗೀತವನ್ನು ಚೆನ್ನಾಗಿ ಆಸ್ವಾದಿಸಲು ಕೆಲ ಸೂತ್ರಗಳು**

ಈಗ ಸಂಗೀತದ ಕೇಳುಗರೆಲ್ಲ ಸಂಗೀತ ಕಛೇರಿಯೊಂದರಲ್ಲಿ ಗಮನಿಸಬಹುದಾದ ಕೆಲ ಅಂಶಗಳನ್ನು ನೋಡೋಣ.

೧. ಮೊತ್ತಮೊದಲಿಗೆ, ಕೇಳುತ್ತಿರುವ ಸಂಗೀತದ ಧ್ವನಿ ಸ್ವರೂಪ (ಆಯಾ ವಾದ್ಯ ಅಥವಾ ವ್ಯಕ್ತಿಯ ವೈಯಕ್ತಿಕ ಧ್ವನಿ ಸ್ವರೂಪ) ಎಂಥದು? ಅದು ಗಾಯನ ಕಛೇರಿಯಾದರೆ ಕೇಳುತ್ತಿರುವುದು ಕಲಾವಿದರ ಧ್ವನಿಯೇ? ಒಬ್ಬನೇ ಕಲಾವಿದನೋ? ದ್ವಂದ್ವ ಗಾಯನವೋ? ಪುರುಷನೋ? ಸ್ತ್ರೀಯೋ? ವಾದ್ಯ ಸಂಗೀತವಾದರೆ ಎಂತಹ ವಾದ್ಯ? ತಂತಿವಾದ್ಯವೇ? ತಾಳವಾದ್ಯವೇ? ಕೀಬೋರ್ಡ್? ಇನ್ನಾವುದು? ಗಮನಿಸಿ.

೨. ಹಾಡುತ್ತಿರುವ ಕೃತಿಯ ವೇಗ ಹೇಗಿದೆ? ವಿಳಂಬಕಾಲ, ಮಧ್ಯಮಕಾಲ, ದ್ರುತಕಾಲವೇ? ನಿಮಗೆ ತಾಳ ಗೊತ್ತಿಲ್ಲದಿದ್ದರೂ ನೀವು ಕೇಳುತ್ತಿರುವ ತಾಳವಾದ್ಯವನ್ನು ಆಲಿಸುತ್ತಾ ಏಟಿಗೆ ತಕ್ಕಂತೆ ನಿಮ್ಮ ತೊಡೆಯ ಮೇಲೊಮ್ಮೆ ಕೈ ತಟ್ಟುತ್ತಿರಿ. ಈ ವೇಗ ಸ್ಥಿರವಾಗಿದೆಯೇ? ಯಾವಾಗಲಾದರೂ ಬದಲಾಗುತ್ತದೆಯೆ? ಬದಲಾಯಿತೆಂದೆನಿಸಿದರೆ ವೇಗ ಹೆಚ್ಚುತ್ತಿದೆಯೋ? ಕಡಿಮೆಯಾಗುತ್ತಿದೆಯೋ? ಗಮನಿಸಿ. ತಾಳದ ಒಂದು ಆವರ್ತದಲ್ಲಿ ಲಯದ ಎಷ್ಟು ನಮೂನೆಗಳು ಬರುತ್ತವೆ ಎಂದು ಗೊತ್ತಾಗುತ್ತದೆಯೇ? ಕೇಳುತ್ತಿರುವ ಸಂಗೀತದಲ್ಲಿ ಈ ತಾಳಕ್ಕೆ ತಕ್ಕಂತೆ ಲಯಸ್ವರೂಪ ಕೇಳಿಸುತ್ತಿದೆಯೇ? ಗಮನಿಸಿ.

೩. ಈಗ ನಾದದ ಕಡೆಗೆ ಗಮನಹರಿಸಿ. ರಾಗದ ಮುಖ್ಯ ಸ್ವರೂಪ ಮತ್ತೆ ಮತ್ತೆ ಪುನರಾವರ್ತನೆಗೊಳ್ಳುತ್ತಿರುವುದು ತಿಳಿಯುತ್ತಿದೆಯೇ? ಕೇಳುತ್ತಿರುವಂತೆಯೇ ನೀವೂ ಅದರೊಂದಿಗೆ ಗುನುಗಬಲ್ಲಿರಾ? (ಇದನ್ನು ಮಾತ್ರ ನಿಮ್ಮ ಮನೆಯ ಏಕಾಂತದಲ್ಲಿ ಪ್ರಯೋಗ ಮಾಡಿ). ತೀವ್ರವಾದ ಏಕಾಗ್ರತೆಯಿಂದ ಗಮನಿಸಿದರೆ ಈ ರಾಗದ ಚಲನೆಗೆ ತಕ್ಕಂತೆ ಒಂದು ಗ್ರಾಫ್ ಬರೆಯಲು ಸಾಧ್ಯವೇ? ಪ್ರಯತ್ನಿಸಿ.

೪. ಸಂಗೀತದ ನಾದ ಪ್ರಮಾಣ (ಧ್ವನಿವರ್ಧಕದಲ್ಲ) ಕಛೇರಿಯುದ್ದಕ್ಕೂ ಒಂದೇ ಸಮನೆ ಇದೆಯೇ? ಇಲ್ಲವಾದಲ್ಲಿ ಯಾವಾಗ ಜೋರಾಯಿತು? ಯಾವಾಗ ಮೃದುವಾಯಿತು? ಹಾಗಿದ್ದಲ್ಲಿ ಅದು ಆಯಾ ಕೃತಿಯ ಸಂದೇಶಕ್ಕೆ ಹೊಂದುವಂತೆ ಬದಲಾಗುತ್ತಿದೆಯೇ?

೫. ಕೇಳುತ್ತಿರುವುದು ಗಾಯನ ಕಛೇರಿಯಾದರೆ, ಸಾಹಿತ್ಯದ ಪದಗಳನ್ನು ಅದರ ಅರ್ಥವನ್ನು ಗಮನಿಸಿ. ಸಾಹಿತ್ಯದ ಉದ್ದೇಶವನ್ನು ಸಂಗೀತದ ಮೂಲಕ ನಿಮಗೆ ತಲುಪಿಸುವ ರೀತಿ ಸಮರ್ಪಕವಾಗಿದೆಯೇ? ಸಾಹಿತ್ಯವು ಏನನ್ನು ವರ್ಣಿಸುತ್ತಿದೆ? ಸಂಗೀತ ಸಾಹಿತ್ಯಕ್ಕೆ ಏನಾದರೂ ಕೊಡುಗೆ ಕೊಡುತ್ತಿದೆಯೇ? ಗಮನಿಸಿ.

೬. ಈಗ ಶೈಲಿಯ ಕಡೆಗೆ ಗಮನ ಹರಿಸಿ. ಹಾಡುತ್ತಿರುವ ಕೃತಿಯನ್ನು ಏನೆನ್ನುತ್ತಾರೆ? ಶಾಸ್ತ್ರೀಯ ಸಂಗೀತದಲ್ಲಿ ಕರ್ನಾಟಕ ಶೈಲಿ ಮತ್ತು ಹಿಂದೂಸ್ತಾನಿ ಶೈಲಿ ಎಂಬ ಪ್ರಮುಖ ವಿಧಗಳು ನಿಮಗೆ ತಿಳಿದಿರುತ್ತದೆ. ಹಾಗಾದರೆ ಅದರಲ್ಲಿ ಈ ನಿರ್ದಿಷ್ಟ ಕೃತಿಗೆ ಏನೆಂದು ಹೆಸರು? ಕೇಳಿ ತಿಳಿಯಿರಿ.

೭. ಕೇಳುತ್ತಿರುವ ರಾಗ ಬದಲಾದಂತೆ ನಿಮ್ಮ ಭಾವನೆಗಳೇನಾದರೂ ಬದಲಾಗುತ್ತಿವೆಯೇ? ಸಾಹಿತ್ಯವಲ್ಲದೇ ಕೇವಲ ರಾಗ ನಿಮ್ಮಲ್ಲಿ ವಿವಿಧ ಭಾವನೆಗಳನ್ನು ಉಂಟು ಮಾಡುತ್ತಿದೆಯೇ? ಪ್ರತಿಬಾರಿ ಅದೇ ರಾಗವನ್ನು ಕೇಳಿದಾಗ ಅದೇ ಭಾವನೆ ನಿಮಗೆ ಬರುವುದೇ ಗಮನಿಸಿ. ಮತ್ತು ಏಕೆ ಎಂದು ಯೋಚಿಸಿ.

೮. ಕೆಲವು ಕೃತಿಗಳನ್ನು ಕೇಳಿದಾಗ ತಲೆದೂಗಿಸುವಂತಾಗುತ್ತದೆ. ಇನ್ನು ಕೆಲವನ್ನು ಕೇಳಿದಾಗ ಹೆಜ್ಜೆ ಕುಣಿಸುವಂತಾಗುತ್ತದೆ. ಈ ಕುರಿತು ಗಮನಿಸುತ್ತಿರಿ.

೯. ಹೀಗೆ ನೀವು ಗಮನವಿಟ್ಟು ಆಲಿಸಿದ ಕಛೇರಿಯು ಮುಗಿದನಂತರ ಯೋಚಿಸಿ ನೋಡಿ. ಈ ಇಡೀ ಕಛೇರಿಯಲ್ಲಿ ನಿಮಗೆ ಯಾವ ಕೃತಿ ಇಷ್ಟವಾಯಿತು? ಏಕೆ? ಯಾವ ಕೃತಿ ಇಷ್ಟವಾಗಲಿಲ್ಲ? ಏಕೆ? ಸಾಧ್ಯವಾದಷ್ಟು ವಿವರವಾಗಿ ಸಂಗೀತದ ಪದಗಳಲ್ಲಿ ವರ್ಣಿಸಿ. ಈಗ ನೀವು ಕೇಳಿದ ಈ ರೀತಿಯ ಸಂಗೀತ ಯಾವ ವಯಸ್ಸಿನವರಿಗೆ ಅಥವಾ ಎಂತಹ ಸ್ವಭಾವದವರಿಗೆ ಹೆಚ್ಚು ಪ್ರಿಯವಾಗಬಹುದು ಎಂದು ನಿಮಗನಿಸುತ್ತದೆ? ಯಾವ ಕಾರಣಕ್ಕೆ?

**ಮುಕ್ತಾಯ**

ವಿಮರ್ಶಕರು ತಮ್ಮ ವೈಯಕ್ತಿಕ ಅಭಿರುಚಿಗಳನ್ನು ಸಾಧಾರಣ ಕೇಳುಗರ ಮೇಲೆ ಹೇರದೆ, ಸಾಧ್ಯವಾದಷ್ಟು ಮಟ್ಟಿಗೆ ಕೇಳುಗರ ಸಂಗೀತ ಆಸ್ವಾದನೆಯ ತಿಳುವಳಿಕೆ ಕ್ರಮೇಣ ಹೆಚ್ಚುವಂತೆ ಮಾಡಬೇಕು. ವಿಮರ್ಶಕನಾಗಿ ಕೆಲಸಮಾಡುತ್ತಿರುವ ವ್ಯಕ್ತಿಗೇ ಸಂಗೀತ ಶಾಸ್ತ್ರದ ಅರಿವು ಇಲ್ಲವಾದಪಕ್ಷದಲ್ಲಿ ಅವರೂ ಕಿಂಚಿತ್ತಾದರೂ ಅತ್ತ ಗಮನ ಹರಿಸಿ, ತಮ್ಮ ಜ್ಞಾನವನ್ನು ವೃದ್ಧಿ ಮಾಡಿಕೊಳ್ಳುತ್ತಾ ತಮ್ಮ ಬರಹ ಕೇವಲ ವರದಿಗಳಾಗಿ ಉಳಿಯದೆ ವಿಮರ್ಶೆಯ ಮಟ್ಟಕ್ಕೇರುವಂತೆ ನೋಡಿಕೊಳ್ಳಬೇಕು. ಸಾಧ್ಯವಾದಷ್ಟು ಮಟ್ಟಿಗೆ ವಸ್ತುನಿಷ್ಠವಾದ ವಿಮರ್ಶೆಗಳು ಪ್ರಕಟಗೊಂಡಾಗ ಅವು ಆಯಾ ಕಲಾಪ್ರಕಾರಕ್ಕೂ, ಕಲಾವಿದರಿಗೂ, ಮತ್ತು ಶ್ರೋತೃವರ್ಗಕ್ಕೂ ಅಪಾರ ಸಹಾಯ ಮಾಡಿದಂತೆ ಎಂಬ ಗುರುತರ ಜವಾಬ್ದಾರಿಯ ಅರಿವು ಅವರಿಗಿರಬೇಕು. ಹೀಗೆ ಹೊಣೆಯರಿತ ವಿಮರ್ಶಕರ ಅಭಿಪ್ರಾಯಗಳು ಕಲೆಯನ್ನೂ, ಕಲಾಸ್ವಾದನೆಯನ್ನೂ ಹೊಸ ಹೊಸ ಎತ್ತರಕ್ಕೆ ಕೊಂಡೊಯ್ಯುವಲ್ಲಿ ಯಾವ ಸಂಶಯವೂ ಇಲ್ಲ.

ಡಾ|| ಕೆ. ಪೂರ್ಣ ಮಂಗಳಾ
೨೩, ೧೩ನೇ ಬ್ಲಾಕ್ ...
ಶ್ರೀರಾಮಪುರ, ೨ನೇ ಹಂತ, ಮೈಸೂರು - ೫೭೦ ೦೨೩

# ಎಲ್ಲಿಂದ ಬರುವರು ?

ಯಾವ
ದಿಕ್ಕಿನಿಂದಾದರೂ ಯಾವ
ಮಾಯೆಯಲ್ಲಾದರೂ ಬರಬಹುದು
ಕತ್ತಲಲ್ಲಿ, ಬೆಳಕಲ್ಲೂ ಬರಬಹುದು
ಬಂದ ಬಂದವರು, ಜಗದ ಮುಂದೆ ನಿಲ್ಲುವರು
ಮತ್ತೆ ನಡೆವರು ಸಾಲಾಗಿ;
ಹೋದವರು ಹಿಂದಿರುಗಲಾರದೆ
ಹೋಗುವರು ಎಲ್ಲಿಗೊ ?
ಎಂದೂ ಬಾರದ ಅತಿಥಿಗಳೆ ಬರುವರು
ಈ ಜಗತ್ತಿಗೆ;
ಇವರೆಲ್ಲ ಎಲ್ಲಿರುತ್ತಾರೆ ?
ಮಣ್ಣು, ಗಾಳಿ, ಮಳೆ, ಸೂರ್ಯ, ನಕ್ಷತ್ರಗಳಲ್ಲೆ
ಇಲ್ಲ, ನಮ್ಮ ನಿಮ್ಮಲ್ಲೆ?
ಯಾರು ಎಲ್ಲಿಂದ ಬರುವರು ?
ಬಂದವರು ಏನು ಮಾಡುವರು ಇಲ್ಲಿ?
ಇಷ್ಟಕ್ಕೂ ಇವರೆಲ್ಲಾ ಎಲ್ಲಿಂದ ಬರುವರು
ಎಲ್ಲಿಗೆ ಹೋಗುವರು
ಆಕಾಶಕಾಯಗಳಂತೆ
ಯಾವ ಲೋಕಕ್ಕೆ ಹೋಗುವರು
ಅಲ್ಲಿ ಇವರನ್ನು ಯಾರು
ಬರಮಾಡಿಕೊಳ್ಳುವರು ?



ಎಂ. ವೆಂಕಟಸ್ವಾಮಿ
ನಂ. ೫೭ಎ, ಸಾಯಿ ಲೋಟಸ್ ಲೇಔಟ್, ಸುಬ್ರಹ್ಮಣ್ಯಪುರ ಅಂಚೆ, ಬೆಂಗಳೂರು - ೫೬೦ ೦೬೧




ಅನುವಾದಕರು
**ಪ್ರೊ || ಆರ್. ಲಕ್ಷ್ಮೀನಾರಾಯಣ**
ಪ್ರಕಾಶಕರು
**ಸಂವಹನ**
೧೨/೧A, ಈವನಿಂಗ್ ಬಜಾರ್ ಹಿಂಭಾಗ
ಶಿವರಾಂಪೇಟೆ, ಮೈಸೂರು - ೧
**ಪುಟ : ೪೪೮+೪೦ ಬೆಲೆ : ರೂ. ೩೭೫**
ಪ್ರಥಮ ಆವೃತ್ತಿ: ೨೦೦೪
ಗಾತ್ರ : ಡೆಮಿ ⅛

(ಕುಂತಕನ ಸಂಸ್ಕೃತ ಅಲಂಕಾರಶಾಸ್ತ್ರ ಗ್ರಂಥದ ಸಮಗ್ರ ಕನ್ನಡ ಅನುವಾದ)

**ಸು**ಮಾರು ಎರಡು ಸಾವಿರ ವರ್ಷಗಳಷ್ಟು ಸುದೀರ್ಘವಾದ ಪರಂಪರೆಯನ್ನು ಹೊಂದಿರುವ ಭಾರತೀಯ ಕಾವ್ಯಮೀಮಾಂಸಾ ಶಾಸ್ತ್ರವು ಭರತನಿಂದ ಆರಂಭಗೊಂಡು ಜಗನ್ನಾಥ ಪಂಡಿತನವರೆಗೆ ಅತ್ಯಂತ ಮೌಲಿಕವಾದ ಅನೇಕ ಅಲಂಕಾರಶಾಸ್ತ್ರೀಯ ಸಿದ್ಧಾಂತ – ಪರಿಭಾಷೆಗಳನ್ನು ಕೊಡಮಾಡಿದೆ. ಧ್ವನಿಪ್ರಸ್ಥಾನ, ಅಲಂಕಾರ ಪ್ರಸ್ಥಾನ, ಔಚಿತ್ಯ ಸಿದ್ಧಾಂತ, ರೀತಿ ಸಿದ್ಧಾಂತ, ರಸ ಸಿದ್ಧಾಂತ ಇತ್ಯಾದಿಗಳಲ್ಲಿ ಕ್ರಿ. ಶ. ಹತ್ತನೆಯ ಶತಮಾನದವನೆಂದು ನಂಬಲಾಗಿರುವ ಕುಂತಕನ ವಕ್ರೋಕ್ತಿ ಸಿದ್ಧಾಂತವೂ ಒಂದು ಪ್ರಮುಖ ವಿಚಾರ.

ತೀರಾ ಇತ್ತೀಚಿನವರೆಗೂ ಅಲಂಕಾರಶಾಸ್ತ್ರದ ಉದ್ಗ್ರಂಥಗಳನ್ನು ಸಂಸ್ಕೃತ ಮೂಲದಲ್ಲಿಯೇ ಓದುವ ಪರಿಪಾಠವಿದ್ದ ಕಾರಣ ಅನೇಕ ಶಾಸ್ತ್ರ ಗ್ರಂಥಗಳು ಪ್ರಾದೇಶಿಕ ಭಾಷೆಗಳಿಗೆ ಅನುವಾದಗೊಂಡಿರಲಿಲ್ಲ. ಇಂಗ್ಲಿಷ್ ಮತ್ತು ಹಿಂದೀ ಮೊದಲಾದ ಭಾಷೆಗಳ ಮೇಲ್ಪಂಕ್ತಿಯನ್ನು ಅನುಸರಿಸಿ ಕಳೆದ ಶತಮಾನದಲ್ಲಿ ನಾನಾ ಶಾಸ್ತ್ರಗ್ರಂಥಗಳು ಕನ್ನಡಕ್ಕೂ ಬಂದವು. ಅವುಗಳಲ್ಲಿ ಅಲಂಕಾರಶಾಸ್ತ್ರಕ್ಕೆ ಸಂಬಂಧಪಟ್ಟ ಬಹುತೇಕ ಎಲ್ಲ ಪ್ರಮುಖ ಗ್ರಂಥಗಳನ್ನೂ ಡಾ|| ಕೆ. ಕೃಷ್ಣಮೂರ್ತಿಯವರು ಕನ್ನಡಿಸಿ ಸಾಹಸ ಮೆರೆದರು. ಕನ್ನಡ ಕೈಪಿಡಿ, ಭಾರತೀಯ ಕಾವ್ಯಮೀಮಾಂಸೆ, ಅಲಂಕಾರ ಶಾಸ್ತ್ರ ಮುಂತಾದ ಗ್ರಂಥಗಳೂ ಕನ್ನಡ ಶಾಸ್ತ್ರಸಾಹಿತ್ಯವನ್ನು ಸಮೃದ್ಧಗೊಳಿಸಿದವು.

ಕುಂತಕನ ವಕ್ರೋಕ್ತಿಜೀವಿತವನ್ನು ಇಂಗ್ಲಿಷ್ ಅನುವಾದದೊಂದಿಗೆ ಸಂಪಾದಿಸಿಕೊಟ್ಟ ಡಾ|| ಕೃಷ್ಣಮೂರ್ತಿಗಳು ಅದಾವ ಕಾರಣಕ್ಕೋ ಇದನ್ನು ಕನ್ನಡಿಸಲಿಲ್ಲ. ಇಂಥ ಒಂದು ಕೊರತೆಯನ್ನು ನೀಗಿಸುವಲ್ಲಿ ಪ್ರೊ|| ಲಕ್ಷ್ಮೀನಾರಾಯಣ ಅವರ ಪ್ರಕೃತ ಗ್ರಂಥವು ಸಾಕಷ್ಟು ನೆರವಾಗಿದೆ. ಇಡಿಯ ಗ್ರಂಥವನ್ನು ಮೂಲಕಾರಿಕೆಗಳ ಸಮೇತ ಸಮಗ್ರವಾಗಿ ಕನ್ನಡಿಸಿರುವುದು ಈ ಪುಸ್ತಕದ ಹೆಗ್ಗಳಿಕೆ. ಇದಕ್ಕೆ ಲೇಖಕರು ತಾವೇ ಬಿನ್ನವಿಸಿರುವಂತೆ ಇದುವರೆಗೆ ಪ್ರಕಟವಾಗಿರುವ ಇಂಗ್ಲಿಷ್-ಹಿಂದೀ ಸಂಸ್ಕರಣಗಳನ್ನು ಆಧರಿಸಿದ್ದಾರೆ. ಸಂಸ್ಕೃತ ಶಾಸ್ತ್ರಗ್ರಂಥವನ್ನು ನೇರವಾಗಿ ಕನ್ನಡಿಸುವ ಸಾಮರ್ಥ್ಯವುಳ್ಳ ವಿದ್ವಾಂಸರ ಸಂಖ್ಯೆ ಕ್ಷೀಣಿಸುತ್ತಿರುವ ಪ್ರಸ್ತುತ ಪರಿಸ್ಥಿತಿಯಲ್ಲಿ ಇಂತಹ ವಿದ್ಯಮಾನವು ಅನಿವಾರ್ಯವಾಗತೊಡಗಿದೆ. ಈ ಪ್ರಯತ್ನದಲ್ಲಿ ಪ್ರೊ|| ಲಕ್ಷ್ಮೀನಾರಾಯಣ ಅವರ ಪ್ರಯತ್ನವು ಪ್ರಶಂಸನೀಯ ಹಾಗೂ ಅಭಿನಂದನ ಯೋಗ್ಯವಾಗಿದೆ ಎಂದು ಧಾರಾಳವಾಗಿ ಹೇಳಬಹುದು.

ಆರಂಭದಲ್ಲಿ ಡಾ|| ಶ್ರೀ ರಾಮಭಟ್ಟರ ಮುನ್ನುಡಿ ಹಾಗೂ ಅನುವಾದಕರ ಪ್ರಸ್ತಾವನೆಗಳು ಸುದೀರ್ಘ ಹಿನ್ನೆಲೆಯನ್ನು ಒದಗಿಸಿವೆ. ಅನುಬಂಧಗಳು ಈ ಗ್ರಂಥದ ಉಪಯೋಗಿತೆಯನ್ನು ವರ್ಧಿಸಿವೆ. ಉದಾಹರಣೆಗೆ, ಪದ್ಯಗಳನ್ನು ಮುಕ್ತ ರೀತಿಯಲ್ಲಿ ಪದ್ಯಾನುವಾದ ಮಾಡಿರುವುದು ಒಂದು ಮಟ್ಟದ ಸೊಗಸನ್ನು ಹೆಚ್ಚಿಸಿದೆ. ಪ್ರೊಫೆಸರರ ವಿಮರ್ಶನ ಶಕ್ತಿಯೂ ಗ್ರಂಥದಲ್ಲೆಲ್ಲ ಸ್ಪಷ್ಟವಾಗಿ ಗೋಚರವಾಗುತ್ತದೆ. ಆದರೂ ಕೆಲವೊಮ್ಮೆ ಸಂಸ್ಕೃತ ಪದಗಳನ್ನು ಅರ್ಥೈಸುವಲ್ಲಿ 'ಕನ್ನಡತನವು' ಅಪಾರ್ಥಕ್ಕೆ ಆಸ್ಪದವಿತ್ತಿರುವುದು ಅಲ್ಲಲ್ಲಿ ಕಂಡುಬರುತ್ತದೆ. ಕರಡಚ್ಚು ತಿದ್ದುವಲ್ಲಿ, ಅದರಲ್ಲೂ ಮುಖ್ಯವಾಗಿ ಸಂಸ್ಕೃತ ಮೂಲವನ್ನು ಸಂಶೋಧಿಸುವಲ್ಲಿ ಇನ್ನಷ್ಟು ಎಚ್ಚರ ವಹಿಸಲೇಬೇಕಿತ್ತು ಎನಿಸುತ್ತದೆ. ಇಂಥ ಉದ್ಗ್ರಂಥಗಳು ಪುನರ್ಮುದ್ರಣದ ಭಾಗ್ಯವನ್ನು ಕಾಣುವುದು ವಿರಳವಾದ ಕಾರಣ ಮೊದಲ ಮುದ್ರಣದಲ್ಲಿಯೇ ಹೆಚ್ಚಿನ ಗಮನವು ಅಪೇಕ್ಷಿತವಾಗುತ್ತದೆ.

ವಕ್ರೋಕ್ತಿಜೀವಿತವು ಅಲಂಕಾರಶಾಸ್ತ್ರ ಗ್ರಂಥಗಳಲ್ಲಿ ಅವಶ್ಯ ಪರಿಗಣನೀಯವಾದದ್ದು. ಇಂಥ ಗ್ರಂಥವನ್ನು ಓದುವವರ ಸಂಖ್ಯೆಯು ಬೆರಳೆಣಿಕೆಯಷ್ಟಿರುವಾಗ ಇದನ್ನು ಪರಿಶ್ರಮವಹಿಸಿ ಕನ್ನಡಕ್ಕೆ ತಂದಿರುವ ಈ ವಿದ್ವತ್ ಕಾರ್ಯದ ಸಫಲತೆಗೆ ನಾನು ಅನುವಾದಕರನ್ನು ಮತ್ತೊಮ್ಮೆ ಅಭಿನಂದಿಸುತ್ತೇನೆ. ಕನ್ನಡ ವಿದ್ವಾಂಸರು ಇದನ್ನು ಓದಿ ಅನುವಾದಕರ ಪ್ರಯತ್ನವನ್ನು ಸಾರ್ಥಕಗೊಳಿಸಲಿ ಎಂದೂ ಆಶಿಸುತ್ತೇನೆ.

**ಡಾ|| ಬಿ. ಎಸ್. ರಾಮಕೃಷ್ಣ ರಾವ್**
ಸಂಸ್ಕೃತ ವಿಭಾಗ, ಸುರಾನಾ ಕಾಲೇಜು, ಬಸವನಗುಡಿ
ಬೆಂಗಳೂರು – ೪

---

*೪೪ನೇ ಪುಟದಿಂದ (ಅಂತರಂಗದ ಪಿಸುದನಿ)*

ಲಾಗಿತ್ತು. ಬೆವೆತು ನೀರಿಳಿಯುತ್ತಿದ್ದ ನನ್ನ ಮುಖ ನೋಡಿಯೋ ಎಂಬಂತೆ ಹುಡುಗ ಹೊರಗಿಟ್ಟಿದ್ದ ನೀರು ಕೊಡದೆ ಫ್ರಿಜ್ಜಿನೊಳಗಿನ ನೀರಿನ ಬಾಟಲು ತಂದು ಎದುರಿಗಿಟ್ಟ. ಸತ್ಯಕ್ಕೂ ಖುಷಿಯಾಗಿದ್ದು ಹೌದು. ಖಾರಖಾರದ ಊಟ ಮುಗಿಸಿ, ಇಡೀ ಬಾಟಲಿಯ ನೀರು ಖಾಲಿ ಮಾಡಿ, ಮೂವತ್ತು ರೂಪಾಯಿಗಳ ಬಿಲ್ಲು ಕೊಟ್ಟು, ಅಷ್ಟು ದೂರ ಹೋಗಿ ಬೀಡಾ ಅಂಗಡಿಯಲ್ಲಿ ಬೀಡಾ ಕಟ್ಟಿಸಿಕೊಳ್ಳುವಾಗ ಚಕ್ಕನೆ ಹೊಳೆಯಿತು, ಬಿಲ್ಲಿಗೆ ನೀರಿನ ದುಡ್ಡು ಸೇರಿಸಿರಲಿಲ್ಲ. ಫುಲ್ ಮೀಲ್ಸಿನ ಮೂವತ್ತು ರೂಪಾಯಿ ಮಾತ್ರ ಬರೆಯಲಾಗಿತ್ತು ಮತ್ತು ನಾನು ಅಷ್ಟೇ ಕೊಟ್ಟು ಬಂದಿದ್ದೇನೆ. 'ಬಿಡುಬಿಡು, ಜುಜುಬಿ ಹತ್ತು ರೂಪಾಯಿ' ಬೆಳಬೆಳಿಗ್ಗೆ ನೂರಾರು ರೂಪಾಯಿಗೆ ನಾಮ ಹಾಕಿಸಿಕೊಂಡಿದ್ದ ಮನಸ್ಸು ಧೋರಣೆ ಮಾಡಿತು. ಆದರೆ ಸಂಸ್ಕಾರ ಅನ್ನುವುದೊಂದಿರುತ್ತದೆಯಲ್ಲ? ಮೋಸ ಮಾಡಿದರೆ ತಿಂಗಳುಗಟ್ಟಲೆ ಕೊರೆಯುತ್ತಿರುತ್ತದೆ. ಅದೂ ಪುಣ್ಯಕ್ಷೇತ್ರಕ್ಕೆ ಬಂದು? ದೇವರ ಕಣ್ಣಂಚಿನಲ್ಲಿ? ಅನ್ಯಾಯ ಮಾಡುವವರು ಮಾಡಲಿ, ನಾನು ಯಾಕೆ ಅವರಂತಾಗಬೇಕು? ಮಹಾ ಪ್ರಾಮಾಣಿಕತೆ. 'ಋಣ ಇಟ್ಟುಕೊಂಡು ಸತ್ತರೆ ಮುಂದಿನ ಜನ್ಮದಲ್ಲಿ ಆ ಮನೆಯಲ್ಲಿ ಎತ್ತಾಗಿ ಹುಟ್ಟಿ ಗೆಯ್ಮೆ ಮಾಡಿ ಋಣ ತೀರಿಸಬೇಕು' ಎನ್ನುವ ನಂಬಿಕೆ ಮಾತಿನ ಕುಟುಕುಮುಳ್ಳು. ಟ್ರ್ಯಾಕ್ಟರ್, ಟಿಲ್ಲರ್ ಜಮಾನಾದಲ್ಲಿ ಎತ್ತು ಸಾಕುವವರು ಎಷ್ಟು ಜನ? ಏನೇ ಆಗಲಿ, ಇನ್ನು ಇಲ್ಲಿಗೆ ಬರುತ್ತೇನೋ, ಇಲ್ಲವೇ ಇಲ್ಲವೋ? ಇವನ ಋಣ ನನಗ್ಯಾಕೆ?

ವಾಪಸು ಹೋಗಿ ಹತ್ತು ರೂಪಾಯಿಯ ಋಣ ತೀರಿಸಿ ಹಿಂದಿರುಗುವಾಗ ಮನದೊಳಗೇನೋ ನಿರಾಳಭಾವ.

'ನ ಬ್ರೂಯಾತ್ ಸತ್ಯಮಪ್ರಿಯಂ' ಅನ್ನುವ ಹಾಗೆ ಪ್ರಾಮಾಣಿಕತೆ ಕೂಡ ಎಲ್ಲಾ ಸಂದರ್ಭಕ್ಕೂ ಯೋಗ್ಯವಾದದ್ದಲ್ಲ ಎನ್ನುವ ಅರಿವಾದದ್ದು ಸಂಜೆ ಅದೇ ಗುಂಟೂರು ಹೋಟೆಲಿಗೆ ಊಟಕ್ಕೆ ಹೋದಾಗ. ಸಪ್ಲೈ ಹುಡುಗನ ತುಟಿಯ ಬದಿ ಊದಿಕೊಂಡು ರಕ್ತ ನೀಲಿಗಟ್ಟಿತ್ತು ಮತ್ತು ನನ್ನನ್ನು ನೋಡುತ್ತಿದ್ದಂತೆ ಅವನ ಕಣ್ಣುಗಳು ತುಂಬಿಕೊಂಡು ಕಣ್ಣೀರು ಕೆನ್ನೆಗುಂಟ ಜಾರಿಹೋಯ್ತು. ಮುಖದಲ್ಲಿ ಮಿಂಚಿದ ಸೂಕ್ಷ್ಮ ಅಸಮಾಧಾನವನ್ನು, ಅಪಾರ ದುಃಖವನ್ನು, ತೋರಗೊಡದಂತೆ ಮುಖ ತಿರುಗಿಸಿಕೊಂಡ ಸಪ್ಲೈ ಹುಡುಗ ನಂತರ ನಿಧಾನಕ್ಕೆ ಕಾಲೆಳೆದುಕೊಂಡು ನನ್ನ ಆರ್ಡರಿಗಾಗಿ ಹತ್ತಿರ ಬಂದು ನಿಂತ.

**ವಸುಮತಿ ಉಡುಪ**
'ಅಮೂಲ್ಯ', ನೆಲಮಹಡಿ, ನಂ. ೧೨೦, ೩ನೇ ತಿರುವು
ವಿಜಯನಗರ ರೈಲ್ವೆ ಬಡಾವಣೆ, ಮೈಸೂರು - ೫೭೦ ೦೧೬

# ಬಂಡವಾಳಶಾಹಿ ರಾಷ್ಟ್ರಗಳು ಮತ್ತು ಸಾಮ್ರಾಜ್ಯಶಾಹಿ ನೀತಿ

ಜಾಗತೀಕರಣದ ಅಲೆಯು ಈಗಾಗಲೇ ಪ್ರಪಂಚದಾದ್ಯಂತ ವ್ಯಾಪಿಸಿಕೊಂಡು ಆಯಾ ದೇಶಗಳ ಬಹು ಸಂಕೀರ್ಣವಾದ ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿ ಬದಲಾವಣೆಗಳು ಜಾರಿಗೆ ಬರುತ್ತಿರುವುದು ಎಲ್ಲರಿಗೂ ತಿಳಿದ ವಿಷಯ. 'ಜಾಗತೀಕರಣ' ಎಂಬ ಶಬ್ದವು ಹೊಸದೇನಲ್ಲದಿದ್ದರೂ ಇಪ್ಪತ್ತೊಂದನೇ ಶತಮಾನದಲ್ಲಿ ಆ ಶಬ್ದಕ್ಕೆ ದೊರೆಯುತ್ತಿರುವ ಪ್ರಾಮುಖ್ಯತೆಗೆ ಮಿತಿಯೇ ಇಲ್ಲ. ಅನೇಕ ಉತ್ಪಾದನಾ ಕ್ಷೇತ್ರಗಳನ್ನು ಹೊಂದಿರುವ ದೇಶಗಳನ್ನೇ 'ಜಾಗತಿಕ ಹಳ್ಳಿ' ಎಂಬ ನಾಮಧೇಯದಿಂದ ಕರೆದು ಮುಕ್ತ ವ್ಯಾಪಾರಕ್ಕೆ ಆಮಂತ್ರಣ ನೀಡಿ ಅಲ್ಲಿ ಉತ್ಪಾದಿಸಲ್ಪಟ್ಟ ಸರಕು ಮತ್ತು ಸೇವೆಗಳಿಗೆ ಮುಕ್ತ ಮಾರುಕಟ್ಟೆ ಕಲ್ಪಿಸಲಾಗುತ್ತಿದೆ.

ಕೆಲವೇ ಕೆಲವು ಬಂಡವಾಳಶಾಹಿ (ಖಾಸಗಿ ಸಂಸ್ಥೆಗಳು ಉತ್ಪಾದನಾ ವಲಯಗಳನ್ನು ನಿಯಂತ್ರಿಸುವ ಹಾಗೂ ಮುಕ್ತ ಮಾರುಕಟ್ಟೆ ನೀತಿ ಅನುಸರಿಸುವ) ರಾಷ್ಟ್ರಗಳು ಆರ್ಥಿಕವಾಗಿ ಹಿಂದುಳಿದ ರಾಷ್ಟ್ರಗಳ ಮೇಲೆ ತಮ್ಮ ಯಾಜಮಾನ್ಯ ಸ್ಥಾಪಿಸುತ್ತಿರುವುದನ್ನು ನೋಡುತ್ತಿದ್ದೇವೆ. ಉದಾಹರಣೆಗೆ, ಅಮೆರಿಕಾ ಸಂಯುಕ್ತ ಸಂಸ್ಥಾನವು ಇರಾಕಿನ ಮೇಲೆ ಮಾಡಿದ ದಾಳಿ. ಸಾಮಾನ್ಯರಿಗೆ ಈ ಸುದ್ದಿಯು ಒಬ್ಬ ಭ್ರಷ್ಟ ಸರ್ವಾಧಿಕಾರಿಯಾಗಿದ್ದ ಸದ್ದಾಂ ಹುಸೇನನನ್ನು ಸೆರೆಹಿಡಿದು ಬಂಧಿಸಿ ಅಲ್ಲಿನ ಜನರಿಗೆ ಎಲ್ಲಾ ರೀತಿಯ ಸ್ವಾತಂತ್ರ್ಯವನ್ನು ಕಲ್ಪಿಸಿಕೊಡುವಂತೆ ಕಂಡರೂ, ವಾಸ್ತವದಲ್ಲಿ ಅದು ಈ ದಾಳಿಯ ಹಿನ್ನೆಲೆಯನ್ನು ಸೂಕ್ಷ್ಮವಾಗಿ ಗ್ರಹಿಸಿದರೆ ಇರಾಕಿನಲ್ಲಿ ಲಭ್ಯವಿರುವ ಅಪಾರ ತೈಲ ಸಂಪತ್ತನ್ನು ವಶಪಡಿಸಿಕೊಳ್ಳುವ ಹುನ್ನಾರವಾಗಿದೆ. ಈ ದಾಳಿಗೆ ಅಭಿವೃದ್ಧಿ ಹೊಂದಿದ ರಾಷ್ಟ್ರಗಳು ಹಾಗೂ ವಿಶ್ವಸಂಸ್ಥೆಯು ಮೂಕಸಾಕ್ಷಿಯಾಗಿ ಇದ್ದದ್ದನ್ನು ಇಲ್ಲಿ ಸ್ಮರಿಸಬಹುದು. ಪ್ರಪಂಚದಾದ್ಯಂತ ಕೆಲವರಿಗೆ ಅಮೆರಿಕಾವು ಒಂದು ಧರ್ಮ ಸಂಸ್ಥಾಪನಾ ರಾಷ್ಟ್ರವಾಗಿ ಕಂಡಿದ್ದರೆ ಆಶ್ಚರ್ಯವೇನಿಲ್ಲ. ಈ ಒಂದು ಸಂಗತಿಯು ಇರಾಕಿನ ಮೇಲೆ ಅಮೆರಿಕಾವು ತನ್ನ ಪ್ರಭುತ್ವವನ್ನು ಹೇರುವ ಮಹದಾಸೆಗೆ ಸಾಕ್ಷಿಯಾಗಿದೆ.

ಭಾರತವೂ ಸಹ ಇದೇ ರೀತಿಯ ಆಂಗ್ಲರ ದಾಳಿಗೆ ತುತ್ತಾದದ್ದು ಈಗ ಇತಿಹಾಸ. ಆದರೆ ಸಾಮ್ರಾಜ್ಯಶಾಹಿ ನೀತಿಯನ್ನು ಅರಿಯಲು ಇರಾಕ್ ಘಟನೆ ನೆರವಾಗುತ್ತದೆ. ಹದಿನೈದು ಮತ್ತು ಹದಿನಾರನೇ ಶತಮಾನದಲ್ಲಿ ಇಂಗ್ಲೆಂಡ್‌ನಲ್ಲಿ ಮರ್‌ಚೆಂಟ್ ಅಡ್‌ವೆಂಚರ್ಸ್, ಈಸ್ಟ್‌ಲ್ಯಾಂಡ್ ಮತ್ತು ಮುಸ್‌ಕೋವಿ ಕಂಪನಿಗಳು ಹೊರದೇಶಗಳಿಗೆ ನೌಕಾಮಾರ್ಗದ ಮೂಲಕ ಬಂದದ್ದು ವ್ಯಾಪಾರದ ಉದ್ದೇಶದಿಂದ ಆದರೂ ಆನಂತರದಲ್ಲಿ ಆಯಾ ದೇಶಗಳಲ್ಲಿಯ ಯಥೇಚ್ಛವಾಗಿ ದೊರೆಯುತ್ತಿದ್ದ ಸಂಪನ್ಮೂಲಗಳನ್ನು ಕೊಳ್ಳೆಹೊಡೆದು ತಮ್ಮ ದೇಶದ ಉತ್ಪಾದಿತ ಸರಕುಗಳಿಗೆ ಮಾರುಕಟ್ಟೆ ಸೃಷ್ಟಿಸಿ ಲಾಭಗಳಿಸುವುದೇ ಅವರ ಗುರಿಯಾಗಿದ್ದಿತು. ಈ ಮೇಲೆ ಸೂಚಿಸಿರುವ ಕಂಪನಿಗಳು ಈಸ್ಟ್ ಇಂಡಿಯಾ ಕಂಪನಿಗೆ ಭದ್ರ ಬುನಾದಿಯನ್ನು ಹಾಕಿದಂತಹ ಅಂತರರಾಷ್ಟ್ರೀಯ ವ್ಯಾಪಾರ ಸಂಸ್ಥೆಗಳು.

೧೮೦೦ರಿಂದ ೧೯೦೪ರವರೆಗೆ ಅಮೆರಿಕಾದಲ್ಲಿ ಸಣ್ಣಪುಟ್ಟ ವ್ಯಾಪಾರ ಸಂಘಟನಾ ಸಂಸ್ಥೆಗಳು ಹಾಗೂ ಉದ್ಯಮಗಳು ಮುಖ್ಯವಾಗಿ ಅಲ್ಲಿನ ಸ್ಥಳೀಯ, ಪ್ರಾಂತೀಯ ಮತ್ತು ರಾಷ್ಟ್ರೀಯ ಮಾರುಕಟ್ಟೆಗಳ ಬೇಡಿಕೆಗಳನ್ನು ಪೂರೈಸುತ್ತಿದ್ದವು ಮತ್ತು ಅದರ ಒಟ್ಟು ಉತ್ಪಾದನೆಯು ಶೇಕಡ ೩೨.೯ರಷ್ಟಿದ್ದಿತು. ಡ್ಯೂ ಬಫ್ ಮತ್ತು ಹೆರ್‌ಮನ್‌ರು ಹೇಳುವ ಪ್ರಕಾರ ೧೯೮೦ - ೧೯೯೦ರಲ್ಲಿ ಅಮೆರಿಕಾವು ಎಲ್ಲಾ ಬಂಡವಾಳಶಾಹಿ ರಾಷ್ಟ್ರಗಳಿಗೆ ಹೋಲಿಸಿದರೆ ಅತಿಹೆಚ್ಚಿನ ವಾಣಿಜ್ಯ ಸಂಕೀರ್ಣಗಳನ್ನು ಸ್ಥಾಪಿಸಿದ ರಾಷ್ಟ್ರವಾಗಿದೆ. ಇದು ತನ್ನ ಸ್ಪರ್ಧಾತ್ಮಕ ಲಾಭಗಳಿಸುವಿಕೆಯ ದಾಹವನ್ನು ಇಂದಿಗೂ ತೋರಿಸುತ್ತಿದೆ. ಇದಕ್ಕೆ ಸಾಕ್ಷಿಯಾಗಿ ಅಮೆರಿಕಾವು ಟೈಂ ವಾರ್‌ನರ್ ಎಂಬ ಸಂಸ್ಥೆಯನ್ನು ೨೦೦೦ನೇ ಇಸವಿಯಲ್ಲಿ ಸುಮಾರು ೧೦೬ ಬಿಲಿಯನ್ ಡಾಲರಿಗೆ ಕೊಂಡದ್ದು.

ಕೆಲವು ಪಾಶ್ಚಿಮಾತ್ಯ ಹಾಗೂ ಐರೋಪ್ಯ ರಾಷ್ಟ್ರಗಳು ಜಾಗತೀಕರಣದ ಹೆಸರಿನಲ್ಲಿ ಸಾಮ್ರಾಜ್ಯಶಾಹಿ ನೀತಿಯಿಂದ ರಾಜಕೀಯ ಮತ್ತು ಆರ್ಥಿಕ ಹಿಡಿತವನ್ನು ಸಾಧಿಸುವ ಪ್ರಯತ್ನದಲ್ಲಿ ತಮ್ಮದೇ ಆದ ಹಾದಿಯಲ್ಲಿ ಸಾಗುತ್ತಿರುವುದು ಕಂಡುಬರುತ್ತದೆ. ಲೆನಿನ್‌ರು ತಮ್ಮ ಗ್ರಂಥವಾದ 'ಇಂಪೀರಿಯಲಿಸಮ್, ದ ಹೈಯಸ್ಟ್ ಸ್ಟೇಜ್ ಆಫ್ ಕ್ಯಾಪಿಟಲಿಸಮ್'ನಲ್ಲಿ ಮುಖ್ಯವಾಗಿ ಐದು ಲಕ್ಷಣಗಳ ಮೂಲಕ ಸಾಮ್ರಾಜ್ಯಶಾಹಿಯನ್ನು ಹೀಗೆ ವ್ಯಾಖ್ಯಾನಿಸುತ್ತಾರೆ :

೧. ಅತಿ ಉಚ್ಚ ಹಂತದಲ್ಲಿ ಉತ್ಪಾದನೆ ಮತ್ತು ಬಂಡವಾಳದ ಕೇಂದ್ರೀಕರಣವಾಗಿ ಏಕಸ್ವಾಮ್ಯ ಮಾರುಕಟ್ಟೆಗಳು ಆರ್ಥಿಕ ಜೀವನದಲ್ಲಿ ಮುಖ್ಯ ಪಾತ್ರ ವಹಿಸುತ್ತವೆ.
೨. ಹಣಕಾಸು, ಬಂಡವಾಳ, ಉದ್ಯಮಗಳಿಗೆ ಸಂಬಂಧಿಸಿದ ಅನೇಕ ಸಂಸ್ಥೆಗಳು ಅಲ್ಪ ಜನಾಧಿಪತ್ಯದಲ್ಲಿ ಸಮ್ಮಿಳನಗೊಳ್ಳುತ್ತವೆ.
೩. ಸರಕು ರಫ್ತಿಗಿಂತ, ಬಂಡವಾಳದ ರಫ್ತಿಗೆ ಹೆಚ್ಚು ಪ್ರಾಮುಖ್ಯತೆಯನ್ನು ನೀಡಲಾಗುತ್ತದೆ.
೪. ಬಂಡವಾಳ ಹೂಡಿಕೆ ಸಂಸ್ಥೆಗಳು ಅಂತರರಾಷ್ಟ್ರೀಯ ಏಕಸ್ವಾಮ್ಯಗಳಾಗಿ ಪ್ರಪಂಚವನ್ನು ಆರ್ಥಿಕವಾಗಿ ವಿಭಜಿಸುತ್ತವೆ.
೫. ಪ್ರಪಂಚವನ್ನು ಪ್ರಾಂತೀಯವಾಗಿ ಅತ್ಯುನ್ನತ ಬಂಡವಾಳ ಶಕ್ತಿಗಳನ್ನಾಗಿ ವಿಭಜಿಸುವಲ್ಲಿ ಸಫಲವಾಗುತ್ತವೆ.

ಪ್ರಸಿದ್ಧ ಮಾರ್ಕ್ಸ್‌ವಾದಿ ಕಾರ್ಲ್ ಕೌಟ್‌ಸ್ಕಿ ಹೇಳುವಂತೆ ಸಾಮ್ರಾಜ್ಯಶಾಹಿ ರಾಷ್ಟ್ರಗಳು ಅತಿ ಉನ್ನತಮಟ್ಟದಲ್ಲಿ ಅಭಿವೃದ್ಧಿ ಹೊಂದಿದ ಕೈಗಾರಿಕಾ ಬಂಡವಾಳಶಾಹಿಗಳಾಗಿರುತ್ತವೆ.

ಪ್ರಸ್ತುತ, ಆರ್ಥಿಕಾಭಿವೃದ್ಧಿ ಹೊಂದಿದ ರಾಷ್ಟ್ರಗಳು ಸಾಮ್ರಾಜ್ಯಶಾಹಿ ಆರ್ಥಿಕ ನೀತಿಗಳ ಕಡೆ ಜಾಗತೀಕರಣದ ಮೂಲಮಂತ್ರದಿಂದ ಅನಭಿವೃದ್ಧಿ ರಾಷ್ಟ್ರಗಳ ಆರ್ಥಿಕ ನೀತಿಗಳನ್ನು ರೂಪಿಸುವಲ್ಲಿ ಯಶಸ್ಸನ್ನು ಕಂಡಿವೆ. ಅಂತೆಯೇ ಅಭಿವೃದ್ಧಿ ಹೊಂದುತ್ತಿರುವ ಮತ್ತು ಹಿಂದುಳಿದ ರಾಷ್ಟ್ರಗಳು ಕುರುಡರಂತೆ ಸಾಮ್ರಾಜ್ಯಶಾಹಿಗಳ ಜಾಲಕ್ಕೆ ಬೀಳುತ್ತಿರುವುದು ಒಂದು ದುರಂತ. ವಿದೇಶೀ ನೇರ ಬಂಡವಾಳ ಹೂಡಿಕೆಯಿಂದಲೇ ರಾಷ್ಟ್ರದ ಸರ್ವಾಭಿವೃದ್ಧಿ ಎಂಬ ಮೂಢನಂಬಿಕೆ ಎಲ್ಲೆಡೆ ಆವರಿಸುತ್ತಿದೆ.

ಆರ್ಥಿಕವಾಗಿ ಅಭಿವೃದ್ಧಿ ಹೊಂದಿದ ಕೆಲವು ಪಾಶ್ಚಿಮಾತ್ಯ ರಾಷ್ಟ್ರಗಳು ತಮ್ಮ ಬಂಡವಾಳ ಹೂಡಿಕೆಯತ್ತ ಒಲವು ತೋರಿಸುತ್ತಾ ಕ್ರಮೇಣವಾಗಿ ಸಾಮ್ರಾಜ್ಯಶಾಹಿಯ ಹಸ್ತವನ್ನು ಆರ್ಥಿಕವಾಗಿ ದುರ್ಬಲವಾದ ರಾಷ್ಟ್ರಗಳ ಆಂತರಿಕ ರಾಜಕೀಯ ಅಸ್ಥಿರತೆ, ಹಣದುಬ್ಬರ, ನಿರುದ್ಯೋಗ, ಬಡತನ, ಪ್ರಾದೇಶಿಕ ಅಸಮತೋಲನ, ಔದ್ಯೋಗಿಕ ಹಾಗೂ ತಾಂತ್ರಿಕ ಹಿಂದುಳಿಕೆ, ಕೃಷಿ ಹಾಗೂ ಗುಡಿ ಕೈಗಾರಿಕೆಗಳು ತಯಾರಿಸುವ ಸರಕುಗಳ ಬೇಡಿಕೆಗಳ ಕುಸಿತ ಮತ್ತು ಪತನ, ವಿದೇಶೀ ವ್ಯಾಪಾರದ ಮೇಲೆ ಹೆಚ್ಚು ಅವಲಂಬನೆ ಮತ್ತು ಮಾನವ ಹಕ್ಕುಗಳ ಉಲ್ಲಂಘನೆ – ಹೀಗೆ ಅನೇಕ ಸಮಸ್ಯೆಗಳನ್ನು ತಮ್ಮ ಲಾಭಗಳಿಕೆಗೆ ಸಾಧನವನ್ನಾಗಿಸಿಕೊಳ್ಳುತ್ತಿರುವುದು ಶೋಚನೀಯ. ಅಭಿವೃದ್ಧಿ ಹೊಂದಿದ ಪಾಶ್ಚಿಮಾತ್ಯ ರಾಷ್ಟ್ರಗಳು ತಮ್ಮ ಸರಕು ಸೇವೆಗಳಿಗೆ ಅತಿ ಬುದ್ಧಿವಂತಿಕೆಯಿಂದ ಮತ್ತು ರಾಜಕೀಯ ಬೆಂಬಲದಿಂದ ಮಾರುಕಟ್ಟೆಯನ್ನು ಸೃಷ್ಟಿಸಿ ಮಾರಾಟ ಮಾಡುತ್ತಲೇ ಇದ್ದಾರೆ. ಈ ಮೇಲೆ ನಮೂದಿಸಿರುವ ಸಮಸ್ಯೆಗಳನ್ನು ಕುರಿತು ವಿವೇಚಿಸಲು ಅಮೆರಿಕಾದ ಅಧ್ಯಕ್ಷ ಬುಷ್‌ಗಾಗಲೀ ಅಥವಾ ಬ್ರಿಟನ್ನಿನ ಬ್ಲೇರ್‌ಗಾಗಲೀ ಸಮಯ ಮತ್ತು ತಾಳ್ಮೆಯಾದರೂ ಎಲ್ಲಿದೆ ! ಜಾಗತೀಕರಣದ ಗುಂಗಿನಲ್ಲಿ ವಿಹರಿಸುತ್ತಿರುವ ರಾಷ್ಟ್ರಗಳು, ಸಮಾಜವಾದಿ ನೀತಿಗಳನ್ನು ಅನುಸರಿಸುತ್ತಿರುವ ದೇಶಗಳನ್ನು ಶೂದ್ರರಂತೆ ಕಾಣುವುದರಲ್ಲಿ ಆಶ್ಚರ್ಯವೇನಿಲ್ಲ. ಈ ಎಲ್ಲಾ ವಿಷಯಗಳು ಅನಭಿವೃದ್ಧ ರಾಷ್ಟ್ರಗಳ ನೀತಿಕರ್ತಾರರ ಗಮನದಲ್ಲಿಲ್ಲವೆಂದಲ್ಲ. ಆದರೂ, ಈ ಎಲ್ಲಾ ನಾಯಕರು ಪಾಶ್ಚಿಮಾತ್ಯ ರಾಷ್ಟ್ರಗಳ ಆಣತಿಯಂತೆ ಮತ್ತು ಅದರಿಂದ ದೊರೆಯಬಹುದಾದ ಅಲ್ಪ ಮಟ್ಟದ ಅನುಕೂಲಗಳಿಗೆ ಜೋತುಬಿದ್ದಿರುವುದು ಖಂಡನೀಯವಾದುದು. ಹಿಂದುಳಿದ ರಾಷ್ಟ್ರಗಳು ಬಯಸಿದ್ದೇ ಆದಲ್ಲಿ ಪಾಶ್ಚಿಮಾತ್ಯ ಬಂಡವಾಳಶಾಹಿ ರಾಷ್ಟ್ರಗಳ ಕಪಿಮುಷ್ಟಿಯಿಂದ ಈಗಲೂ ಪಾರಾಗಬಹುದು. ತಮ್ಮದೇ ಅರ್ಥಪೂರ್ಣ ರಾಜಕೀಯ ಮತ್ತು ಆರ್ಥಿಕನೀತಿಗಳ ರೂಪುರೇಷೆಗಳನ್ನು ಸಿದ್ಧಪಡಿಸಿ ಪ್ರಾಮಾಣಿಕವಾಗಿ ಅವುಗಳನ್ನು ಜಾರಿಗೆ ತಂದಲ್ಲಿ ಸರ್ವತೋಮುಖವಾದ ಅಭಿವೃದ್ಧಿಯಾಗುವುದರಲ್ಲಿ ಎರಡು ಮಾತಿಲ್ಲ. ಹೀಗೆ ಒಂದು ಸುಭದ್ರವಾದ ಸಮಾಜವನ್ನು ನಿರ್ಮಾಣಮಾಡುವುದು ಕಷ್ಟಸಾಧ್ಯವೇನಲ್ಲ.

ಬಿ. ಎನ್. ವೇಣುಗೋಪಾಲ್
೪೨೫, ೮ನೇ ಮುಖ್ಯರಸ್ತೆ, ಹನುಮಂತನಗರ, ಬೆಂಗಳೂರು – ೫೬೦ ೦೧೯

# ಹೊಸ ಆಟಕ್ಕೆ ವಿದಾಯ

ಬಿಳುಮನೆ ರಾಮದಾಸ್



> ಮಟಮಟ ಮಧ್ಯಾಹ್ನ ನಾವು ಮನೆಗೆ ಬಂದಾಗ ನಮ್ಮ ತಂದೆಯವರು ಜವಳಿ ಅಂಗಡಿಯಲ್ಲಿ ಕೂತು ಹರಟುತ್ತಿದ್ದರು. ಅವರು ನಮ್ಮನ್ನು ಗಮನಿಸಿದರೂ ಗಮನಿಸಿದಂತೆ ಇದ್ದರು. ಅವರು ಗೆಳೆಯರೊಂದಿಗೆ ಜವಹರಲಾಲ್ ನೆಹರೂ ಶೋಕಿ ಜೀವನ, ಇಂದಿರಾ ಗಾಂಧಿ ಫಿರೋಜ್ ಗಾಂಧಿಯನ್ನು ಮದುವೆಯಾದಾಗ ಕಾಂಗ್ರೆಸ್‌ನಲ್ಲಿದ್ದ ಗಲಾಟೆ, ದೇಶದ ಸ್ವಾತಂತ್ರ್ಯಕ್ಕಾಗಿ ಮಹಾತ್ಮ ಗಾಂಧಿ ನಡೆಸಿದ ಹೋರಾಟ, ಕೆ. ವಿ. ಪುಟ್ಟಪ್ಪನವರು ರಾಮಾಯಣ ಬರೆಯುತ್ತಿರುವುದು, ರಂಗಭೂಮಿಯ ನಟರಾದ ಮಹಮದ್ ಪೀರ್, ಬಳ್ಳಾರಿ ರಾಘವ, ಗುಬ್ಬಿ ವೀರಣ್ಣ ಮತ್ತು ಖ್ಯಾತ ಗಾಯಕ ಕೆ.ಎಲ್. ಸೈಗಾಲ್ ಬಗ್ಗೆ ಮಾತನಾಡುತ್ತಿದ್ದರು. ಪ್ರತಿನಿತ್ಯ ಅದೇ ಮಾತು ಕೇಳಿಬರುತ್ತಿತ್ತು. ನಮ್ಮ ಅಂಗಡಿಯಲ್ಲಿ ಅವರು ನಮ್ಮನ್ನು ಏನೂ ಕೇಳದಿದ್ದುದರಿಂದ ಕಿಟ್ಟಪ್ಪಗೌಡರು ನಮ್ಮ ಮೇಲೆ ಚಾಡಿ ಹೇಳಲಿಲ್ಲವೇನೊ ಎಂದುಕೊಂಡೆವು.

ನಾನು ಮಾಧ್ಯಮಿಕ ಶಾಲೆ ಓದುವ ದಿನಗಳಲ್ಲಿ ನಮ್ಮೂರು ಮೇಗರಹಳ್ಳಿಯ ಮೇಲುಪೇಟೆಯಲ್ಲಿ ಸಮವಯಸ್ಕ ಹುಡುಗರು ನಾವು ಹದಿನೈದು ಇಪ್ಪತ್ತು ಜನ ಇದ್ದೆವು. ಶಾಲೆ ಬಿಟ್ಟ ತಕ್ಷಣ ಪ್ರತಿನಿತ್ಯ ಮೇಲುಪೇಟೆಯ ಮೈದಾನದಲ್ಲಿ ಎಲ್ಲರೂ ಸೇರಿ ಜೈಲಾಟ, ಎಲೆತರುವ ಆಟ, ಕಬಡ್ಡಿ ಆಟ, ಗುಡಗುಡೇ ಪಕ್ಷಿ ಆಟ, ಖೊಖ್ಖೋ ಆಟವನ್ನು ಆಡುತ್ತಿದ್ದೆವು. ಜೈಲಾಟವನ್ನು ಉಳಿದು ಮಿಕ್ಕೆಲ್ಲ ಆಟಗಳಲ್ಲೂ ನನಗೆ ಸೋಲಾಗುತ್ತಿದ್ದುದೇ ಜಾಸ್ತಿ. ಜೈಲಾಟದಲ್ಲಿ ಚಿಕ್ಕವನಾದ ನನ್ನನ್ನು ಓಡಿ ಹಿಡಿದು ಜೈಲಿಗೆ ಕಳಿಸುವುದು ವಿರೋಧಿ ಗುಂಪಿಗೆ ಕಷ್ಟವಾಗುತ್ತಿತ್ತು. ನಮ್ಮ ಗುಂಪಿನವರು ವಿರೋಧಿ ಗುಂಪಿಗೆ ಸೆರೆ ಸಿಕ್ಕು ಜೈಲಿನಲ್ಲಿ ಕೊಳೆಯುತ್ತಿರುವವರನ್ನು ನಾನು ವಿರೋಧಿಗಳ ಕೈಗೆ ಸಿಗದೆ ಓಡಿಹೋಗಿ ಗೆಳೆಯರನ್ನು ಮುಟ್ಟಿ ಬಿಡಿಸಿಕೊಂಡು ಬರುತ್ತಿದ್ದೆ. ಅದರಿಂದಾಗಿ ನಾನು ಬಹಳ ಪ್ರಶಂಸೆಗೊಳಗಾಗುತ್ತಿದ್ದೆ. ಆ ದಿನ ನಾನು ಬಹಳ ಸಂಭ್ರಮದಲ್ಲಿರುತ್ತಿದ್ದೆ. ಅಷ್ಟಾದರೂ ಮರುದಿನ ಜೈಲಾಟಕ್ಕೆ ಎರಡು ಗುಂಪು ಮಾಡಿಕೊಂಡು ಆಡುವಾಗ ನನ್ನನ್ನು ಯಾವ ಗುಂಪಿಗೆ ಸೇರಿಸಿಕೊಳ್ಳುವುದೆಂದು ನಮಗೆ ಅವನು ಬೇಡ ಅನ್ನುವಂತೆ ನೀವು ಅವನನ್ನು ಸೇರಿಸಿಕೊಳ್ಳಿ ಅನ್ನುವಂತೆ ಹಿರಿಯ ಹುಡುಗರು ಮಾತನಾಡಿಕೊಳ್ಳುತ್ತಿದ್ದರು. ನಿನ್ನೆ ನಿಮಗೆ ನಾನು ಬೇಕಿತ್ತೇ ? ಇಂದು ಬೇಡವಾದೆನೇ ? ಎಂದು ಹಿರಿಯ ಹುಡುಗರನ್ನು ಕಣ್ಣಿನಲ್ಲಿ ನೀರು ತುಂಬಿಕೊಂಡು ನೋಡುತ್ತಿದ್ದೆ. ಅಂತು ಕೊನೆಗೆ ಹನ್ನೊಂದನೆ ಆಟಗಾರನಾಗಿ ಯಾವುದೋ ಒಂದು ಗುಂಪು ಸೇರಿಸಿಕೊಂಡು ನನ್ನ ಸಂತೋಷಕ್ಕೆ ಕಾರಣವಾಗುತ್ತಿದ್ದರು.

ಹೀಗೆ ನಮ್ಮ ಆಟಗಳು ನಡೆಯುತ್ತಿರುವಾಗ್ಗ ಒಂದು ದಿನ ಯಾರೋ ಒಬ್ಬ ಗೆಳೆಯ ಸಿಗರೇಟು ಸೇದುವ ಸಲಹೆ ಕೊಟ್ಟ. ದೊಡ್ಡವರು ಅಂಗಡಿ ಹೋಟೆಲುಗಳಲ್ಲಿ ನಾನಾ ಭಂಗಿಯಲ್ಲಿ ಸಿಗರೇಟು ಬೀಡಿ ಸೇದುತ್ತ ಹರಟೆ ಹೊಡೆಯುವುದನ್ನು ನೋಡುತ್ತಿದ್ದೆವು. ಕೆಲವು ಮಂದಿ ದನ ಕಾಯುವ ಹುಡುಗರು ಗುಟ್ಟಾಗಿ ಬೀಡಿ ಸೇದುವುದನ್ನೂ ನೋಡಿದ್ದೆವು. ಬೀಡಿ ಸಿಗರೇಟು ಸೇದುವುದರಲ್ಲಿ ಬಹಳ ಮಜವಿರುತ್ತದೆ ಎಂದು ಅವರು ಹೇಳುತ್ತಿದ್ದರು. ಹಾಗಿದ್ದರೆ ಆ ಮಜವನ್ನು ನಾವು ಅನುಭವಿಸುವುದು ಬೇಡವೇ ಎಂದೆನಿಸಿತು ನಮಗೆ. ಗೆಳೆಯನ ಸಲಹೆಗೆ ಯಾರೂ ವಿರೋಧಿಸಲಿಲ್ಲ. ಎಲ್ಲರೂ ಒಕ್ಕೊರಲಿನಿಂದ ಒಪ್ಪಿಗೆ ಕೊಟ್ಟರು. ಬೀಡಿ ಸಿಗರೇಟು ಸೇದುವುದರಿಂದ ನಾವು ದೊಡ್ಡವರಾಗಿಬಿಡುತ್ತೇವೆ, ಅದರಿಂದ ಜನ ನಮಗೆ ಬಹಳ ಗೌರವ ಕೊಡುತ್ತಾರೆಂಬುದು ನಮ್ಮ ಅನಿಸಿಕೆ. ಬೀಡಿ ಸಿಗರೇಟು ಪುಕ್ಕಟೆಯಾಗಿ ಒದಗಿಸಲು ನನ್ನ ಹತ್ತಿರ ಸಂಬಂಧಿಗಳು ಅಣ್ಣತಮ್ಮಂದಿರೂ ಆದ ಸುಬ್ಬು ಕೃಷ್ಣಮೂರ್ತಿ ಒಪ್ಪಿಕೊಂಡರು. ಅವರ ತಂದೆ ದೊಡ್ಡ ಜೀನಸಿ ಅಂಗಡಿಯನ್ನು ನಮ್ಮ ಮನೆಯೆದುರಿಗೇ ಇಟ್ಟಿದ್ದರು. ಸಿಗರೇಟು ಸೇದಿದ ಮೇಲೆ ಬಾಯಿ ವಾಸನೆ ಬರದಂತೆ ತುಮಕೂರು ಅಚ್ಚು ಬೆಲ್ಲವನ್ನೂ ಕೊಡುವುದಾಗಿ ಅಣ್ಣತಮ್ಮಂದಿರು ಭರವಸೆ ಕೊಟ್ಟರು. ಕಾಸು ಖರ್ಚಿಲ್ಲದೆ ಮಜಾ ಉಡಾಯಿಸುವ ನಮ್ಮ ಪ್ಲಾನು ಯಶಸ್ವಿಯಾಯಿತು. ರಜಾ ದಿನಗಳಲ್ಲಿ ಮಾತ್ರ ವಿಶೇಷ ಯೋಜನೆ ಜಾರಿಗೆ ತರಬೇಕೆಂದು ತೀರ್ಮಾನವಾಯಿತು. ನಾನು ಅವರ ಮನೆಗೆ ಹೋಗಿಬಂದು ಮಾಡುತ್ತಿದ್ದುದರಿಂದ ನಾನೇ ಸಿಗರೇಟು ಬೆಲ್ಲವನ್ನು ತರಬೇಕೆಂದು ಅಣ್ಣತಮ್ಮಂದಿರು ಆಮೇಲೆ ಬಂದು ನಮ್ಮನ್ನು ಸೇರಿಕೊಳ್ಳಬೇಕೆಂದು ಅವರು ಹೇಳಿದರು. ನನಗೆ ಅಪೂರ್ವಕ್ಕೆ ಸಿಕ್ಕ ನಾಯಕ ಪಟ್ಟಕ್ಕೆ ನಾನು ಬಹಳ ಖುಷಿಯಿಂದ ಒಪ್ಪಿಕೊಂಡೆ.

ಮೊದಮೊದಲು ಸಿಗರೇಟು ಸೇದುವ ತಾಣವಾಗಿ ತುಂಗಾನದಿ ಹರಿಯುವ ಲಕ್ಕಿಬೀಳು ಎಂಬ ಪ್ರದೇಶವನ್ನು ಆಯ್ಕೆ ಮಾಡಿಕೊಂಡೆವು. ಲಕ್ಕೀಬೀಳು ಊರಿಂದ ನಾಲ್ಕೈದು ಕಿ.ಮೀಟರ್ ದೂರವಿತ್ತು. ಅದು ನಿರ್ಜನ ಪ್ರದೇಶವಾಗಿದ್ದು, ತುಂಗಾನದಿ ತಿಳಿನೀರಿನಿಂದ ಸದ್ದುಗದ್ದಲವಿಲ್ಲದೆ ಸರಾಗವಾಗಿ ಹರಿದುಹೋಗುತ್ತದೆ. ಹೊಳೆ ದಾಟಿದರೆ ದಟ್ಟಕಾಡು. ಹೊಳೆಯಲ್ಲಿ ಈಜುವ ನೆಪ ಮಾಡಿಕೊಂಡು ಅತ್ತ ಹೋಗಹತ್ತಿದೆವು. ಕೆಲದಿನಗಳಾದ ಮೇಲೆ ಸಿಗರೇಟು ಸೇದಲಿಕ್ಕೆ ಅಷ್ಟುದೂರ ಹೋಗಬೇಕೆ ? ಊರಿನ ಸಮೀಪದ ಕಾಡಿನಲ್ಲಿ ಸೇದಿದರೆ ಆಗದೆ ? ಎಂಬ ಪ್ರಶ್ನೆ ಬಂದು ಅರಣ್ಯಾಧಿಕಾರಿ ಕಚೇರಿ ಊರ ಹೊರಗಿದ್ದು ಪೇಟೆಗೆ ಬಹಳ ದೂರವಿತ್ತು. ಈಗ ಪೇಟೆ ಅರಣ್ಯಾಧಿಕಾರಿ ಕಚೇರಿಯನ್ನು ಕಬಳಿಸಿ ಅದರಾಚೆಗೂ ವಿಸ್ತರಿಸಿದೆ. ಅರಣ್ಯಾಧಿಕಾರಿ ಕಚೇರಿ ಹಿಂದೆ ಸಿಗರೇಟು ಸೇದಲು ರಹಸ್ಯವಾದ ಸ್ಥಳ ಯಾವುದಿದೆ ಎಂದು ಸ್ಥಳ ಪರಿಶೀಲನೆಯನ್ನು ಮಾಡಿದೆವು. ಕಚೇರಿಯ ಹಿಂದಿನ ಕಾಡಿನಲ್ಲಿ ಒಂದು ದೊಡ್ಡ ಮರವಿತ್ತು. ಮರಕ್ಕೆ ಕೊಳೆಬಳ್ಳಿಗಳು ಹಬ್ಬಿಕೊಂಡು ಮರದ ಕೊಂಬೆರೆಂಬೆಗಳು ಕಾಣದಷ್ಟು ಒಳಗೆ ಕತ್ತಲೆ ಇದ್ದಿತು. ಮಳೆಗಾದಲ್ಲಿ ಕೂಳೆಹಣ್ಣುಗಳು ಬಿಟ್ಟು ರಾತ್ರಿ ಹೊತ್ತಿನಲ್ಲಿ ಕಬ್ಬೆಕ್ಕುಗಳು ಹಣ್ಣು ತಿನ್ನಲು ಬರುತ್ತಿದ್ದವು. ಊರಿನ ಹಿರಿಯರು ಕಬ್ಬೆಕ್ಕಿನ ಶಿಕಾರಿಯನ್ನು ಮಾಡುತ್ತಿದ್ದರು. ಸಿಗರೇಟು ಸೇದಲು ಅದು ಹತ್ತಿರದ ರಹಸ್ಯಸ್ಥಳವಾಗಿತ್ತು. ಕಸಬುದಾರ ಕಳ್ಳನು ರಾಜಾರೋಷವಾಗಿ ಕಳ್ಳತನ ಮಾಡಿ ಸಿಕ್ಕಿಹಾಕಿಕೊಳ್ಳುವಂತೆ ನಾವು ಸಿಕ್ಕಿಹಾಕಿಕೊಳ್ಳುವ ಕಾಲ

ಬಂದಿತ್ತು. ಹೊಸ ಸ್ಥಳದ ಬಗ್ಗೆ ನಮ್ಮಲ್ಲಿ ಭಿನ್ನಾಭಿಪ್ರಾಯವೇ ಬರಲಿಲ್ಲ. ರಹಸ್ಯ ತಾಣ ಹುಡುಕಿದವನಿಗೆ ವಾಸ್ಕೋಡಿಗಾಮಾನಿಗೆ ಸಿಕ್ಕ ಗೌರವ ಸಿಕ್ಕಿತು.

ಭಾನುವಾರ ರಜಾದಿನದಂದು 'ಪಾಸಿಂಗ್ ಶೋ ಬರ್ಕಲಿ' ಸಿಗರೇಟುಗಳು, 'ತುಮಕೂರು ಅಚ್ಚುಬೆಲ್ಲ ಯಥೇಚ್ಛವಾಗಿ ಖರ್ಚಾಗತೊಡಗಿದವು. ಧಾರಾಳವಾಗಿ ಕೊಡುವವರಿದ್ದರೆ ಧಾರಾಳವಾಗಿ ಖರ್ಚು ಮಾಡಲು ನಮಗೇನು ಧಾಡಿ ? ಹೀಗೆ ಸಿಗರೇಟು ಸೇದುವ ನಮ್ಮ ಕಾಯಕ ಸುಗಮವಾಗಿ ನಡೆಯುವಾಗ ಒಂದು ದಿನ ನಾವು ಮರದ ಕೊಂಬೆಗಳ ಮೇಲೆ ಕೂತು ಒಂದಾದ ಮೇಲೊಂದು ಸಿಗರೇಟು ಸೇದುತ್ತಾ ಮಜ ಅನುಭವಿಸುವಾಗ ಒಣ ಎಲೆಗಳ ಮೇಲೆ ಯಾರೋ ನಡೆದು ಬರುವ ಸದ್ದಾಯಿತು. ನಾನು ಚಿಕ್ಕಂದಿನಿಂದ ಸ್ವಲ್ಪ ಸೂಕ್ಷ್ಮ ವ್ಯಕ್ತಿ. ಎಲ್ಲರೂ ಅಮಲಿನಲ್ಲಿ ತೇಲುತ್ತಿರುವಾಗ ನಾನು ಸದ್ದು ಬಂದ ಕಡೆ ತಿರುಗಿನೋಡಿದೆ. ನಮ್ಮೂರಿನವರೇ ಆದ ನಮ್ಮ ಹೈಸ್ಕೂಲು ಮೇಷ್ಟು ಕಿಟ್ಟಪ್ಪಗೌಡರು ಬರುತ್ತಿದ್ದರು. ಅವರು ನಮ್ಮ ಮನೆಗೂ ಸುಬ್ಬು-ಕೃಷ್ಣಮೂರ್ತಿ ಮನೆಗೂ ಬಹಳ ಆಪ್ತರು. ಅವರು ಸ್ವಾತಂತ್ರ್ಯಕ್ಕಾಗಿ ಹೋರಾಡಿ ಜೈಲು ಶಿಕ್ಷೆ ಅನುಭವಿಸಿ ನಮ್ಮೂರಿನಲ್ಲಿ ಪ್ರಖ್ಯಾತರಾಗಿದ್ದರು. ಅವರಿಗೆ ನನ್ನ ಮೇಲೆ ತುಂಬಾ ಪ್ರೀತಿ ವಿಶ್ವಾಸ ಇತ್ತು. ಮನೆಯಲ್ಲಿ ನನ್ನನ್ನು ಬಾಬು ಎಂದು ಕರೆಯುತ್ತಿದ್ದುದರಿಂದ ಅವರು ನನ್ನನ್ನು ಬಾಬುರಾವ್ ಪೆಂಡಾರ್‌ಕರ್ ಎಂದು ಕರೆಯುತ್ತಿದ್ದರು. ಅಂಥವರ ಕೈಗೆ ಸಿಗರೇಟು ಸೇದಿ ಸಿಕ್ಕಿಹಾಕಿಕೊಳ್ಳುತ್ತಿದ್ದೇನಲ್ಲ ಎಂದು ಗೆಳೆಯರಿಗೆ ಹೇಳದೆ ಸಿಗರೇಟು ಎಸೆದು ಕೊಂಬೆಯಿಂದ ದಿಢೀರನೆ ಧುಮುಕಿ ಅರಣ್ಯಾಧಿಕಾರಿ ಕಚೇರಿಯ ಸರಹದ್ದಿನ ಚರಂಡಿಯಲ್ಲಿ ಎದ್ದುಬಿದ್ದು ಓಡಿದೆ. ಗೆಳೆಯರು ಏನೋ ಅಪಾಯ ಒದಗಿ ಬಂದಿರಬೇಕೆಂದು ''ಏನೋ ?'' ಎಂದು ಪಿಸುಮಾತಿನಲ್ಲಿ ಕೇಳಿ ಏನೊಂದೂ ತಿಳಿಯದೆ ದಿಕ್ಕಾಪಾಲಾಗಿ ಓಡಿಹೋದರು. ಓಡಿಹೋದವರಲ್ಲಿ ಕೆಲವರು ಗೌಡರೆದುರಿಗೆ ಹೋಗಿ ಸಿಕ್ಕಿಹಾಕಿಕೊಂಡರು. ಗೌಡರು ''ಓಹೋ ಈ ಕೆಲಸ ಬೇರೆ ಮಾಡತೀರಾ ನೀವು ? ನಿಮ್ಮ ತಂದೆಗೆ ಹೇಳತೀನಿ'' ಎಂದು ಹೇಳಿಹೋದರು. ನಡೆದದ್ದೇನೆಂದರೆ ಗೌಡರು ದಾರಿಯಲ್ಲಿ ಬರುವಾಗ ಸಿಗರೇಟಿನ ಹೊಗೆ ಮರದ ಎಲೆಗಳ ಸಂದಿನಿಂದ ನಿಧಾನವಾಗಿ ಹರಡಿಕೊಂಡು ಹೊರಹೋಗುವುದು ಅವರಿಗೆ ಕಂಡಿದ್ದಿತು. ಬೆಂಕಿ ಇಲ್ಲದೆ ಹೊಗೆ ಹೇಗೆ ಬರುತ್ತಿದೆ ಮರದಿಂದ, ಎಂದು ಗೌಡರು ವಿಸ್ಮಿತರಾಗಿ ಅತ್ತಕಡೆಗೆ ಬಂದಿದ್ದರು. ಗೌಡರ ಹಳ್ಳಿ ಊರಿಗೆ ಸಮೀಪವಿದ್ದುದರಿಂದ ಅವರು ಆ ದಾರಿಯಲ್ಲಿ ಬಂದಿದ್ದರು.




ಮಟಮಟ ಮಧ್ಯಾಹ್ನ ನಾವು ಮನೆಗೆ ಬಂದಾಗ ನಮ್ಮ ತಂದೆಯವರು ಜವಳಿ ಅಂಗಡಿಯಲ್ಲಿ ಕೂತು ಹರಟುತ್ತಿದ್ದರು. ಅವರು ನಮ್ಮನ್ನು ಗಮನಿಸಿದರೂ ಗಮನಿಸದಂತೆ ಇದ್ದರು. ಅವರು ಗೆಳೆಯರೊಂದಿಗೆ ಜವಹರಲಾಲ್ ನೆಹರೂ ಶೋಕಿ ಜೀವನ, ಇಂದಿರಾ ಗಾಂಧಿ ಫಿರೋಜ್ ಗಾಂಧಿಯನ್ನು ಮದುವೆಯಾದಾಗ ಕಾಂಗ್ರೆಸ್‌ನಲ್ಲೆದ್ದ ಗಲಾಟೆ, ದೇಶದ ಸ್ವಾತಂತ್ರ್ಯಕ್ಕಾಗಿ ಮಹಾತ್ಮ ಗಾಂಧಿ ನಡೆಸಿದ ಹೋರಾಟ, ಕೆ. ವಿ. ಪುಟ್ಟಪ್ಪನವರು ರಾಮಾಯಣ ಬರೆಯುತ್ತಿರುವುದು, ರಂಗಭೂಮಿಯ ನಟರಾದ ಮಹಮದ್ ಪೀರ್, ಬಳ್ಳಾರಿ ರಾಘವ, ಗುಬ್ಬಿ ವೀರಣ್ಣ ಮತ್ತು ಖ್ಯಾತ ಗಾಯಕ ಕೆ.ಎಲ್. ಸೈಗಾಲ್ ಬಗ್ಗೆ ಮಾತನಾಡುತ್ತಿದ್ದರು. ಪ್ರತಿನಿತ್ಯ ಅದೇ ಮಾತು ಕೇಳಿಬರುತ್ತಿತ್ತು. ನಮ್ಮ ಅಂಗಡಿಯಲ್ಲಿ ಅವರು ನಮ್ಮನ್ನು ಏನೂ ಕೇಳದಿದ್ದುದರಿಂದ ಕಿಟ್ಟಪ್ಪಗೌಡರು ನಮ್ಮ ಮೇಲೆ ಚಾಡಿ ಹೇಳಲಿಲ್ಲವೇನೂ ಎಂದುಕೊಂಡೆವು. ಸಂಜೆ ಮೈದಾನದಲ್ಲಿ ಆಟಕ್ಕೆ ಸೇರಿದಾಗ ಸುಬ್ಬು-ಕೃಷ್ಣಮೂರ್ತಿಯನ್ನು ಕೇಳಲಾಗಿ ಅವರಿಗೂ ಅವರ ತಂದೆ ಏನೂ ಕೇಳಲಿಲ್ಲವೆಂದು ತಿಳಿಯಿತು. ಕಿಟ್ಟಪ್ಪಗೌಡರು ಮಹದುಪಕಾರ ಮಾಡಿದರೆಂದು ಅವರನ್ನು ಮನಸಾರೆ ಅಭಿನಂದಿಸಿದೆವು. ಆದರೆ ರಾತ್ರಿ ಅಂಗಡಿ ಬಾಗಿಲು ಹಾಕಿದ ಮೇಲೆ ನಮ್ಮ ತಂದೆಯವರು ನನ್ನನ್ನು ನಮ್ಮಣ್ಣನನ್ನು ಸರಿಯಾಗಿ ವಿಚಾರಿಸಿಕೊಂಡರು. ಚಾಟಿಯಂತಹ ಮುರುವಿನ ಬರಲಿನಲ್ಲಿ ಕೈಕಾಲಿನ ನೆತ್ತರು ಕಿತ್ತುಬರುವಂತೆ ಇನ್ನು ಸಿಗರೇಟು ಸೇದುತ್ತೀರಾ ? ಎಂದು ಕೇಳಿ ಕೇಳಿ ಬಾರಿಸಿದರು. ಮರುದಿನ ಅಂಗಡಿಯಿಂದ ಸಿಗರೇಟು ಬೆಲ್ಲ ಕದ್ದು ಮಜಾ ಉಡಾಯಿಸಲು ಕೊಟ್ಟವರಿಗೂ ಹೊನ್ನಾಳಿ ಹೊಡೆತ ಬಿತ್ತೆಂದು ತಿಳಿಯಿತು. ಅಲ್ಲಿಗೆ ನಮ್ಮ ಮಜಾಉಡಾಯಿಸುವ ಕಾರ್ಯಕ್ರಮ ನಿಂತುಹೋಯಿತು.

**ಬಿಳುಮನೆ ರಾಮದಾಸ್**
ನಂ. ೧೪೦೧, ೨೨ನೇ 'ಬಿ' ಅಡ್ಡರಸ್ತೆ, ೧೧ನೇ ಮುಖ್ಯರಸ್ತೆ, ಜಯನಗರ ೪ನೇ 'ಟಿ' ಬ್ಲಾಕ್
ಬೆಂಗಳೂರು - ೪೧

## ಸಾದರ ಸ್ವೀಕಾರ

**ಭಾರತ ಸಂವಿಧಾನ ಶಿಲ್ಪಿ ಡಾ|| ಬಿ. ಆರ್. ಅಂಬೇಡ್ಕರ್**
*ಸಿ. ಎಚ್. ಜಾಕೋಬ್ ಲೋಬೊ*
*ಪುಟ : ೧೨೦* *ಬೆಲೆ : ರೂ. ೧೦೦*
ಬ್ಯಾಲದಕೆರೆ ಪ್ರಕಾಶನ, ಬ್ಯಾಲದಕೆರೆ, ಬೆಳ್ಳೂರು ಹೋಬಳಿ, ಜಿ. ನಾಗತಿಹಳ್ಳಿ ಅಂಚೆ, ನಾಗಮಂಗಲ ತಾಲ್ಲೂಕು, ಮಂಡ್ಯ ಜಿಲ್ಲೆ

**ಅಧರಕ್ಕೆ ಕಹಿ ಉದರಕ್ಕೆ ಸಿಹಿ** (ಸಂದರ್ಶನಗಳ ಸಂಕಲನ)
*ವಿಶ್ವಾರಾಧ್ಯ ಸತ್ಯಂಪೇಟೆ*
*ಪುಟ : ೯೬* *ಬೆಲೆ : ರೂ. ೭೫*
ಬಸವಮಾರ್ಗ ಪ್ರಕಾಶನ, ಬಸವಮಾರ್ಗ ರಸ್ತೆ , ಶ್ರೀ ಚ. ಬ. ಕಾಲೋನಿ, ಶಹಾಪುರ, ಕಲಬುರ್ಗಿ ಜಿಲ್ಲೆ

**ಎಸ್. ವಿ. ರಂಗಣ್ಣ** *ಡಾ|| ಸಿ. ಪಿ. ಕೃಷ್ಣಕುಮಾರ್*
*ಪುಟ : ೧೦೪* *ಬೆಲೆ : ರೂ. ೬೦*

**ಬಿ. ಸಿ. ರಾಮಚಂದ್ರ ಶರ್ಮ** *ಲಿಂಗದೇವರು ಹಳೆಮನೆ*
*ಪುಟ : ೧೧೨* *ಬೆಲೆ : ರೂ. ೬೦*

**ಗೊರೂರು ರಾಮಸ್ವಾಮಿ ಅಯ್ಯಂಗಾರ್**
*ಡಾ|| ಪ್ರಧಾನ್ ಗುರುದತ್ತ*
*ಪುಟ : ೧೧೨* *ಬೆಲೆ : ರೂ. ೬೦*

**ವಿ. ಸೀತಾರಾಮಯ್ಯ** *ಪ್ರೊ|| ಎಂ. ರಾಮಚಂದ್ರ*
*ಪುಟ : ೧೧೬* *ಬೆಲೆ : ರೂ. ೬೦*

**ಕೀರ್ತಿನಾಥ ಕುರ್ತಕೋಟಿ** *ಡಾ|| ಕೃಷ್ಣಮೂರ್ತಿ ಚಂದರ್*
*ಪುಟ : ೧೦೪* *ಬೆಲೆ : ರೂ. ೬೦*

**ಎಲ್. ಎಸ್. ಶೇಷಗಿರಿ ರಾವ್** *ಡಾ|| ಪಿ. ವಿ. ನಾರಾಯಣ*
*ಪುಟ : ೧೧೬* *ಬೆಲೆ : ರೂ. ೬೦*

ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತ ಕನ್ನಡ ಲೇಖಕರ ಬದುಕು-ಬರೆಹ ಕುರಿತ ಮೇಲಿನ ಆರು ಕೃತಿಗಳ ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**ನೀಲಿ** (ಹನಿಗವಿತೆಗಳು) *ಹರ್ಷಾದ್ ವರ್ಕಾಡಿ*
*ಪುಟ : ೬೪* *ಬೆಲೆ : ರೂ. ೫೦*
**ಹೇಮಾಂಶು ಪ್ರಕಾಶನ**, ದೇರೆಬೈಲು, ಮಂಗಳೂರು-೬

**ಕಾರ್ತೀಕ** (ಕವನ ಸಂಕಲನ) *ಮಂಜುನಾಥ ಬಾಳೇಹಳ್ಳಿ*
*ಪುಟ : ೭೨* *ಬೆಲೆ : ರೂ. ೩೩*

**ಕನ್ನಡದ ಜ್ಞಾನ ಕಲಶಗಳು** (ಬಾನುಲಿ ರೂಪಕಗಳು)
*ಕೆ. ಎನ್. ಭಗವಾನ್*
*ಪುಟ : ೧೧೮* *ಬೆಲೆ : ರೂ. ೫೫*

**ಆಕಾಶಬುಟ್ಟಿ ಮತ್ತು ಏಣಿ** (ಕಥಾ ಸಂಕಲನ)
*ಕೆ. ಎನ್. ಭಗವಾನ್*
*ಪುಟ : ೧೪೪* *ಬೆಲೆ : ರೂ. ೭೦*

ಈ ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ಸುಮುಖ ಪ್ರಕಾಶನ**, ೧೭೪೩/೨೮, ೧ನೇ ಮಹಡಿ, ೧ನೇ ಮುಖ್ಯರಸ್ತೆ, ವಿದ್ಯಾರಣ್ಯನಗರ, ಮಾಗಡಿ ರಸ್ತೆ, ಟೋಲ್ ಗೇಟ್, ಬೆಂಗಳೂರು - ೫೬೦ ೦೨೩

**ಕಥಾನಾಯಕಿಯ ಕತೆ** (ಸಣ್ಣ ಕತೆಗಳು)
*ಸಂ : ಲೋಹಿತ ನಾಯ್ಕರ*
*ಪುಟ : ೧೪೮* *ಬೆಲೆ : ರೂ. ೯೦*
ಮನೋಹರ ಗ್ರಂಥ ಮಾಲಾ, ಲಕ್ಷ್ಮೀಭವನ, ಸುಭಾಸ ರಸ್ತೆ, ಧಾರವಾಡ - ೫೮೦ ೦೦೧

# ಸಂಪ್ರದಾಯಗಳನ್ನು ಉಳಿಸಿಕೊಳ್ಳಬೇಕೆ ?

**ಸಂ**ಪ್ರದಾಯಗಳು ಪರಂಪರಾಗತ ನಂಬಿಕೆಗಳು ಆಚರಣೆಗಳೆಲ್ಲವೂ ವೈಜ್ಞಾನಿಕ ವಲ್ಲ ಎಂಬ ವಾದವಿದೆ. ಎಲ್ಲ ವಸ್ತು ವಿಷಯಗಳನ್ನು ವೈಜ್ಞಾನಿಕವಾಗಿ, ವಿಚಾರ ಮಾಡಬೇಕು ಎಂಬುದು ವಿಚಾರವಾದಿಗಳ ವಾದ. ವೈಜ್ಞಾನಿಕ ದೃಷ್ಟಿಕೋನ ಮನುಷ್ಯನಲ್ಲಿ ತರ್ಕಬುದ್ಧಿಯನ್ನು ಬೆಳೆಸುತ್ತದೆ ನಿಜ. ಆದರೆ ಆಧುನಿಕ ವಿಜ್ಞಾನಿಗಳು ಪ್ರಯೋಗಗಳನ್ನು ನಡೆಸಲು, ರಾಕೆಟ್ ಹಾರಿಸಲೂ, ರಾಹುಕಾಲ, ಶುಭವಾರ, ನಕ್ಷತ್ರ ಹುಡುಕುತ್ತಾರೆಂಬುದನ್ನು ನೋಡಿದಾಗ, ನಮ್ಮ ವಿಚಾರಶಕ್ತಿ ವೈಜ್ಞಾನಿಕ ಮನೋಭಾವ ಎಷ್ಟು ಟೊಳ್ಳು ಎಂಬುದು ಗೊತ್ತಾಗುತ್ತದೆ. ವಿಚಾರವಾದದಿಂದ ನಮ್ಮ ಅರಿವನ್ನು ಹೆಚ್ಚಿಸಿಕೊಂಡು, ತರ್ಕಬದ್ಧವಾಗಿ ಚಿಂತಿಸಿ, ಮುನ್ನಡೆಯಬೇಕು. ಮೂಢನಂಬಿಕೆಗಳು, ಅವುಗಳನ್ನಾಧರಿಸಿದ ಆಚರಣೆಗಳು ತಪ್ಪು ಎಂಬ ವಿಚಾರವಾದಿಗಳ ಮಾತು ಅರಣ್ಯರೋದನವಾಗಿದೆ. ಎಲ್ಲ ಕಾಲ ದೇಶಗಳಲ್ಲಿಯೂ ವಿಚಾರವಂತರು ಅಲ್ಪಸಂಖ್ಯಾತರಾಗಿರುವುದು ಮತ್ತು ವಿಚಾರವಂತರ ಚಿಂತನೆಗಳಿಗೆ ಬಹುಪಾಲು ಜನಸಾಮಾನ್ಯರು ಬೆಂಬಲ ನೀಡದಿರುವುದು ಕಂಡುಬರುತ್ತದೆ. ವೈಜ್ಞಾನಿಕ ಸತ್ಯಗಳನ್ನು ಮಾತ್ರ ನಂಬಬೇಕೆಂಬ ಮಾತು ಕ್ಲೀಷೆಯಾಗಿ ಕಂಡುಬರುತ್ತಿದೆ. ನಾವು ಹೇಳುವ ಮಾತು, ಮಾಡುವ ಆಚರಣೆಗಳು ತರ್ಕಬದ್ಧವಾಗಿರಬೇಕು, ವಿಚಾರದ ಒರೆಗಲ್ಲಿಗೆ ಹಚ್ಚಿ ಜೀವಪರವಾಗಿರುವಂತೆ ನೋಡಿಕೊಳ್ಳಬೇಕು. ಜನಪರ ಕಾಳಜಿಗಳ, ಜೀವನ ರೀತಿಗಳ, ಹಿಂದಿರುವ ಮಾನವೀಯ ಮೌಲ್ಯ ಮುಖ್ಯವಾಗಬೇಕು. ಇತರರಿಗೆ ತೊಂದರೆ ಕೊಡದ ಆಚರಣೆಗಳನ್ನು ಹಳಿಯುವುದು ವಿಚಾರವಂತಿಕೆಯಾಗ ಲಾರದು. ಮನೆ ಮುಂದೆ ಕಸ ಗುಡಿಸಿ, ನೀರು ಹಾಕಿ, ರಂಗೋಲಿ ಬಿಡಿಸುವುದು ಪರಂಪರಾಗತವಾಗಿ ಬಂದ ರೂಢಿಯಾದರೂ ಅದು ಕಂದಾಚಾರವಲ್ಲ. ದೇವಾಲಯಗಳ ಶಿಲ್ಪಕಲೆ, ಸೌಂದರ್ಯ ನೋಡಲು ಹೋಗುವವರೆಲ್ಲರೂ ಆಸ್ತಿಕರಾಗಿರಬೇಕಾಗಿಲ್ಲ. ದೇವಾಲಯದೊಳಗೆ ಹೋಗದವರೆಲ್ಲರೂ ನಾಸ್ತಿಕರು ಎಂಬ ಮಾತೂ ಪೂರ್ಣ ಸತ್ಯವಲ್ಲ. ಇಂತಹ ಮನೋಭಾವದಿಂದಾಗಿ ನಮ್ಮ ಬಹುಪಾಲು ಆಚರಣೆಗಳನ್ನು ಮೂಢನಂಬಿಕೆಗಳು ಎಂದು ತಿರಸ್ಕರಿಸುವ ಅಪಾಯವೂ ಇದೆ. ಜೀವವಿರೋಧಿ ಪದ್ಧತಿಗಳನ್ನು ಆಚರಣೆಗಳನ್ನು ವಿರೋಧಿಸುವುದು ಎಲ್ಲ ವಿಚಾರವಂತರ ಕರ್ತವ್ಯವಾಗಬೇಕು. ಪ್ರಾಚೀನ ಸಂಪ್ರದಾಯಗಳು ಮತ್ತು ಆಚರಣೆಗಳ ಹಿನ್ನೆಲೆಯಲ್ಲಿಯೂ ಅರ್ಥಪೂರ್ಣ, ಜೀವಪರ ಕಾಳಜಿಗಳನ್ನು ಗುರುತಿಸುವ ವಿಚಾರವಂತಿಕೆ ಮೂಡಬೇಕಾಗಿದೆ.




ಜೀವವಿರೋಧಿ ನಂಬಿಕೆಗಳನ್ನು, ಆಚರಣೆಗಳನ್ನು ತಿರಸ್ಕರಿಸುವ, ವಿರೋಧಿಸುವ ಕಾರ್ಯ ಎಲ್ಲ ಕಾಲ ದೇಶಗಳಲ್ಲಿಯೂ ನಡೆಯುತ್ತಲೇ ಬಂದಿದೆ. ವಿಚಾರವಂತರು ಮಾರ್ಗದರ್ಶನ ಮಾಡುತ್ತಲೇ ಬಂದಿದ್ದಾರೆ. ಆದರೆ ಸಂಸ್ಕೃತಿ, ಪರಂಪರೆಯ ಹೆಸರಿನಲ್ಲಿ ಇಂದಿಗೂ ಜನ ಮೂಢನಂಬಿಕೆಗಳಿಂದ ಮುಕ್ತರಾಗಿಲ್ಲವೆಂಬ ಸತ್ಯವನ್ನು ಅರಿಯಬೇಕಾಗಿದೆ. ಸತಿಪದ್ಧತಿ, ಬಾಲ್ಯವಿವಾಹ, ಅಸ್ಪೃಶ್ಯತೆ ಮುಂತಾದವು ಜೀವವಿರೋಧಿ ಆಚರಣೆಗಳೆಂದು ತಿಳಿಸಲು ಯಾವ ವಿಚಾರವಂತರೂ ಬೇಕಾಗಿಲ್ಲ, ಬದಲಾಗಿ ಅವುಗಳು ಜೀವವಿರೋಧಿ ಆಚರಣೆಗಳೆಂದು ಪ್ರತಿಯೊಬ್ಬರೂ ನಿರಾಕರಿಸಬಹುದಾಗಿತ್ತು, ಆದರೆ ವಾಸ್ತವ ಸಂಗತಿ ಹಾಗಿದೆಯೇ ಎಂಬುದು ಪ್ರಶ್ನೆ? ಇಂದಿಗೂ ಸತಿಪದ್ಧತಿ, ಬಾಲ್ಯವಿವಾಹಗಳು ಜಾರಿಯಲ್ಲಿವೆ. ಅಸ್ಪೃಶ್ಯತೆಯಂತೂ ಜೀವಂತವಾಗಿ ಭಾರತೀಯರನ್ನು ಛಿದ್ರಛಿದ್ರಗೊಳಿಸುತ್ತಿದೆ.

ಪ್ರಾಪಂಚಿಕ ಸುಖ, ಭೋಗಲಾಲಸೆಗಳು ಕ್ಷಣಿಕ ಎಂಬುದನ್ನು ಅರಿತು ಪರಿಪಕ್ವ ಮನೋಭಾವ ಬೆಳೆಸಿಕೊಳ್ಳುವುದು ಒಳ್ಳೆಯದು. ಸ್ವಸಾಮರ್ಥ್ಯದಿಂದಲೋ, ಆಕಸ್ಮಿಕ ವಾಗಿಯೋ ದೊರೆತ ಹಣದ ಸದ್ವಿನಿಯೋಗವಾಗಬೇಕು, ಸಾಮಾಜಿಕ ಒಳಿತಿಗೆ ಬಳಕೆಯಾಗಬೇಕು ಎಂಬುದು ಶರಣರ ನಿಲುವು. ಅದಕ್ಕಾಗಿ ಶರಣರು ನೀಡಿದ್ದು ಕಾಯಕ ಮಾತ್ರವಲ್ಲ, ದಾಸೋಹದ ಪರಿಕಲ್ಪನೆಯನ್ನೂ ನೀಡಿದರು. ಅಪರಿಗ್ರಹವ್ರತ ಕೈಗೊಂಡರು. ಇಂದಿಗೆ, ನಾಳಿಂಗೆ ಎಂದು ಸಂಗ್ರಹಿಸುವುದನ್ನು ಅಲ್ಲಗಳೆದರು. ಸರಳ ಜೀವನ, ಉದಾತ್ತ ಚಿಂತನೆಗಳ ಮೂಲಕ ಇಹದ ಬದುಕನ್ನು ಸಾರ್ಥಕಪಡಿಸಿಕೊಂಡು ಮಾನವೀಯ ಮೌಲ್ಯಗಳನ್ನು ಎತ್ತಿಹಿಡಿಯಬೇಕೆಂದರು. ಅದರಂತೆ ಬಾಳಿ ತೋರಿದರು. ಕಾಣದ ಸ್ವರ್ಗಕ್ಕಾಗಿ ಹಂಬಲಿಸಿ, ಉಪವಾಸ, ಪೂಜೆ, ವ್ರತಗಳನ್ನು ಮಾಡಬೇಕಾಗಿಲ್ಲ. ಬದಲಾಗಿ ಪರರಿಗೆ ಉಪಕಾರಿಯಾಗಿ, ಸಾತ್ವಿಕ ಚಿಂತನೆಗಳ ಮೂಲಕ ನಾವಿರುವ ಭೂಮಿಯನ್ನೇ ಸ್ವರ್ಗವಾಗಿಸಿಕೊಳ್ಳಬಹುದು ಎಂಬುದು ಶರಣರ ನಿಲುವು. ಅಂತಹ ಪರಿಪಕ್ವ ಮನೋಭಾವ ನಮ್ಮೆಲ್ಲರದಾಗಲಿ.

ನಮ್ಮ ಆಚರಣೆಗಳು ಇತರರ ನಂಬಿಕೆಗಳನ್ನು ಅಲ್ಲಗಳೆಯುವಂತಿರಬಾರದು. ಇತರ ಧರ್ಮಗಳನ್ನು ಹೀಗಳೆಯುವವರು ತಮ್ಮ ಧರ್ಮಕ್ಕೆ ಒಳ್ಳೆಯದನ್ನು ಮಾಡಲಾರರು. ಇತರ ಮತಧರ್ಮಗಳೂ ಸಹ ನಮ್ಮ ಧರ್ಮದಷ್ಟೇ ಗೌರವ ಹೊಂದಲು ಅರ್ಹವಾದವು ಎಂಬ ಸಹಿಷ್ಣುತೆಯನ್ನು ಹೊಂದಿರಬೇಕು. ಮನುಷ್ಯ ಹೆಚ್ಚು ಮಾನವೀಯ ಮೌಲ್ಯಗಳಿಂದ ಬದುಕಲು ಅವಕಾಶ ನೀಡುವುದು ಧರ್ಮ. ಆಚಾರ್ಯಪರಂಪರೆಯ ಜಗದ್ಗುರುಗಳೂ ಇಂಥ ಆದರ್ಶ ಗಳನ್ನು ಹೇಳಿದರೂ, ಮಠಗಳ ಒಳಗೆ ಉಳಿದಾಗ ಲಾಂಛನಗಳ ಬಂಧನಕ್ಕೆ ಒಳಗಾಗುತ್ತಾರೆ. ತಮ್ಮ ಆಚರಣೆಗಳು ಮತ್ತು ತಾವು ಮಾತ್ರ ಪವಿತ್ರರು ಎಂದುಕೊಂಡಾಗ ಆಗುವ ಅಪಾಯದ ಅರಿವು ಇಲ್ಲದವರಂತೆ ವರ್ತಿಸುತ್ತಾರೆ. ಇನ್ನಾದರೂ ನಮ್ಮ ಆಚಾರ್ಯಪರಂಪರೆ ಗುರುಗಳು, ಎತ್ತರದ ಸಿಂಹಾಸನ ತೊರೆದು ಸರ್ವಸಮಾನತೆಯ ಆಸನದಲ್ಲಿ ಕುಳಿತು ಸಮಾಜದ ಸರ್ವರ ಏಳ್ಗೆಯತ್ತ, ಸಮಾಜದ ಹಿತಕ್ಕೆ ಪೂರಕವಾದ ಕಾರ್ಯಗಳನ್ನು ಕೈಗೆತ್ತಿಕೊಂಡು, ಬಡವರ, ದೀನದಲಿತರ ಹತ್ತಿರ ಬರಬೇಕಾಗಿದೆ. ಪರಂಪರೆ ಪ್ರಾಚೀನತೆಯ ಗೋಜಲಿನಿಂದ ಹೊರಬಂದು ಸಮಕಾಲೀನ ಭಕ್ತರಿಗೆ ಮಾರ್ಗದರ್ಶನ ಮಾಡಬೇಕಾಗಿದೆ. ವೈಭವ ಆಡಂಬರಗಳ ಪೂಜೆ, ಅಡ್ಡಪಲ್ಲಕ್ಕಿ ಮೆರವಣಿಗೆ ನಿಲ್ಲಿಸಿ ಜನಸಾಮಾನ್ಯರ ಬಳಿಗೆ ಬರಬೇಕಾಗಿದೆ. ಅದರಲ್ಲಿಯೇ ಸಮಾಜದ ಹಿತವಿದೆ.

ಮನುಷ್ಯನ ಅರಿವನ್ನು ಹೆಚ್ಚಿಸುವುದು ವಿದ್ಯೆ. ಅಜ್ಞಾನವನ್ನು ದೂರಮಾಡುವ ವಿದ್ಯೆ ಕಲಿಸುವ ಗುರು ಮೊದಲು ತಾನು ಜ್ಞಾನಿಯಾಗಿರಬೇಕು. ಸ್ವತಃ ಜ್ಞಾನಿಯಾದ ಗುರು ಮಾತ್ರ ಶಿಷ್ಯನನ್ನು ಸರಿದಾರಿಯಲ್ಲಿ ಮುನ್ನಡೆಸುತ್ತಾನೆ. ಸುಜ್ಞಾನಿಯಾದ ಗುರು ವಾಸ್ತವ ಸಂಗತಿಗಳ ಕುರಿತು ವಿಚಾರವಂತಿಕೆ, ವೈಜ್ಞಾನಿಕ ಮನೋಭಾವ ಹೊಂದಿರುತ್ತಾನೆ. ನಮ್ಮ ಸಂಪ್ರದಾಯ, ಪರಂಪರೆ, ಧರ್ಮ, ಸಂಸ್ಕೃತಿ ಕುರಿತು ಅತಿಯಾದ ವ್ಯಾಮೋಹ ಹೊಂದಿರಬಾರದು. ಬದಲಾಗಿ ವಾಸ್ತವಿಕ ಜ್ಞಾನವನ್ನು ಹೊಂದಿ ಅದರಂತೆ ಆಚರಿಸಬೇಕು. ವಿಜ್ಞಾನದ, ತಂತ್ರಜ್ಞಾನದ ಬಳಕೆಯಿಂದ ತೃಪ್ತಿಯ ಜೀವನ ನಡೆಸಬೇಕು. ಜಾಗತೀಕರಣ, ಉದಾರೀಕರಣ ಮತ್ತು ಮಾಹಿತಿ ತಂತ್ರಜ್ಞಾನಗಳ ಹಿಂದೆ ನಾಗಾಲೋಟದಿಂದ ಹೊರಟಿರುವ ನಮ್ಮ ಯುವಜನಾಂಗ, ಡಾಲರ್, ಸಂಪತ್ತು ಗಳಿಸುವುದೇ ಜೀವನದ ಪರಮಗುರಿ ಎಂದು ತಿಳಿದಿರುವುದು ವಿಪರ್ಯಾಸ. ಜೀವನ ನಿರ್ವಹಣೆಗೆ ಹಣ ಬೇಕು ಎಂಬುದು ವಾಸ್ತವ, ಆದರೆ ಎಷ್ಟು ಹಣ ಬೇಕು ? ಎಂಬುದು ಅವರವರ ಮಾನಸಿಕ ಸ್ಥಿತಿ ಮತ್ತು ದೊರಕುವ ಸವಲತ್ತುಗಳನ್ನು ಅವಲಂಬಿಸಿದೆ. ಕೊಳ್ಳುಬಾಕ ನೀತಿಗಳು, ಸಂಗ್ರಹ ಪ್ರವೃತ್ತಿಗಳು ಮನುಷ್ಯನನ್ನು ದುರಾಸೆಯ ಅಂಚಿಗೆ ತಳ್ಳುತ್ತವೆ. ಬೇಕು, ಇನ್ನೂ ಬೇಕು, ಮತ್ತಷ್ಟು ಬೇಕು, ಎನ್ನುವವನು ಬಡವ; ಸಾಕು, ಇರುವಷ್ಟು ಸಾಕು, ಎಂದು ದುಡಿಮೆಗೆ ತಕ್ಕ ಆದಾಯದಲ್ಲಿ ಸಂತೃಪ್ತಿಯ ಜೀವನ ನಡೆಸುವವನು ನಿಜವಾದ ಶ್ರೀಮಂತ ಎನ್ನಬಹುದು. ಜಗತ್ತಿನಲ್ಲಿರುವ ಸಿರಿವಂತರು ಮಾತ್ರ ಸಂತೃಪ್ತಿಯ ಜೀವನ ನಡೆಸುತ್ತಿದ್ದಾರೆಂಬ ಭ್ರಮೆಯಲ್ಲಿಯೇ ಬದುಕಿರುವ ಮನುಷ್ಯನ ಆಸೆಗೆ ಮಿತಿಯೇ ಇಲ್ಲ. ಇರುವುದರಲ್ಲಿ, ಇರುವಷ್ಟರಲ್ಲಿ ಸಂತೃಪ್ತಿಯ ಬದುಕು ನಡೆಸುತ್ತಾ ಉನ್ನತ ಚಿಂತನೆಗಳ ಜೊತೆಗೆ ಮಾನವೀಯ ಅನುಕಂಪ ಹೊಂದಿರುವ ವ್ಯಕ್ತಿ ಸಮಾಜದ ಗೌರವಕ್ಕೆ ಪಾತ್ರನಾಗುತ್ತಾನೆ.

**ಜಯದೇವಪ್ಪ ಜೈನಕೇರಿ**
ನಂ. ೮೭, ಕುವೆಂಪು ರಸ್ತೆ, ಶಿವಮೊಗ್ಗ - ೫೭೭ ೨೦೧

# ತಾರುಣ್ಯಪೂರ್ಣ ತ್ವಚೆಯ ಹೊಸ ರಹಸ್ಯ.
# ಹೊಸ ಸಂತೂರ್ ವೈಟ್!

ಸಂತೂರ್‌ನ ಹೊಸ ವಿಭಿನ್ನ ರೂಪವಾದ **ಸಂತೂರ್ ವೈಟ್**, ಯುವ ಮಹಿಳೆಗಾಗಿಯೇ ವಿಶೇಷವಾಗಿ ರೂಪಿಸಲ್ಪಟ್ಟಿದೆ. ಚಂದನ ಮತ್ತು ಬಾದಾಮಿಯ ಹಾಲಿನ ಉತ್ತಮಿಕೆಯಿಂದ ಸಮೃದ್ಧಿತಗೊಂಡ ಸಂತೂರ್ ವೈಟ್, ನಿಮ್ಮ ತ್ವಚೆಗೆ ಪೋಷಣೆ ಒದಗಿಸಿ ವರ್ಷಾನುಗಟ್ಟಲೆ ನೀವು ತಾರುಣ್ಯಪೂರ್ಣವಾಗಿ ಶೋಭಿಸುವಂತೆ ಮಾಡುತ್ತದೆ. ಆದ್ದರಿಂದ ಜೀವನದಲ್ಲಿ ನೀವು ಉತ್ಕರ್ಷ ಪಡೆದುಕೊಳ್ಳಿ, ವಯಸ್ಸಿನಲ್ಲಲ್ಲ.




ಹೊಸ




## ಸಂತೂರ್
ಈಗ ಎರಡು ರೂಪಗಳಲ್ಲಿ.

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

**HOSATHU** Kannada Monthly / October 2006 Rs. 12
Registered CPMG / KA / BGE – 7 / 2006-08. Posted at Bangalore PSO on the 28th of every month
WPP No. 14. Licenced to post without prepayment. RNI Regn. No. KARKAN/1999/614.